ಅತ್ಯಂತ ವಿದ್ಯಾಪ್ರದಾನವ ಮಾಡಲು ।
ಚಿತ್ತಜಪಿತನ ಧ್ಯಾನಕೆ ಸಮವುಂಟೆ ? ॥ ೨ ॥

ಶತಕೋಟಿ ಕನ್ಯಾಪ್ರದಾನವ ಮಾಡಲು ।
ಶತಶತ ಸುವರ್ಣ ದಾನವ ಮಾಡಲು ॥
ಮಿತಿಯಿಲ್ಲದೆ ಅನ್ನದಾನವ ಮಾಡಲು ।
ಕ್ಷಿತಿಪತಿಯ ಪಾದಧ್ಯಾನಕೆ ಸಮವುಂಟೆ ? ॥ ೩ ॥

ನಾನಾತೀರ್ಥದಲಿ ಸ್ನಾನವ ಮಾಡಲು ।
ಕಾನನದೊಳಗೆ ತಪವ ಮಾಡಲು ॥
ಜ್ಞಾನಿಯಾಗಿ ಕಾಶೀಯಾತ್ರೆಯ ಮಾಡಲು ।
ಜಾನಕೀಪತಿಯ ಧ್ಯಾನಕೆ ಸಮವುಂಟೆ ? ॥ ೪ ॥

ಧಾರಣೆ ಪಾರಣೆ ಭೀಷ್ಮಪಂಚಕ ಮಾಡಿ ।
ಹರುಷದಿ ವಿಷ್ಣುಪಂಚಕ ಮಾಡಲು ॥
ಪರಮ ಕಠಿಣಚಾಂದ್ರಾಯಣ ಮಾಡಲು ।
ಪುರಂದರವಿಠಲನ ಧ್ಯಾನಕೆ ಸಮವುಂಟೆ ? ॥ ೫ ॥

೭

**ರಾಗ—ಬಿಲಹರಿ** **ತಾಳ—ತ್ರಿವಿಡಿ**

೧ ಹರಿಯೆಂದು ಮನದಲ್ಲಿ ಮರೆದೊಮ್ಮೆ ನೆನೆದರೆ ।
ದುರಿತಪರ್ವತ ಖಂಡಿಪುದು ವಜ್ರದಂತೆ ॥ ಪ ॥

ಮೇರುಸುವರ್ಣದಾನವ ಮಾಡಲು ಪುಣ್ಯ ।
ನೂರು ಕನ್ಯಾದಾನವ ಮಾಡಲು ॥
ಧಾರಿಣಿಯೆಲ್ಲವ ಧಾರೆಯನೆರೆಯಲು ॥
ನಾರಾಯಣಸ್ಮರಣೆಗೆ ಸರಿಬಹುದೆ ? ॥ ೧ ॥

---

೧ ಈ (ಶ I) ಎ. ಓ. ಪ್ರತಿಗಳಿಂದ ಆರಿಸಿಕೊಂಡಿದೆ.

ಹತ್ತುಲಕ್ಷ ಗೋದಾನ ಮಾಡಲು ಪುಣ್ಯ- ।
ವ್ರತಗಳ ಅನುದಿನ ಆಚರಿಸಲು ॥
ಶತಕೋಟಿ ಯಜ್ಞವ ಮಾಡಲು ಲಕ್ಷ್ಮೀ- ।
ಪತಿನಾಮಸ್ಮರಣೆಗೆ ಸರಿಯೆನ್ನಬಹುದೆ ॥ ೨ ॥

ಗಂಗೆ ಕಾಳಿಂದಿ ಗೋದಾವರಿ ಕಾವೇರಿ ।
ತುಂಗಭದ್ರೆಯಲಿ ಸ್ನಾನವ ಮಾಡೆ ॥
ಮಂಗಳಮೂರುತಿ ಪುರಂದರವಿಟ್ಠಲ ।
ರಂಗನ ಸ್ಮರಣೆಗೆ ಸರಿಯೆನ್ನಬಹುದೆ ? ॥ ೩ ॥

೮

ರಾಗ—ಕಮಾಚು ತಾಳ—ರೂಪಕ

೧ ಮರೆಯಬೇಡ ಮನವೆ ನೀನು ।
ಹರಿಯ ಚರಣವ ॥ ಪ ॥

ಯಾಗ-ಯಜ್ಞ ಮಾಡಲೇಕೆ ಯೋಗಿ-ಯತಿಯು ಆಗಲೇಕೆ ।
ನಾಗಶಯನ ನಾರದವಂದ್ಯನ ಕೂಗಿ ಭಜನೆ ಮಾಡು ಮನುಜ ॥ ೧ ॥

ಸತಿಯು ಸುತರು ಹಿತರು ಎಂದು ಮತಿಯು ಕೆಟ್ಟು ತಿರುಗಲೇಕೆ ।
ಗತಿಯು ತಪ್ಪಿ ಹೋಗುವಾಗ ಸತಿಸುತರು ಬಹರೇನೊ ? ॥ ೨ ॥

ಹರಿಯ ಸ್ಮರಣೆ ಮಾತ್ರದಿಂದ ದುರಿತಕುಲಗಳೆಲ್ಲ ನಾಶ ।
ಪರಮಪುರುಷ ಪುರಂದರವಿಠಲ ವರದ ಪದವಿ ಕೊಡುವನೊ ॥ ೩ ॥

---

೧ ಇ. ಎ. ಓ. ಪ್ರತಿಗಳಿಂದ ಆರಿಸಿದೆ.

೯

ರಾಗ—ರೇಗುಪ್ತಿ ತಾಳ—ಅಟ

೧ ಹರಿಕೃಷ್ಣಾಚ್ಯುತ ಗೋವಿಂದ—ವಾಸುದೇವ ।
ನರಹರಿ ಎನಬಾರದೆ ? ॥ ಪ ॥

ಉದಯಕಾಲದಿ ಏಳುತ—ಸಿರಿಯರಸನ ।
ಒದಗಿ ಸೇವೆಯ ಮಾಡುತ ॥
ತದನಂತರ ಭೋಜನದಲಿ ಸ್ಮರಿಸುತ ।
ಮದಗಜಗಮನೆಯೊಳ್ ಸರಸವಾಡುತಲೊಮ್ಮೆ ॥ ೧ ॥

ಸಿರಿ ಬಂದಡಸಿದಾಗ—ಮೆರೆಯದಿರು ।
ಹಿರಿ ಹಿರಿ ಹಿಗ್ಗದಿರು ॥
ನೆರೆ ಬಡತನಕೆ ಜರ್ಜರಿತನಾದೆ ನೀನು ।
ಹರಿನಾಮಸ್ಮರಣೆಯ ಮರೆಯದಿರೆಲೊ ಮನುಜ ॥ ೨ ॥

ದುಷ್ಟರುಪದ್ರದೊಳಾಗಲಿ—ರಣರಂಗದ- ।
ದಿಟ್ಟ ಸಮರದೊಳಾಗಲಿ ॥
ಕಟ್ಟಾರಣ್ಯದೊಳು ಹುಲಿಯು ಬಾಧಿಸುತಿರೆ ।
ಸೃಷ್ಟಿಗೊಡೆಯ ಪುರಂದರವಿಠಲ ಕಾಯ್ವ ॥ ೩ ॥

೧೦

ರಾಗ—ಪಂತುವರಾಳಿ ತಾಳ—ಛಾಪು

೨ ಮಂತ್ರ ದೊರಕಿತು ನಾಮಮಂತ್ರ ದೊರಕಿತು ॥ ಪ ॥
ಯಂತ್ರವಾಹಕ ನಾರಾಯಣನ ।
ಅಂತರಂಗದಿ ಜಪಿಸುವಂಥ ॥ ಅ. ಪ. ॥

---

೧ ಇ ಪ್ರತಿಯಿಂದ ಆರಿಸಿಕೊಂಡಿದೆ.

೨ ಅ (೧೧) ಇ (೧೦) ಓ ಪ್ರತಿಗಳಿಂದ ಆಯ್ದುಕೊಂಡಿದೆ.

ವಿ. ಸೂ. ಓ ಪ್ರತಿಯಲ್ಲಿ ೨–೩ ನುಡಿಗಳಿಲ್ಲ.

ಆಶೆಯಲ್ಲಿ ಬೀಳಲಿಲ್ಲ ಕ್ಲೇಶಪಟ್ಟು ಬಳಲಲಿಲ್ಲ ।
ವಾಸುದೇವ ಕೃಷ್ಣನೆಂಬ ಶಾಶ್ವತದೀ ದಿವ್ಯನಾಮ- ॥ ೧ ॥

ಅರ್ಥ ವೆಚ್ಚವಾಗಲಿಲ್ಲ, ಕಷ್ಟಪಟ್ಟು ಬಳಲಲಿಲ್ಲ ।
ಭಕ್ತಿಯಿಂದ ಭಜಿಸೆ ಮಹಾಮುಕ್ತಿ ಪದವಸೇರುವಂಥ ॥ ೨ ॥

ಹೊದ್ದಿದ ಪಾಪವೆಲ್ಲ ಕಳೆದು, ಉದ್ಧಾರವಾಯಿತು ಕುಲಕೋಟಿಯು ।
ಮುದ್ದುಕೃಷ್ಣನ ದಿವ್ಯನಾಮ ವಜ್ರಕವಚ ಹೃದಯದಲ್ಲಿ ॥ ೩ ॥

ಹಾಸಬಹುದು ಹೊದೆಯಬಹುದು, ಸೂಸಿ ಒಡಲ ತುಂಬಬಹುದು ।
ದಾಸರನ್ನು ಬಿಡದೆ ಪೊರೆವ ಶ್ರೀಶನೆಂಬ ದಿವ್ಯನಾಮ ॥ ೪ ॥

ಒಂದು ಬಾರಿ ಸ್ತುತಿಸಿದರೆ ಒಂದು ಕೋಟಿ ಜಪದ ಫಲವು ।
ಇಂದಿರೇಶ ಶ್ರೀಪುರಂದರವಿಠಲನೆಂಬ ದಿವ್ಯನಾಮ ॥ ೫ ॥

## ೧೧

ರಾಗ—ಮಧ್ಯಮಾವತಿ ತಾಳ—ಆದಿ

೧ ಕೃಷ್ಣಮಂತ್ರವ ಜಪಿಸೊ—ಏ ಮನುಜ ।
ಕೃಷ್ಣಮಂತ್ರವ ಜಪಿಸೊ ॥ ಪ ॥
ವೈಷ್ಣವೋತ್ತಮನಾಗಿ ವಿಷ್ಣುವೆ ಗತಿಯೆಂದು ॥ ಅ. ಪ. ॥

ಜಪತಪಾನುಷ್ಠಾನ ಸ್ನಾನಕ್ಕೆ ಈ ಮಂತ್ರ ।
ಕಪಟಬುದ್ಧಿಗಳನ್ನು ಕಟ್ಟುವ ಮಂತ್ರ ॥
ಉಪದೇಶದಲಿ ಜ್ಞಾನಕೊಟ್ಟು ಸಲಹುವ ಮಂತ್ರ ।
ಸುಪವಿತ್ರ ಮಾಡಿ ಸ್ವರ್ಗ ಸೂರೆಗೊಡುವ ಮಂತ್ರ ॥ ೧ ॥

ಸಕಲ ಸಾಧನಗಳಿಗೆ ಸಾರಭೂತದ ಮಂತ್ರ ।
ನಿಖಿಳ ದೇವರಿಗೆಲ್ಲ ಸಾಕ್ಷಿಭೂತದ ಮಂತ್ರ ॥

೧ ಘ. ಪು (೪) ಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತದೆ.

ಭಕುತಿಯಲಿ ದ್ರೌಪದಿಯು ಭಜಿಸಿದ ಈ ಮಂತ್ರ ।
ಮುಕುತಿಯ ಕೊಟ್ಟು ಜನರ ಪೋಷಿಸುವ ಮಂತ್ರ ॥ ೨ ॥

ಭಾವಿಸಲಣುರೇಣು ಪರಿಪೂರ್ಣವಾದ ಮಂತ್ರ ।
ಜೀವಗಳಿಗೆಲ್ಲ ಸಂಜೀವಮಂತ್ರ ॥
ಪಾವನ ಮಾಡಿ ಪಾಲಿಪುದೀ ಮಂತ್ರ ।
ದೇವ ಪುರಂದರವಿಠಲ ಮಹಾಮಂತ್ರ ॥ ೩ ॥

## ೧೨

ರಾಗ—ಬಿಲಹರಿ  ತಾಳ—ಅಟ

೧ ನರಸಿಂಹ ಮಂತ್ರ ಒಂದೆ ಸಾಕು—ಮಹಾ- ।
ದುರಿತಕೋಟಿಗಳ ಸಂಹರಿಸಿ ಭಾಗ್ಯವನೀವ ॥ ಪ ॥

ಹಸುಳೆ ಪ್ರಹ್ಲಾದನ ತಲೆಗಾಯ್ದುದೀ ಮಂತ್ರ ।
ಅಸುರನೊಡಲ ಬಗೆದ ದಿವ್ಯಮಂತ್ರ ॥
ವಸುಧೆಯೊಳು ದಾನವರ ಅಸುವ ಹೀರಿದ ಮಂತ್ರ ।
ಪಶುಪತಿಗೆ ಪ್ರಿಯವಾದ ಮೂಲಮಂತ್ರ ॥ ೧ ॥

ದಿಟ್ಟ ಧ್ರುವರಾಯಗೆ ಪಟ್ಟಗಟ್ಟಿದ ಮಂತ್ರ ।
ಶಿಷ್ಟ ವಿಭೀಷಣನ ಪೊರೆದ ಮಂತ್ರ ॥
ತುಟ್ಟತುದಿಯೊಳಜಾಮಿಳನ ಸಲಹಿದ ಮಂತ್ರ ।
ಮುಟ್ಟಭಜಿಪರಿಗಿದು ಮೋಕ್ಷಮಂತ್ರ ॥ ೨ ॥

ಹಿಂಡು ಭೂತವ ಕಡಿದು ತುಂಡುಮಾಡುವ ಮಂತ್ರ ।
ಕೊಂಡಾಡೆ ಲೋಕಕುದ್ದಂಡ ಮಂತ್ರ ॥
ಗಂಡುಗಲಿ ಪ್ರಚಂಡ ಹಿಂಡು ದಾನವರ ।
ಗಂಡ ಪುರಂದರವಿಠಲನ ಮಹಾಮಂತ್ರ ॥ ೩ ॥

---

೧ ಇ. ಎ. ಓ. ಝ (೨) ಪ್ರತಿಗಳಿಂದ ಆರಿಸಿದೆ.

## ೧೩

ರಾಗ—ಕಲ್ಯಾಣಿ ತಾಳ—ಆದಿ

೧ ತ್ರುಟಿಗೆ ಕ್ಷಣಕೆ ನೆನೆ ಮನವೇ—ಹರಿಯ ।
ತ್ರುಟಿಗೆ ಕ್ಷಣಕೆ ನೆನೆ ಮನವೆ ‖ ಪ ‖

ತ್ರುಟಿಗೆ ಕ್ಷಣಕೆ ನೆನೆ ಕ್ಷಣಕೆ ಲವಕೆ ನೆನೆ ।
ಘಟಿಗೆ ಘಟ್ಟಿಗೆ ನೆನೆ, ಇರುಳು ಹಗಲು ನೆನೆ ‖ ಅ. ಪ. ‖

ಜಠರದಿ ಜಗತಿಗೆ ಹಿರಿಯ—ಜಗ- ।
ನ್ನಾಟಕ ಮೋಹಸೂತ್ರಧಾರಿಯ ‖
ಪಟು ಹಿರಣ್ಯಾಕ್ಷ ಸಂಹಾರಿಯ ।
ನಿಷ್ಠುರನಾದ ಕಂಸಾರಿಯ ‖ ೧ ‖

ರಣಿತಕಂಕಣನೂಪುರಿಯ—ರು- ।
ಕ್ಮಿಣಿಯನಾಳುವ ದೊಡ್ಡ ದೊರೆಯ ‖
ಗುಣನಿಧಿ ಗೋವರ್ಧನಧಾರಿಯ—ನೀ- ।
ಕರುಣಿಯು ಅವನೆಂದರಿಯ ‖ ೨ ‖

ನವನೀತದಧಿತಸ್ಕರಿಯ—ಈ- ।
ಭವಹರ ಒಡೆಯನೆಂದರಿಯ ‖
ಜವನು ಕೇಳಲು ನಿನ್ನ ಮೊರೆಯ—ಚಿಹಿ ।
ಅವನ ನಾಲಿಗ್ಗೆ ಮುಳ್ಳು ಮುರಿಯ ‖ ೩ ‖

ಮುನಕಭಾಗಿಗೆ ಶ್ರುತಿಯರಿಯ—ದಂಥ- ।
ಘನಪಾಪಿಗಳಿಗವ ದೊರೆಯ ‖
ನೆನೆವರ ಪಾಲಿಪುದ ಮರೆಯ—ಸು- ।
ಪ್ರಾಣೆ ಇರಲಿಸ ನಮ್ಮ ಪೊರೆಯ ‖ ೪ ‖

---

೧ ಇ (೧೯) [illegible] ಸಿಕ್ಕುತ್ತದೆ.

ಸ್ಮರಿಸಲು ಯಮು ನಿನ್ನ ದಾರಿಯ—ಹೋಗ ।
ವರಭಾರತಿಪತಿ ಮರೆಯ ।
ಪುರಂದರವಿಟ್ಠಲ ದೊರೆಯ—ನೆನೆ-
ದಿರೆ ಯಮು ನಿನ್ನನು ಕೊರೆಯ ॥ ೫ ॥

ತ್ರುಟಿಗೆ ಕ್ಷಣಕೆ ನೆನೆ ಮನವೇ—ಹರಿಯ
ತ್ರುಟಿಗೆ ಕ್ಷಣಕೆ ನೆನೆ ಮನವೇ ॥

# ೨ ಭಕ್ತಮಾಹಾತ್ಮ್ಯೆ

### ೧೪

ರಾಗ—ಮುಖಾರಿ                                        ತಾಳ—ಝಂಪೆ

೧ ಹರಿಭಕುತಿಯುಳ್ಳವರ ಶರೀರವೆ ಕುರುಕ್ಷೇತ್ರ—ಇವರು ।
ನರರೆಂದು ಬಗೆವವರೆ ನರಕವಾಸಿಗಳು ॥ ಪ ॥

ಪದುಮಲನ ಧ್ಯಾನಿಸುವ ಹೃದಯ ಕಾಶೀಪುರವು ।
ಮಧುವೈರಿಗೊಲಿದ ಮನ ಮಣಿಕರ್ಣಿಕೆ ॥
ಪದುಮನಾಭನ ಪಾಡಿ ಪೊಗಳುವಾತನ ದಿವ್ಯ ।
ವದನವು ಅಯೋಧ್ಯೆಪುರವಾಗಿ ಇಹುದು ॥ ೧ ॥

ನರಹರಿಯನೀಕ್ಷಿಸುವ ನಯನ ದ್ವಾರಾವತಿಯು ।
ಹರಿಯ ನಿರ್ಮಾಲ್ಯ ವಾಸಿಪ ಮೂಗು ಮಥುರೆ ॥
ಕರುಣಾಕರನ ಕಥೆಯ ಕೇಳ್ವ ಕಿವಿ ಕೇದಾರ ।
ಸಿರಿಧರಗೆ ಎರಗುವಾ ಶಿರವೆ ಬದರಿ ॥ ೨ ॥

ಚಕ್ರಧರಗೆ ಪೋಪ ಚರಣ ಮಾಯಾವತಿ ತ್ರಿ- ।
ವಿಕ್ರಮನ ಪೂಜಿಸುವ ಕರವೆ ಕಂಚಿ ॥
ಅಕ್ರೂರಗೊಲಿದ ಸಿರಿ ಪುರಂದರವಿಟ್ಠಲನ
ಸತ್ಕೃಪೆಯು ಉಳ್ಳವರ ಅಂಗಸಾಯುಜ್ಯವು ॥ ೩ ॥

---

೧ ಅ (೧) ಇ (ಮುದ್ರಿತ) ಮ ೩೬-೩೧ (೭) ರಘು (೫-೧೦) ಇವುಗಳನ್ನು ಹೊಂದಿಸಿ ಬರೆದಿದೆ.

೧೫

ರಾಗ—ಪಂತುವರಾಳಿ ತಾಳ—ಅಟ

೧ ಹರಿದಾಸರಿಗಿನ್ನು ಸರಿಯುಂಟೆ—ನರ- ।
ಹರಿಯ ನಂಬಿದರಿಗೆ ಕೇಡುಂಟೇ ಮನುಜಾ ? ॥ ಪ ॥

ಮಾರಿಯ ಕೈಯಲಿ ನೀರ ಹೊರಿಸುವರು ।
ಘೋರ ಮಸಣಿಯಿಂದ ಕಸ ಬಳಿಸುವರು ॥
ಕ್ರೂರ ಮೃತ್ಯುವಿನ ಕೈ ಭತ್ತ ಕುಟ್ಟಿಸುವರು ।
ಜವನ ಕೈಯಲಿ ಜಂಗುಳಿ ಕಾಯಿಸುವರು ॥ ೧ ॥

ಬೊಮ್ಮ ಬೀರ ಬೇತಾಳ ಜಟ್ಟಿಗರೆಲ್ಲ ।
ಕರ್ಮದ ಕಡಲೊಳು ಮುಳುಗಿರಲು ॥
ಒಮ್ಮೆ ಹರಿದಾಸರ ಪಾದ ಸೋಕಲು ಬೇಗ ।
ಕರ್ಮದ ಕಡಲಿಂದ ಕಡೆಹಾಯಿಸುವರು ॥ ೨ ॥

ಜಕ್ಕಣಿ ಜಲದೇವರು ಮೊದಲಾದ ।
ಭಿಕ್ಕಾರಿ ದೈವವ ಪೂಜಿಸಲು ॥
ಲೋಕನಾಯಕ ಸಿರಿ ಪುರಂದರವಿಠಲನ ।
ಸಾಕಾರವಾದಂಥ ಪರಮ ಭಾಗವತರು ॥ ೩ ॥

೧೬

ರಾಗ—ಭೈರವಿ ತಾಳ—ರೂಪಕ

೨ ಪಾವನನವ ಪಾವನನವ ಪಾವನನವ ಜಗಕೆ ।
ದೇವ ಶ್ರೀಹರಿಯ ಪಾದವು ಸೋಕಿದರೆ ॥ ಪ ॥

---

೧ ಇ. ಖ (೭) ಪ್ರತಿಗಳಿಂದ ಆರಿಸಿದೆ.
೨ ಇ. (೩–೧೦) ಓ ಪ್ರತಿಗಳಿಂದ ಆರಿಸಿಕೊಂಡಿದೆ.

ಹರಿಯ ನೆನೆಯೆ ನಾಲಗೆ ಪಾವನ, ಸಿರಿಮುದ್ರೆಯು ಭುಜಕೆ ಪಾವನ ।
ಉರದಿ ನಾಭಿಗೆ ನಾಮವನಿಡೆ ಪಾವನವೊ ॥
ಕೊರಳೊಳು ಶ್ರೀತುಲಸೀಮಣಿ ನಳಿನಾಕ್ಷವು ಇರೆ ಪಾವನ ।
ಪರಮ ವೈಷ್ಣವರಿಗೆರಗಿದ ಶಿರಪಾವನವೊ ॥ ೧ ॥

ತುಲಸಿ ಹಿಡಿಯೆ ಕೈ ಪಾವನ, ದಲವನಿಡೆ ಕಿವಿ ಪಾವನ ।
ಸ್ಥಲದ ಮೃತ್ತಿಕೆ ಇಡಲು ಆ ಪಣೆ ಪಾವನವೊ ॥
ಬಳಲಿದ ವೃಂದಾವನವನು ಬೆಳಸಿ ಬಂದವ ಪಾವನನು ।
ತುಲಸಿತೀರ್ಥವ ಕೊಂಡಾತನು ಪಾವನನಯ್ಯ ॥ ೨ ॥

ಏಕಾದಶಿಯ ವ್ರತ ಪಾವನ, ಎಲ್ಲವ ತೊರೆದವ ಪಾವನ ।
ನಾಕುಜಾವದಿ ಜಾಗರವಿರೆ ಪಾವನವೊ ॥
ಕಾಕು ನುಡಿಯದೆ ಕಾಮಿತಪ್ರದನೆಂಬ ಶ್ರೀಕಾಂತನ ಪಾದವ ।
ಏಕಾಂತದಿ ನೆನೆವನು ಪಾವನನೊ ॥ ೩ ॥

[ ಕೃತಿರಮಣನ ಕಥೆಯನೊಪ್ಪಿ ] ಕೇಳಿದ ಕಿವಿ ಪಾವನ ।
ಶತವೃಂದಾರಕರ ತಲೆಯ ನೆಲೆ ಪಾವನವೊ ॥
ಮತಿ ಬೇಡಿದ ಅಜಪಾವನ ಯತಿ ಪಾವನ ವೈಷ್ಣವರ ।
ಮತವಿಡಿದೋದಿದ ರಾಮನ ಕಥೆ ಪಾವನವೊ ॥ ೪ ॥

ಸಾಮವೇದ ಪಾವನವು—ಭೂಮಿಜಾಪತಿ ಸೀ ಪಾವನ ।
ನಾಮಧಾರಿಯು ಪಾವನ ನಾರಾಯಣನ ॥
ತಾಮಸವಿಲ್ಲದೆ ಹರಿಸರ್ವೋತ್ತಮನೆಂಬ ।
ಸೀಮೆಯು ಪಾವನ ಪುರಂದರವಿಠಲನ ॥ ೫ ॥

೧೭

ರಾಗ—ಧನ್ಯಾಸಿ ತಾಳ—ಆದಿ

೧ ದಾಸರ ನಿಂದಿಸಬೇಡೆಲೊ ಪ್ರಾಣಿ— ಹರಿ-
ದಾಸರ ನಿಂದಿಸಬೇಡ ॥ ಪ ॥

ಮೋಸವಾಯಿತೊ ಮನದೊಳು ಗಾಢ ।
ಲೇಸಾಗಿ ಇದ ತಿಳಕೊ ಮೂಢ ॥ ಅ. ಪ. ॥

ರಾಮನ ನಿಂದಿಸಿ ರಾವಣ ಕೆಟ್ಟ ।
ತಮ್ಮಗಾಯಿತು ಸ್ಥಿರಪಟ್ಟ ॥
ತಾಮಸದಿಂದಲಿ ಕೌರವ ಕೆಟ್ಟ ।
ಧರ್ಮಗೆ ರಾಜ್ಯವ ಬಿಟ್ಟ ॥ ೧ ॥

ಮನದೊಳಗಿನ ವಿಷಯದ ವಿಷ ಬಿಟ್ಟು ।
ಅನುದಿನ ಹರಿಯ ನೆನೆಯಿರಣ್ಣ ॥
ಸನಕಾದಿವಂದ್ಯನ ಪೂಜಿಸಿದರೆ ನೀವ್ ।
ಘನ ಪದವಿಯ ಕಾಣುವಿರಣ್ಣ ॥ ೨ ॥

ಕನಕದಾಸನು ಕಬ್ಬಲಿಗನು ಎಂದು ।
ಅಣಕಿಸಿ ನುಡಿಬೇಡಿರಣ್ಣ ॥
ಜನರಂತೆ ನರನಲ್ಲ ತುಂಬುರನೀತನು ।
ಜನಕಜೆರಮಣನ ಪಾದಸೇವಕನು ॥ ೩ ॥

ಉಡಿಯ ಒಳಗೆ ಕಿಡಿ ಬಿದ್ದರೆ ಅದು ತಾ ।
ಸುಡದನಕಾ ಬಿಡದಣ್ಣ ॥
ಬಡವನಾಗಿ ಕೆಡುಬುದ್ಧಿಯ ಬಿಟ್ಟು ।
ನಡೆಯ ಕಂಡು ಪಡಕೊಳ್ಳಣ್ಣ ॥ ೪ ॥

---

೧ ಈ ಪ್ರತಿಯಲ್ಲಿ ಮಾತ್ರ ಸಿಕ್ಕುತ್ತದೆ.

ದೇವಕಿಸೆರೆಯನು ಬಿಡಿಸಿದ ದೇವನ ।
ಸೇವಕರು ನರರೆ ನಿಮುಗವರು ॥
ಭಾವಜನಯ್ಯನ ಪದವ ನೆನೆದರೆ ।
ಪಾವನ ಮಾಡುವ ಪುರಂದರವಿಠಲ ॥ ೫ ॥

## ೧೮

### ಸುಳಾದಿ

#### ಧ್ರುವತಾಳ

೧ ಅವರು ನಡೆದದ್ದೆ ರಾಜಪಥ ನಾರಾಯಣ ।
ಅವರು ನುಡಿದದ್ದೆ ವೇದಾರ್ಥ ನಾರಾಯಣ ।
ಅವರು ಮಾಡಿದ್ದೆ ಮರ್ಯಾದೆ ನಾರಾಯಣ ।
ಅವರು ನಿಂತದ್ದೆ ಕ್ಷೇತ್ರವೈ ನಾರಾಯಣ ।
ಅವರು ಮಿಂದದ್ದೆ ಸುರಗಂಗೆ ನಾರಾಯಣ ।
ಅವರು ರಾಜಾಧಿರಾಜರು ಅವರೆ ಕಾಣಿರೊ ।
ಅವರು ರಾಜಪರಮೇಶ್ವರರು ಅವರೆ ಕಾಣಿರೊ ।
ಅವರ ದಾಸ ಜಗದೇಕನಾಥ ।
ಅವರು ನಮ್ಮ ಪುರಂದರವಿಠಲನ ಆಳುಗಳು ಕಾಣಿರೊ ॥ ೧ ॥

#### ಮಟ್ಟೆತಾಳ

ಹಸ್ತಿನಾಪಟ್ಟಣವ ನೇಗಿಲಿಕ್ಕಿದನೊಬ್ಬ ।
ಅಸ್ತಮಿಸಿದ ಇನಮಂಡಲಕೆ ಉದಯವಿತ್ತನೊಬ್ಬ ।
ಪೃಥ್ವಿಯ ಅಂಬಿನಲಿ ಹರಗಿದನೊಬ್ಬ ।
ವಸ್ತು ಪುರಂದರವಿಠಲಾ ನೇನಿತ್ತ ಸಲುಗೆ ಎಂತೊ ! ॥ ೨ ॥

---

೧ ಅ (II) ಪ್ರತಿಯಲ್ಲಿಯ ಪಾಠಾಂತರ ಸ್ಪಷ್ಟವಿದೆ. ೨ (ಮುದ್ರಿತಪ್ರತಿಯಲ್ಲಿ ವಿಕಾರ ತುಂಬಿದೆ.

ಕುರುರಾಯನು ಖಳನನುಜನು ರವಿಜನು ।
ಗುರುಗಾಂಗೇಯರು ಎದುರಿರಲು ।
೨ ಹರಿಸಿ ರಥವ ನಡು ಬೀದಿಯಲ್ಲಿ ಬಹ ।
ಹರಿಯು ತಾನು ಕಂಡನು ಹರುಷದಲಿ ॥ ೧ ॥

ದಾರಿಯಲಿ ಬಹ ಮುರವೈರಿಯು ಕಾಣುತ ।
ಹಾರುತ ಚೀರುತ ಕುಣಿಯುತಲಿ ॥
ವಾರಿಧಾರೆಯನು ನೇತ್ರದಿ ಸುರಿಸುತ ।
ಬಾರಿಬಾರಿಗೆ ಹಿಗ್ಗುವ ಸುಖದಿ ॥ ೨ ॥

ಆಟಕೆ ಲೋಕಗಳೆಲ್ಲಾ ಸೃಜಿಸುವ ।
ನಾಟಕಧರ ತನ್ನ ಲೀಲೆಯಲಿ ॥
ನೀಟಾದವರ ಮನೆಗಳ ಜರೆದು ।
೩ ಕುಟೀರದಲಿ ಬಂದು ಹರಿ ಕುಳಿತ ॥ ೩ ॥

ಅಡಿಗಡಿಗೆ ತನ್ನ ತನುಮನ ಹರಹಿ ।
ಅಡಗೆಡೆಯುತ ಬಲು ಗದ್ಗದದಿ ॥
ನುಡಿಗಳ ತೊದಲಿಸಿ ರೋಮವ ಪುಳಕಿಸಿ ।
ದುಡುದುಡು ಓಡುವ ದಶದಿಶೆಗೆ ॥ ೪ ॥

ಕಂಗಳುದಕದಿ ಪದಂಗಳ ತೊಳೆದು ।
೪ ಗಂಧವ ಪೂಸಿದ ತನುವೊರಸಿ ॥
ಮಂಗಳಮಹಿಮನ ಚರಣಕೆರಗಿ ಪು-
ಷ್ಪಂಗಳಿಂದ ಪೂಜೆಯ ಮಾಡಿದನು ॥ ೫ ॥

---

೨ ಜರಿದು (ಚ) ಹರಿದು (ಓ).

೩ ಕುಟೀರವೆಂಬುದು ಹ್ರಸ್ವವಾಗಿದೆ.

೪ ಗಂಧ–ಪ್ರಾಸಕ್ಕೆ ಕೂಡುವುದಿಲ್ಲ.

ವಿ. ಸೂ. ಆ (II) ಮತ್ತು ಚ ಪ್ರತಿಯಲ್ಲಿ ಏಳು ನುಡಿಗಳಿವೆ.

ನೋಡಿದ ಭಕುತನ ಮನದ ಹವಣಿಕೆಯ ।
ಪಾಡುವ ಪೊಗಳುವ ಹರುಷದಲಿ ॥
ನೀಡಿದ ಕರದಲಿ ಬಿಗಿದಪ್ಪಿದ ಕೊಂ-
ಡಾಡಿದ ಕರುಣದಿ ಜಗದೊಡೆಯ ॥ ೬ ॥

ಕ್ಷೀರವಾರಿಧಿ ಶಯನಗೆ ವಿದುರನು ।
ಕ್ಷೀರವನುಣಬಡಿಸಿದ ನೋಡಾ ॥
ವಾರಿಜನಾಭನು ಕರಸಂಪುಟದಲಿ ।
ಆರೋಗಣೆಸಿದ ಘನತೆಯನು ॥ ೭ ॥

ಒಂದು ಕುಡಿತೆ ಪಾಲು ಹರಿ ತಾ ಸವಿದು ।
ಮುಂದಕೆ ನಡೆಸಿದ ಧರೆಮೇಲೆ ॥
ಇಂದಿರೆಯರಸನ ಚರಿತೆ ವಿಚಿತ್ರವು ।
ಚೆಂದದಿ ಹರಿದುದು ಬೀದಿಯಲಿ ॥ ೮ ॥

ಕರುಣಾಕರ ಸಿರಿಹರಿ ತನ್ನ ಭಕುತರ ।
ಪೊರೆವನು ಅನುದಿನ ಆಯತದಿ ।
ಸಿರಿಯ ಅರಸು ನಮ್ಮ ಪುರಂದರವಿಠಲನ ।
ಶರಣರು ಧನ್ಯರು ಧರೆ ಮೇಲೆ ॥ ೯ ॥

೨೧

ರಾಗ—ಶಂಕರಾಭರಣ ತಾಳ—ಆದಿ

೧ ಎಂಥ ಚೆಲುವಗೆ ಮಗಳನು ಕೊಟ್ಟನು ಗಿರಿರಾಜನು
ನೋಡಮ್ಮಮ್ಮ ।
ಕಂತುಹರಶಿವ ಚೆಲುವನೆನ್ನುತ ಮೆಚ್ಚಿದನೇ ನೋಡಮ್ಮಮ್ಮ ॥ಪ॥

೧ ಆ (VI) ರಘು (ಹ) ಪ್ರತಿಗಳಿಂದ ಆರಿಸಿಕೊಂಡಿದೆ.

ಮನೆಯೆಂಬುದು ಸ್ಮಶಾನವು ನೋಡೇ ಗಜಚರ್ಮಾಂಬರವಮ್ಮಮ್ಮ ।
ಹಣವೊಂದೆಂಬುದು ಕೈಯೊಳಗಿಲ್ಲವು ಕಪ್ಪರವಿದೆ ನೋಡಮ್ಮಮ್ಮ ॥ ೧ ॥

ಮೋರೆಗಳೈದು—ಮೂರು ಕಣ್ಣುಗಳು ವಿಪರೀತವ ನೋಡಮ್ಮಮ್ಮ ।
ಘೋರವಾದ ರುಂಡಮಾಲೆ ಉರಗ ಭೂಷಣವನು ನೋಡಮ್ಮಮ್ಮ ॥ ೨ ॥

ಭೂತ-ಪ್ರೇತ-ಪಿಶಾಚಿಗಳೆಲ್ಲಾ ಪರಿವಾರವು ನೋಡಮ್ಮಮ್ಮ ।
ಈತನ ನಾಮವು ಒಂದೇ ಮಂಗಳಕರವು ಹರನ ನೋಡಮ್ಮಮ್ಮ ॥ ೩ ॥

ತಲೆಯೆಂಬುದು ನೋಡಿದರೆ ಜಡೆಯು—ಹೊಳೆಯುತಿದೆ ನೋಡಮ್ಮಮ್ಮ ।
ಹಲವು ಕಾಲದ ತಪಸಿ ರುದ್ರನ ವೈಬೂದಿಯ ನೋಡಮ್ಮಮ್ಮ ॥ ೪ ॥

ನಂದಿವಾಹನನ ನೀಲಕಂಠನ ನಿರ್ಗುಣನನು ನೋಡಮ್ಮಮ್ಮ ।
ಇಂದಿರೆರಮಣನ ಪುರಂದರವಿಠಲನ ಹೊಂದಿದವನ ನೋಡಮ್ಮಮ್ಮ ॥ ೫ ॥

## ೨೨

ರಾಗ—ಕೇದಾರಗೌಳ ತಾಳ—ಅಟ

೧ ಏನಯ್ಯ ನಿನ್ನ ಸಂಗದ ಪರಿ—।
ಮಾನಿನಿಯ ಮರುಳು ಮಾಡಿ ನೋಡದವಗೆ ॥ ಪ ॥

ಶಿರವ ತೂಗುವಳು, ಚಿತ್ರದ ಪ್ರತಿಮೆಯಂತಿಹಳು ।
ಕರವ ಗಲ್ಲದೊಳಿಟ್ಟು ಕಡುಸುಯ್ವಳು ॥
ಇರು-ಇರುತಲೊಮ್ಮೊಮ್ಮೆ ಎದುರೆದ್ದು ನೋಡುವಳು ।
ಬರವ ಕಾಣದೆ ಕಂದಿ ಕುಂದಿ ಬಡವಾದಳೈ— ॥ ೧ ॥

ಕಂಬನಿಯ ತುಂಬುವಳು ಕರೆವಳು ಪೆಸಗೊಂಡು ।
ಹಂಬಲಿಸುವಳು ಕಂಡ ಕಾಂತೆಯರೊಳು ॥

೧ ಝು (೩–೧೦) ಪ್ರತಿಯೊಂದರಲ್ಲಿಯೇ ಸಿಕ್ಕಿದೆ.

ಬೆಂಬಿಡದೆ ಜಡೆ ಮುಡಿಯ ತೊಡಿಗೆ ಬೀಸಾಡುವಳು ।
ಬಿಂಬವರಿತು ಪೊಗಳುವಳು ನಿನ್ನ ಗುಣಗಣವ ॥ ೨ ॥

ಇನಿತರೊಳೇನಹುದೊ, ನಿನ್ನ ಮೇಲಣ ಸ್ನೇಹ ।
ಘನತಾಪದಿಂದ ಗೋಚರವಾಗಿದೆ ॥
ಅನುತಾಪದಿಂದ ಸಲೆ ಬಳಲಿದ ಮಾನಿನಿಯ ।
ವನಜಾಕ್ಷ ಪುರಂದರವಿಠಲ ಬಂದು ಸಂತಯಿಸೊ ॥ ೩ ॥

## ೨೩

### ಸುಳಾದಿ

#### ಧ್ರುವತಾಳ

೧ ಭಕುತರಿಗಾಗಿ ಬಾಳುವೆಯಯ್ಯ ನೀನು ।
ಭಕುತರಿಗಾಗಿ ಬದುಕುವೆಯಯ್ಯ ನೀನು ।
ಭಕುತರಿಗಾಗಿ ಗಳಿಸುವೆಯಯ್ಯ ನೀನು ।
ಭಕುತರಿಗಾಗಿ ಉಳಿಸುವೆಯಯ್ಯ ನೀನು ।
ಸಕಲೇಶ್ವರ ನಿನಗೊಂದೂ ಕಾರಣವಿಲ್ಲ ।
ಮುಕುತೇಶ್ವರ ನಿನಗೊಂದೂ ಕಥನವಿಲ್ಲ ।
ಭಕುತರಿಗಾಗಿ ನಿನ್ನ ಜೀವನವಯ್ಯ ।
ಭಕುತವತ್ಸಲ ನಮ್ಮ ಪುರಂದರವಿಠಲ ।
ಭಕುತರಿಗಾಗಿ ನಿನ್ನ ಬಾಳುವೆಯಯ್ಯ ॥ ೧ ॥

#### ಮಟ್ಟತಾಳ

ಬೊಮ್ಮನ ಪಡೆದೆ, ಬೊಮ್ಮನ ಪದದಲಿ ನಿಲಿಸಿದೆ ।
ರುದ್ರನ ಪಡೆದೆ, ರುದ್ರನ ಪದದಲಿ ನಿಲಿಸಿದೆ ।

೧. ಇ (ಮುದ್ರಿತ) ಪ್ರತಿಯೊಂದರಲ್ಲಿ ಮಾತ್ರವಿದೆ.

ಇಂದ್ರನ ಪಡೆದೆ, ಇಂದ್ರನ ಪದದಲಿ ನಿಲಿಸಿದೆ ।
ಚಂದ್ರನ ಪಡೆದೆ, ಚಂದ್ರನ ಪದದಲಿ ನಿಲಿಸಿದೆ ।
ಎಲ್ಲ ದೇವರ್ಕಳ ಪಡೆದೆ, ಎಲ್ಲ ದೇವರ್ಕಳ ಪದದಲಿ ನಿಲಿಸಿದೆ ।
ಭಕುತರುಂಡದ್ದೆ ಉಂಬುದು ।
ಭಕುತರುಟ್ಟದ್ದೆ ಉಟ್ಟುದು ।
ಭಕುತರೊಡೆಯ ನೀನು, ಭಕುತರಧೀನ ನೀನು ।
ಭಕುತವತ್ಸಲ ನಮ್ಮ ಪುರಂದರವಿಟ್ಠಲ ।
ಭಕುತರೊಡೆಯ ನೀನು, ಭಕುತವತ್ಸಲ ನೀನು ॥ ೨ ॥

ರೂಪಕ ತಾಳ

ಗಾಳಿ ಬೀಸಲು ಪೊಂದದಂತೆ ನೀನು ।
ಶೀಲಚಕ್ರವಟ್ಟೆ ಭಕುತರ ಕಾಯಿದೆ ।
ಭಕುತವತ್ಸಲ ನಮ್ಮ ಪುರಂದರವಿಟ್ಠಲ ।
ಅಸಿಚಕ್ರವನಟ್ಟಿ ಭಕುತನ ಕಾಯಿದೆ ॥ ೩ ॥

ಝಂಪೆತಾಳ

ಭಕುತರೆಂದರೆ ನಿನ್ನ ತೇಯುತಿಹೆಯಯ್ಯ ।
ಭಕುತರೆಂದರೆ ಅರಗಿನಂತೆ ಕರಗುತಿಹೆಯಯ್ಯ ।
ಭಕುತರಿಚ್ಛೆಯ ನೀನು ನಡೆಸುತಿಹೆಯಯ್ಯ ।
ಭಕುತರವಸರಕೆ ಒದಗುವೆ ಅಯ್ಯ ।
ಭಕುತವತ್ಸಲ ನಮ್ಮ ಪುರಂದರವಿಟ್ಠಲ ।
ಭಕುತರಿಚ್ಛೆಯ ನೀನು ನಡೆಸುತಿಹೆಯಯ್ಯ ॥ ೪ ॥

ತ್ರಿವಿಡೆ ತಾಳ

ಮೇರುಮಂದಾರಾದಿ ಗಿರಿಗುಹೆಗಳಲ್ಲಿ ।
ಸಪುತಾಂಬುಧಿಗಳಲಿ ಸಪುತದ್ವೀಪಗಳಲ್ಲಿ ।
ಮನಸಿಗೆ ಬಂದಂತೆ ಭಕುತರುಂಡದ್ದುಣುವಂತೆ ।
ನಿನ್ನ ಲಲನೆಯೆಂತೊ ಪುರಂದರವಿಠಲ ।
ನಿನ್ನ ಲಲನೆಯೆಂತೊ ? ॥ ೫ ॥

### ಅಟತಾಳ

ಭಕುತರಿಚ್ಛೆಯ ಮಾತ್ರದಲ್ಲಿ, ಇದ್ದುದನು ।
ಕಂಡು ಕೇಳಿ ಉಣಬಲ್ಲೆನಯ್ಯ ನಾನು ।
ಅನವರತ ಅನುಭವಿಸಬಲ್ಲೆನಯ್ಯ ನಾನು ।
ನಮ್ಮ ಪುರಂದರವಿಠಲನ ಶೀಲಸ್ವಭಾವವ ।
ಅನವರತ ಅನುಭವಿಸಬಲ್ಲೆ ನಾನು ॥ ೬ ॥

### ಏಕತಾಳ

ಭಕುತರಿಗಾಗಿ ನಡೆವೆ ನುಡಿವೆ ನೀನು ।
ಭಕುತರಿಗಾಗಿ ಕೊಡುವೆ ಕೊಳ್ಳುವೆ ನೀನು ।
ಭಕುತರಿಗಾಗಿ ಬರುವೆ ಹೋಗುವೆ ನೀನು ।
ಭಕುತರ ಪ್ರಭು ನೀನು ಭಕುತರಧೀನ ನೀನು ।
ಭಕುತವತ್ಸಲ ನಮ್ಮ ಪುರಂದರವಿಠಲ ॥ ೭ ॥

### ಜತೆ

ಬಂಟಬದಿಗನಾದೆ ಬಂಡಿಯ ಬೋವನಾದೆ ।
ಬಂಟರಿಗೆ ಬಂಟನಾದೆ ಪುರಂದರವಿಠಲ ॥

## ೨೪

### ಸುಳಾದಿ

### ಧ್ರುವತಾಳ

೧ ಇದನು ಬಿಟ್ಟು ಇನ್ನಿಲ್ಲೆಂಬ ಮಹಾಬಾಧೆ ಬರಲಿ—ಮತ್ತೆ ।
ಇದನು ಬಿಟ್ಟು ಇನ್ನಿಲ್ಲೆಂಬ ಮಹಾಭೀತಿ ಬರಲಿ—ಮತ್ತೆ ।
ಇದನು ಬಿಟ್ಟು ಇನ್ನಿಲ್ಲೆಂಬ ಮಹಾ ಅಪಾಯ ಬರಲಿ—ಮತ್ತೆ ।
ಅದಕೊಂದು ಇದಕೊಂದು ಯೋಚಿಸಬೇಡಿ ಕಾಣಿರೊ ।
ಪುರಂದರವಿಠಲ ತನ್ನ ನಂಬಿದವರ ಹಿಂದಿಕ್ಕಿಕೊಂಬ ಕಾಣಿರೊ ! ॥೧॥

---

೧ ಜ ೩ ಪ್ರತಿಯಿಂದ ಆರಿಸಿಕೊಂಡಿದೆ.

ಮಟ್ಟ ತಾಳ

ಅಪಾಯ ಕೋಟಿಕೋಟಿಗಳಿಗೆ ಉಪಾಯ ಒಂದೆ ।
ಹರಿದಾಸರು ತೋರಿಸಿಕೊಟ್ಟ ಉಪಾಯ ಒಂದೆ ।
ಅಪಾಯ ಕೋಟಿ-ಕೋಟಿಗಳಿಗೆ ಉಪಾಯ ಒಂದೆ ।
ಪುರಂದರವಿಠಲನೆಂದು ಬಾಯ್ಬಿಟ್ಟು ಕರೆವ
ಉಪಾಯವೊಂದೆ ಕಾಣಿರೊ ॥ ೨ ॥

ತ್ರಿವಿಡೆ ತಾಳ

ಅಜಾಮಿಳನ ಯಮದೂತರು ಎಳೆಯಲು ।
ಆಗಲಲ್ಲಿಗೆ ಬಂದರಚ್ಯುತನ ದೂತರು ।
ಯಮದಂಡವ ಖಂಡಿಸಿ ತುಂಡಿಸಲಾಕ್ಷಣ ।
ಆಗಲಲ್ಲಿಗೆ ಬಂದರಚ್ಯುತನ ದೂತರು ।
ನಾರಾಯಣ ಎಂದು ಚೀರುವ ಧ್ವನಿ ಕೇಳಿ ।
ಆಗಲಲ್ಲಿಗೆ ಬಂದರಚ್ಯುತನ ದೂತರು ।
ಪುರಂದರವಿಠಲ ಕರುಣಿಪನಾಗಿ ॥ ೩ ॥

ಅಟತಾಳ

'ಹಾ ಕೃಷ್ಣ ದ್ವಾರಕಾವಾಸಿ' ಎಂಬುದ ಕೇಳಿ ।
ದ್ರೌಪದಿಯ ಮಾನವ ಕಾಯ್ದ ಬೇಕೆನುತಲಿ ।
ಶ್ರೀಪತಿ ಅಕ್ಷಯವಸ್ತ್ರವರವನಿತ್ತು ।
ದ್ರೌಪದಿಯ ಮಾನವ ಕಾಯ್ದ ಬೇಕೆನುತಲಿ ।
ಆಪತ್ತಿಗೆ ನಂಟ ಪುರಂದರವಿಠಲ ।
ದ್ರೌಪದಿಯಭಿಮಾನ ಕಾಯ್ದನಾತ ॥ ೪ ॥

ಆದಿತಾಳ

ಹರಿ ಹರಿ ಎಂದು ಕರೆವುದೆ ತಡ ।
ಕರೆದಲ್ಲಿಗೆ ಬಾಹ–ಕರೆವಲ್ಲಿಗೆ ಬಾಹ ।
ಸುರ-ನರ-ಉರಗ ಲೋಕದಲ್ಲಿದ್ದರೂ ಸರಿ—ನೀ-

ಕರೆದಲ್ಲಿಗೆ ಬಾಹ—ಕರೆವಲ್ಲಿಗೆ ಬಾಹ ।
ಪುರಂದರವಿಠಲನೆಂದೊಮ್ಮೆ ಕರೆಯಲು ।
ಕರೆದಲ್ಲಿಗೆ ಬಾಹ ॥ ೫ ॥

ಜತೆ

ತನ್ನ ಡಿಂಗರಿಗರ ತಾನೆತ್ತಿಕೊಂಬಲ್ಲಿ ।
ಸನ್ನದ್ಧ ಸರ್ವದಾ ಪುರಂದರವಿಠಲ ॥

## ೨೫

### ಸುಳಾದಿ

#### ಧ್ರುವತಾಳ

೧ ಒಡೆಯ ಹಾವುಗೆ ಮೆಟ್ಟೆ ಹಾವುಗೆಯುವ ನಾನು ।
ಒಡೆಯ ಮೆಲ್ಲಡಿಯಿಡಲು ಕಟ್ಟಿಗೆಯುವ ನಾನು ।
ಒಡೆಯ ತಾಂಬೂಲವ ಉಗುಳುವ ವೇಳೆಯಲಿ ।
ಪಡಿಗ-ಕಾಳಂಜಿಯ ಪಿಡಿವವ ನಾನು ।
ಒಡೆಯನೊಡ್ಡೋಲಗದಿ ಚಿತ್ತೈಸಿರೆ ।
ಪಿಡಿವವ ಛತ್ರ ಚಾಮರ ಕನ್ನಡಿಯ—ನಾನು ।
ಒಡೆಯ ಪುರಂದರವಿಠಲರಾಯನ ।
ಉಗುರು ಬಿಪ್ಪಲ್ಲಿ ಎನ್ನ ಶಿರವ ಕೊಡುವೆ ನಾನು ॥ ೧ ॥

#### ಮಟ್ಟತಾಳ

ಹರಿಯನೋಲೈಸುವೆನೆಂಬಣ್ಣಗಳಿರಾ ಕೇಳಿ ।
ಶರಧಿಯ ಕಟ್ಟಬೇಕು, ಲಂಕೆಯ ಮುತ್ತಬೇಕು ।
ರಾವಣಾದಿಗಳ ಕೂಡ ಇರಿದಾಡುತಿರಬೇಕು ।
ಪುರಂದರವಿಠಲನ ಊಳಿಗ ಘನ—ಶರಧಿಯ ಕಟ್ಟಬೇಕು॥೨॥

೧ ಜ ೨ ಪ್ರತಿಯಿಂದ ಆರಿಸಿಕೊಂಡಿದೆ.

ತ್ರಿವಿಡೆ ತಾಳ

ಚಂದಿರನಿಗೆ ಇಂದು ನಿಂದಿರೆ ತೆರಪಿಲ್ಲ ।
ಸೂರ್ಯನಿಗೆ ಇಂದು ಕುಳ್ಳಿರೆ ಹೊತ್ತಿಲ್ಲ ।
ಇಂದ್ರಾದಿಗಳಿಗೆಲ್ಲ ಹರಿಹರಿ ಎಂದು ತಲೆಯನು ತುರಿಸ
ಹೊತ್ತಿಲ್ಲ ।
ಬೊಮ್ಮಾದಿಗಳಿಗೂ ಒಮ್ಮೆಯೂ ತೆರಹಿಲ್ಲ ।
ಈ ದೇವರನೆಲ್ಲ ಮೆಟ್ಟಿ ಆಳುವ ನಮ್ಮ ಪುರಂದರವಿಠಲ
ಕಟ್ಟಾಳು ಕಾಣಿರೊ ॥ ೩ ॥

ಅಟತಾಳ

ಶ್ರೀಕೃಷ್ಣರಾಯನರಮನೆಯ ಗಾಯಕರಾವು,
ನಟರಾವು, ಬಿಜಾವಂತರಾವು ! ।
ಸೂತ-ಮಾಗಧ-ವಂದಿಗಳಾವು, ಭಟ್ಟರಾವು ।
ಪುರಂದರವಿಠಲನ ಸೇವಕರಾವು, ಭಟರಾವು
ವಿದ್ಯಾವಂತರಾವು ॥ ೪ ॥

ಏಕತಾಳ

ತಿರೆಯಂಜುತಲಿದೆ, ಗಿರಿಯಂಜುತಲಿದೆ ।
ಮರಬಳ್ಳಿಗಳಂಜಿ ಫಲವನೀವುತಲಿವೆ ।
ಸರಿತು-ಸಮುದ್ರಗಳಂಜಿ ಬೆಚ್ಚುತಲಿವೆ ।
ಆ ಸಚರಾಚರವಂಜುತಲಿದೆ ।
ಪುರಂದರವಿಠಲ ನೀನೆಂಥ ಅರಸನೊ ! ॥ ೫ ॥

ಜತೆ

ನಾ ಘನ, ನೀ ಘನ, ತಾ ಘನ ಎನಬೇಡ ।
ಪುರಂದರವಿಠಲನೊಬ್ಬನೆ ಘನ ಘನ ॥

## ೨೬

ರಾಗ—ಭೈರವಿ  ತಾಳ—ಆದಿ

೧ ಮಧುಕರವೃತ್ತಿಯೆನ್ನದು—ಅದು ಬಲು ಚೆನ್ನದು ।
ಪದುಮನಾಭನ ಪಾದ ಪದುಮಮಧುಪವೆಂಬ ॥ ಪ ॥

ಕಾಲಲಿ ಗೆಜ್ಜೆಕಟ್ಟಿ ನೀಲವರ್ಣನ ಗುಣವ ।
ಆಲಾಪಿಸುತ ಬಲು ಓಲಗ ಮಾಡುವಂಥ ॥ ೧ ॥

ರಂಗನಾಥನ ಗುಣ ಹಿಂಗದೆ ಪಾಡುತ ।
ಕಂಗಳಾನಂದದಿಂದ ಸಿಂಗರವ ನೋಡುವಂಥ ॥ ೨ ॥

ಇಂದಿರಾಪತಿ ಶ್ರೀಪುರಂದರವಿಠಲನ ।
ಚೆಂದದಿ ಪಾಡಿ ಆನಂದದಿ ಪೊಗಳುವಂಥ ॥ ೩ ॥

## ೨೭

### ಸುಳಾದಿ

### ಧ್ರುವತಾಳ

೨ ಗರಭವಾಸ-ಗಿರಭವಾಸ ಜನನ-ಗಿನನ ।
ಮರಣ-ಗಿರಣ ಕಾಲ-ಗೀಲ ಕರುಮ-ಗಿರುಮ ।
ದಾರಿ-ಗೀರಿ ದುಃಖ-ಗಿಕ್ಖ ಸಂಚಿತ-ಗಿಂಚಿತ ।
ಪ್ರಾರಬ್ಧ-ಗೀರಬ್ಧ ಆಗಾಮಿ-ಗೀಗಾಮಿ ।
ಬಂಧಕ-ಗಿಂಧಕ ಎಡರು-ಗಿಡರು ।
ಭೀತಿ-ಗೀತಿ ನರಕ-ಗಿರಕ ಯಾತನೆ-ಗೀತನೆ ।
ಪುರಂದರವಿಠಲನವರಿಗುಂಟೆ ?—ಅವರ ।
ತೊಂಡಗಿಂಡರಿಗುಂಟೆ ? ॥ ೧ ॥

೧ ಇ ಎ ಪ್ರತಿಗಳಿಂದ ಆರಿಸಿದೆ.
೨ ಜ ೨ ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.
ವಿ. ಸೂ.—ನಾಲ್ಕು ಮತ್ತು ಐದನೆಯ ನುಡಿಗಳಲ್ಲಿ ಅರ್ಥಸ್ಪಷ್ಟತೆಯಿಲ್ಲ.

ಮಟ್ಟೆ ತಾಳ

ಹರಿಯ ಅಭಿಮುಖರ ಬಡತನ-ಗಿಡತನ ।
ಹರಿಯ ಅನಭಿಮುಖರ ದೊಡ್ಡಿತೆ ದೊರೆತನ-ಗಿರಿತನ ।
ಸರಿಯೆನಬಹುದೆ ? ಪ್ರತಿಯೆನಬಹುದೆ ? ಈ- ।
ಸುರತರುವಿನ ಮೊಳಕೆ ಎಲವದ ಮರಕೆ ।
ಸರಿಯೆನಬಹುದೆ ? ಪ್ರತಿಯೆನಬಹುದೆ ?
ಪುರಂದರವಿಠಲನ ಆಳುಗಳಿಗೆ ನೋಡಾ ।
ಸ್ವರ್ಗ ಮರ್ತ್ಯ ಪಾತಾಳ ಲೋಕದಲಿ ।
ಸರಿಯುಂಟೆ ? ಪ್ರತಿಯುಂಟೆ ? ‖ ೨ ‖

ಝಂಪೆತಾಳ

ಅಲರು ಮೋಹಿದಡೇನು, ಅಲಗು ಮೋಹಿದಡೇನು ।
ಜಲರುಹಾಕ್ಷನ ಪಾದಜಲರುಹಕ್ಕಾಗಿ ಮುಳುಗಿ ।
ಛಲಿಸದಿದ್ದರೆ ನಿಮ್ಮ ಚಿತ್ತ ಒಂದೆ ಅಯ್ಯ ।
ಗಿರಿರಮಣ ಪುರಂದರವಿಠಲರಾಯ ।
ಹಾವುಗೆಯಾಳರ ತಲೆಗೆ ಸಂದಿದೆ, ಸಂದೇಹವಿಲ್ಲ ।
ಛಲಿಸದಿದ್ದರೆ ನಿಮ್ಮ ಚಿತ್ತ ಅಯ್ಯ ! ‖ ೩ ‖

ತ್ರಿಪುಡೆ ತಾಳ

…………

ಅಡಗಿ ನೋಡಿಕೊಂಡು ಕೂಡಿಕೊಂಬನು ತನ್ನ ಕಪಿಲೆಯೆಂದು।
ಕೂಡಿಕೊಂಬನು ತನ್ನ ಹಿಂಡಿನೊಳಗೆ ।
ಒಡೆಯರೊಡೆಯ ನಮ್ಮ ಪುರಂದರವಿಠಲ ।
ಕೂಡಿಕೊಂಬನು ‖ ೪ ‖

ಏಕತಾಳ

ಅರಳನ್ನರಳುವ ಕೈಯ ನಾರಾಯಣನಾಳ್ಗಳು ।
ಇವರುಗಳಳವಲ್ಲಹೆ ಆಯ್ಯ ।
ನಾರಾಯಣ ಪುರಂದರವಿಠಲರಾಯನಲ್ಲದೆ ।
ನಾರಾಯಣನಾಳ್ಗಳ ‖ ೫ ‖

ಜತೆ

ಪುರಂದರವಿಠಲಗೆ ಆತನ ಆಳುಗಳಿಗೆ ।
ಶರಣು ಶರಣೆಂದು ಬದುಕುವೆ ನಾ ॥

## ೨೮

ಉಗಾಭೋಗ

೧ ಕೋಳಿಗೆ ಹೊನ್ನ ಪಂಜರವು ಇನ್ನೇಕೆ ।
ಜೋಳಿಗೆ ಜಾಳಿಗೆದಂಡೆ ಇನ್ನೇಕೆ ।
ಮಾಳಿಗೆಯ ಮನೆಯಿನ್ನು ಡೊಂಬಗೇಕೆ ।
ಆಳು ಇಲ್ಲದೆ ಅರಸುತನವೇಕೆ ।
ನಮ್ಮ ಪುರಂದರವಿಠಲನ ಊಳಿಗಕ್ಕಾಗದವನ ।
ಬಾಳುವೆ ಇನ್ನೇಕೆ ? ॥

## ೨೯

೨ ಮರವಿದ್ದರೆ ಫಲವೇನು ನೆರಳಿಲ್ಲದನಕ ।
ಒರತೆ ಇದ್ದರೆ ಫಲವೇನು ಜಲವಿಲ್ಲದನಕ ।
ಧನವಿದ್ದರೆ ಫಲವೇನು ಮನವಿಲ್ಲದನಕ ।
ಏನು ಇದ್ದೊಡೇನು ಜ್ಞಾನವಿಲ್ಲದನಕ ।
ತನುವಿದ್ದರೆ ಫಲವೇನು ಪುರಂದರವಿಠಲನ
ಊಳಿಗ ಮಾಡದನಕ ॥

---

೧ ಅ (II) ಇ (೧೩) ಮ (ಅ) ಪ್ರತಿಗಳಿಂದ ಆರಿಸಿಕೊಂಡಿದೆ.

೨ ಅ (II) ಎ ಪ್ರತಿಗಳಿಂದ ಆರಿಸಿಕೊಂಡಿದೆ.

## ೩೦

೧ ಒಡೆಯನುಳ್ಳ ತೊತ್ತಿಗೇತರ ಚಿಂತೆ ?
ಎನ್ನೊಡೆಯ ದ್ವಾರಕಿವಾಸ ಎಂಬ ಛತ್ರವಿರೆ
ಇಂದಿಗೆಂಬ ಚಿಂತೆ ನಾಳೆಗೆಂಬ ಚಿಂತೆ ।
ನಾಡಿದಿಗೆಂಬ ಚಿಂತೆ ತೊತ್ತಿಗೇತಕಯ್ಯ ? ।
ಅಡಿಗಡಿಗೆ ಎಮ್ಮನೋವ ಕಾವ ಚಿಂತೆಯ ।
ಒಡೆಯ ಪುರಂದರವಿಠಲ ನೀಸಿರುತಿರೆ ॥

## ೩೧

೨ ಹರಿಶರಣರು ಎನ್ನ ಮನೆಗೆ ಬಂದರೆ ।
ಮನೆ ಪಾವನ್ನವಪ್ಪುದು ।
ಹರಿಶರಣರು ಎನ್ನಕೂಡೆ ಮಾತನಾಡಿದರೆ
ತನುಪಾಪ ಹೋಹುದು ।
ಮನೆಯೊಳುಂಡರೆ ಎನ್ನ ಇಪ್ಪತ್ತೊಂದು ಕುಲ
ಪಾವನ್ನವಪ್ಪುದು ।
ಹರಿಶರಣರೆನಗೆ ಗತಿ, ಹರಿಶರಣರೆನಗೆ ದೆಸೆ ।
ಎನ್ನ ಗದುಗಿನ ವೀರನಾರಾಯಣ ಪುರಂದರವಿಠಲ ॥

## ೩೨

೩ ರಾವಣನು ರಥವೇರಿ ರಣಕೆ ಬಂದಿರಲಾಗಿ ।
ನೀವು ಪಾದಚಾರಿಯಾಗಿ ಭೂಮಿಯಲ್ಲಿರಲು ।

---

೧ ಇ (೧೩) ಆ (VI) ಪ್ರತಿಗಳನ್ನು ಆಧರಿಸಿ ಬರೆದಿದೆ.
೨ ಇ (೧೩) ಪ್ರತಿಯಿಂದ ಆರಿಸಿದೆ.
೩ ಆ (II–VI) ಪ್ರತಿಗಳಿಂದ ಆರಿಸಿಕೊಂಡಿದೆ.

ನಮ್ಮ ಹನುಮಂತನು ನಿಮ್ಮನು ಕಂಡು |
ಚಾಲ್ವರಿದು ಬೊಬ್ಬಿರಿದು ಕುಣಿಕುಣಿದಾಡಿ |
ಸುಖ ಸೂರೆಮಾಡಿ ಎತ್ತಿರಲು |
ನಮ್ಮ ಹಿರಿಯರು ನಿಮ್ಮ ವೇಳೆಗೊದಗಿರಲಾಗಿ |
ನಮ್ಮ ನೀ ಮರೆಯಲಾಗದು ಪುರಂದರವಿಠಲ ||

೩೩

೧ ಒಂದು ಕಾಲದಲ್ಲಿ ಆನೆ ಕುದುರೆ ಏರಿಸುವೆ |
ಒಂದು ಕಾಲದಲ್ಲಿ ಬರಿಗಾಲಿಂದ ನಡೆಸುವೆ |
ಒಂದು ಕಾಲದಲ್ಲಿ ಅಮೃತಾನ್ನವನುಣಿಸುವೆ |
ಒಂದು ಕಾಲದಲ್ಲಿ ಉಪವಾಸವಿರಿಸುವೆ |
ನಿನ್ನಳವ ನೀನೆ ಬಲ್ಲೆ, ನಾನೇನ ಬಲ್ಲೆನಯ್ಯ |
ಪನ್ನಂಗಶಯನ ಪುರಂದರವಿಟ್ಠಲ !! |

೩೪

೨ ಅಂದು ಬಾಹೋದು ನಮಗಿಂದೆ ಬರಲಿ |
ಇಂದೆ ಬಾಹೋದು ನಮಗೀಗಲೆ ಬರಲಿ |
ಈಗ ಬಾಹೋದು ನಮಗೀಕ್ಷಣ ಬರಲಿ |
ಪುರಂದರವಿಠಲನ ದಯ ನಮಗಿರಲಿ ! || ೧ ||

೧ ಇ (೧೪) ಎ. ಓ ಪ್ರತಿಗಳಿಂದ ಆರಿಸಿದೆ.

೨ ಅ (II) ಪ್ರತಿಯಲ್ಲಿರುವಂತೆ ತಿದ್ದಿದೆ.

# ೩ ಮತಮಾಹಾತ್ಮ್ಯ

ರಾಗ—ನಾದನಾಮಕ್ರಿಯೆ ತಾಳ—ಆದಿ

## ೩೫

೧ ಮಧ್ವಮತದ ಸಿದ್ಧಾಂತದ ಪದ್ಧತಿ ।
ಬಿಡಬೇಡಿ ಬಿಡಬೇಡಿ ॥ ಪ ॥

ಹರಿ ಸರ್ವೋತ್ತಮನಹುದೆಂಬ ಜ್ಞಾನವ ।
ತಾರತಮ್ಯದಲಿ ತಿಳಿವ ಮಾರ್ಗವಿದು ॥ ೧ ॥

ಘೋರ ಯಮನ ಬಾಧೆ ದೂರಕೆ ಮಾಡಿ ಮು- ।
ರಾರಿಯ ಚರಣವ ಸೇರುವ ಮಾರ್ಗವು ॥ ೨ ॥

ಭಾರತೀಶ ಮುಖ್ಯಪ್ರಾಣಾಂತರ್ಗತ ।
ನೀರಜಾಕ್ಷ ನಮ್ಮ ಪುರಂದರವಿಠಲನ ॥ ೩ ॥

## ೩೬

ರಾಗ—ಮಾರವಿ ತಾಳ—ಅಟ

೨ ಮಧ್ವಮತಕಿನ್ನು ಸರಿಯುಂಟೆ—ಪ್ರ- ।
ಸಿದ್ಧ ವೈಕುಂಠಕಿಂತಧಿಕ ಮತ್ತುಂಟೆ ? ॥ ಪ ॥

ವೃಕ್ಷದೊಳಗೆ ತುಳಸಿವೃಕ್ಷಕಧಿಕವಿಲ್ಲ ।
ಪಕ್ಷಿಯೊಳಗೆ ಗರುಡಪಕ್ಷಿಗಿಂತ ಮಿಗಿಲಿಲ್ಲ ॥
ದಕ್ಷ ಹನುಮಂತನಂತೆ ಲೋಕದೊಳು ಬಂಟರಿಲ್ಲ ।

---

೧ ನ ಮತ್ತು ಮ ಪ್ರತಿಗಳಿಂದ ಆರಿಸಿಕೊಂಡಿದೆ.

೨ ಆ (II) ಝ (೫–೧೦) ಪ್ರತಿಗಳಿಂದ ಆರಿಸಿದೆ.

ಲಕ್ಷ್ಮಿಗೆ ಸರಿಯಾದ ಸ್ತ್ರೀಯರಿಲ್ಲ—ನೀ ಕೇಳೊ ।
ಪಕ್ಷಿವಾಹನನೆನಿಪ ದೇವ ತಾ ಬಲ್ಲ ॥ ೧ ॥

ಸಕಲ ಮಣಿಗಳಲಿ ಚಿಂತಾಮಣಿಗೆ ಸರಿಯಿಲ್ಲ ।
ಮಿಕ್ಕ ರತ್ನದೊಳಗೆ ಮಾಣಿಕಕೆ ಮಿಗಿಲಿಲ್ಲ ॥
ಭಕುತರೊಳಗೆಲ್ಲ ಚಂದ್ರಶೇಖರಗೆ ಸರಿಯಿಲ್ಲ ।
ಮುಕುತಿಸುಖಗಳಿಗೆಣೆಯಿಲ್ಲ—ನೀ ಕೇಳೊ ।
ಅಖಿಳ ಬ್ರಹ್ಮಾಂಡನಾಯಕ ತಾ ಬಲ್ಲ ॥ ೨ ॥

ಪ್ರಥಮಯುಗದಲಿ ಹನುಮ, ದ್ವಿತಿಯ ಯುಗದಲಿ ಭೀಮ ।
ತ್ರಿತಿಯ ಯುಗದಲಿ ಮಧ್ವಾಚಾರ್ಯರೆಂದೆನಿಸಿ ॥
ಸತುಶಾಸ್ತ್ರಕಿದಿರಿಲ್ಲ ಅಮೃತಕಿಂತಧಿಕವಿಲ್ಲ ।
ರತಿಪತಿಗಿಂತ ಚೆಲುವರಿಲ್ಲ—ನೀ ಕೇಳೊ ।
ಕಥೆಯನು ಪುರಂದರವಿಠಲ ತಾ ಬಲ್ಲ ॥ ೩ ॥

## ೩೭

ರಾಗ—ರೇಗುಪ್ತಿ ತಾಳ—ಅಟ

[೧] ಮತದೊಳಗೆ ಒಳ್ಳೆಮತ ಮಧ್ವಮತವು—ರಘು- ।
ಪತಿಪೂಜಾವಿಧಾನಕೆ ಪಾವನಮತವು ॥ ಪ ॥

ನಾರಾಯಣನ ನಾಮ ನಂಬಿದ ಮತ ವೇದ- ।
ಪಾರಾಯಣಕೆ ಅನುಕೂಲ ಮತವು ॥
ತಾರತಮ್ಯದಿ ಉದ್ಧರಿಸಿ ಶ್ರುತಿಗಳನೊರೆದ ।
ಧಾರಿಣಿಸುರರ ಸಂತೋಷದ ಮತವು ॥ ೧ ॥

ಅಕಲಂಕ ಶ್ರೀಹರಿಗೆ ವಜ್ರಾಂಕಿತ ಮತವು ।
ಸಕಲ ದೇಶಕೆ ಸಮ್ಮತವಾದ ಮತವು ॥

೧ ಗ (೪) ಪ್ರತಿಯಿಂದ ತಿದ್ದಿಕೊಂಡಿದೆ.

ಅಕುಟಿಲ ಶುಕ-ಸನಕಾದಿ ಮುನೀಂದ್ರರ ।
ನಿಖಿಳಕ್ರಿಯ ಪದವೀವ ನಿರ್ಮಲಮತವು ॥ ೨ ॥

ಸರಸಸದ್ಗುಣ ಸತ್ಯಸಾತ್ತ್ವಿಕ ಮತವಿದು ।
ಗುರುಶಿಷ್ಯರಿಗೆ ಅನುಕೂಲ ಮತವು ॥
ಪರಮತ ಖಂಡಿಸಿ ಪಂಡಿತರು ಪೇಳಿದ ।
ಪುರಂದರವಿಠಲನ ಮತವೆ ಹನುಮನ ಮತವು ॥ ೩ ॥

---

# ೨ ದೀಕ್ಷಾಗುರುಮಾಹಾತ್ಮ್ಯ

೩೮

**ರಾಗ— ನಾದನಾಮಕ್ರಿಯ** **ತಾಳ— ಆದಿ**

೧ ಗುರುವಿನ ಒಲುಮೆಯು ಆಗುವತನಕ ।
ದೊರೆಯದಣ್ಣ ಮುಕುತಿ ॥ ಪ ॥

ಪರಿಪರಿಶಾಸ್ತ್ರವನೇಕವನೋದಿ ।
ವ್ಯರ್ಥವಾಯಿತು ಭಕುತಿ ॥ ಅ. ಪ ॥

ಆರುಶಾಸ್ತ್ರಗಳನೋದಿದರೇನು ।
ಮೂರಾರು ಪುರಾಣವ ಮುಗಿಸಿದರೇನು ॥
ಸಾರಿ ಸಜ್ಜನರ ಸಂಗವ ಮಾಡದೆ ।
ಧೀರನಾಗಿ ತಾ ಮೆರೆದರೇನು ? ॥ ೧ ॥

ಕೊರಳೊಳು ಮಾಲೆಯ ಧರಿಸಿದರೇನು ।
ಕರದಲಿ ಜಪಮಣಿ ಎಣಿಸಿದರೇನು ॥
ಮರುಳನಂತೆ ತಾ ಶರೀರಕೆ ಬೂದಿಯ ।
ಒರಸಿಕೊಂಡು ತಾ ತಿರುಗಿದರೇನು ? ॥ ೨ ॥

ನಾರಿಯರ ಸಂಗವ ಅಳಿದರೇನು ।
ಶರೀರಕೆ ದುಃಖವ ಪಡಿಸಿದರೇನು ॥
ಮಾರನಯ್ಯ ಶ್ರೀಪುರಂದರವಿಠಲನ ।
ಮರೆಯದೆ ಮನದೊಳು ಬೆರೆಯುವ ತನಕ ॥ ೩ ॥

---

೧ ಅ ([illegible]) ರಘು (೧೨-೩) ಪ್ರತಿಗಳಿಂದ ತೆಗೆದುಕೊಂಡಿದೆ.

೩೯

ರಾಗ—ಶಂಕರಾಭರಣ ತಾಳ—ರೂಪಕ

೧ ಇಂದಿನ ದಿನ ಸುದಿನವಾಯಿತು ‖ ಪ ‖

ಇಂದಿರೇಶ ಮೂಲರಾಮಚಂದ್ರನ ಪದಕಮಲಗಳ—ಸು- ।
ರೇಂದ್ರತೀರ್ಥಮುನಿಯು ತೋರಲು ‖ ಅ. ಪ ‖

ಈತನ ಪದಕಮಲಗಳ ವಿಧಾತ ತನ್ನ ಭವನದೊಳಗೆ ।
ಸೀತೆಯ ಸಹ ಪೂಜಿಸಿ ಇಕ್ಷ್ವಾಕು ನೃಪನಿಗಿತ್ತನು ‖
ಆತನನ್ವಯನೃಪರೆಲ್ಲರು ಪ್ರೀತಿಯಿಂದಲಿ ಭಜಿಸಿ ರಘು- ।
ನಾಥ ವೇದಗರ್ಭಗಿತ್ತ ಮೂರ್ತಿಯ ಪದಕಮಲ ಕಂಡೆ ‖ ೧ ‖

ಗಜಪತಿ ಭಾಂಡಾರದಲ್ಲಿ ಅಜಕರಕಮಲಾರ್ಚಿತ ಭೂ- ।
ಮಿಜೆ ಸಹಿತದಿ ರಾಮನಿರಲು ನಿಜಜ್ಞಾನದಿ ತಿಳಿದು ಬೇಗ ‖
ದ್ವಿಜವರಗುರುವೆನಿಸುತಿಪ್ಪ ಸುಜನವಂತ ನರಹರಿಮುನಿ ।
ರಜನಿಯಲ್ಲಿ ತಂದ ಸುಲೋಹಜಮಯ ಪ್ರತಿಮೆಯನೆ ಕಂಡು ‖ ೨ ‖

ಅಂದವುಳ್ಳ ಮೂಲರಾಮಚಂದ್ರನ ಪದಕಮಲಗಳನು ।
ವೃಂದಾರಕವೃಂದವಂದ್ಯನೆಂದೆನಿಸುವ ಪವನನಾ ‖
ನಂದನಗುರು ಶ್ರೀಮದಾನಂದತೀರ್ಥರರ್ಚಿಸಿ ನಿಜ ।
ಅಂದದನ್ವಯದೊಳಿಟ್ಟ ಪುರಂದರವಿಟ್ಠಲನ ಕಂಡು ‖ ೩ ‖

೪೦

ರಾಗ—ಬೇಗಡೆ ತಾಳ—ಆದಿ

೧ ವನಿತೆ ನೀ ತೋರಿಸೆ ಹನುಮನ ಬೇಗ ।
ತನು-ಮನ-ಧನವನು ನಿನಗೀವೆನೀಗ ‖ ಪ ‖

---

೧ ಇ (೧೦) ಪ್ರತಿಯೊಂದರಲ್ಲಿಯೇ ಇದೆ.
೧ ಖ (೧) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಆತುರದಿಂದಲಿ ಉದಧಿಹಾರಿದವನ ।
ಪ್ರೀತಿಯಲಿ ರಾಮನ ಮುದ್ರೆಯಿತ್ತವನ ॥
ಘಾತಕರನ್ನು ಮುರಿದಟ್ಟಿದವನ—ಸತಿ- ।
ಸೀತೆಯ ಪತಿ ರಘುನಾಥಗರ್ಪಿಸಿದನ ॥ ೧ ॥

ಪಾಂಡುನಂದನನಿಗೆ ಅನುಜನಾಗಿಹನ ।
ಪುಂಡರೀಕಾಕ್ಷನ ಚರಣಸೇವಿಪನ ॥
ಪುಂಡ ಕೌರವಶಿರವ ಚೆಂಡನಾಡಿದನ ।
೧ × × × ॥ ೨ ॥

ಎರಡು ಮೂರಾರೊಂದು ಕುಮತ ಖಂಡಿಸಿದನ ।
ಭರದಿ ಮಧ್ವಮತ ಉದ್ಧರಿಸಿದನ ॥
ಧರೆಯೊಳಧಿಕ ಶ್ರೀಹರಿಯಭಜಕನ ।
ವರದ ಶ್ರೀಪುರಂದರವಿಠಲರಾಯನ ॥ ೩ ॥

---

೧ ಹಸ್ತಪ್ರತಿಯಲ್ಲಿ ನಾಲ್ಕನೆಯ ಚರಣ ಬಿಟ್ಟುಹೋಗಿದೆ.

## ೪೧

ರಾಗ—ಧನ್ಯಾಸಿ ತಾಳ—ಅಟ

೧ ತುಂಗೆ ಮಂಗಳತರಂಗೆ—ಹರಿಸರ್ವಾಂಗೇ ।
ಜಯಜಯ ಜಯತು ತುಂಗೆ ॥ ಪ ॥

ಆದಿಯಲೊಬ್ಬ ದೈತ್ಯ ಮೇದಿನಿಯ ಕದ್ದೊಯ್ದು ।
ಸಾಧಿಸಿ ರಸಾತಳದಲ್ಲಿರಿಸೆ ॥
ಭೇದಿಸಿದವನ ನಾಸಿಕದಲ್ಲಿ ಪುಟ್ಟಿದೆ ।
ಆದಿವರಾಹನ ದಾಡೆಯಲಿ ಬಂದೆ ದೇವಿ ॥ ೧ ॥

ಜಲವೆಲ್ಲ ಹರಿಮಯ, ಶಿಲೆಯೆಲ್ಲ ಶಿವಮಯ ।
ಮಳಲುಮಿಟ್ಟೆಗಳೆಲ್ಲ ಮುನಿಮಯವು ॥
ಬೆಳೆದ ದರ್ಭೆಗಳು ಸಾಕ್ಷಾತು ಬ್ರಹ್ಮಮಯ ।
ನಳಿನನಾಳವು ಸರ್ವ ವಿಷ್ಣುಮಯ ॥ ೨ ॥

ಇದೆ ವೃಂದಾವನ, ಇದೆ ಕ್ಷೀರಾಂಬುಧಿ ।
ಇದೆ ವೈಕುಂಠಕೆ ಸರಿಮಿಗಿಲೆನಿಸಿದೆ ॥
ಇದೆ ಬದರಿಕಾಶ್ರಮ, ಇದೆ ವಾರಣಾಸಿಗೆ,
ಅಧಿಕವೆಂದೆನಿಸಿದೆ ದೇವಿ ತುಂಗೆ ॥ ೩ ॥

ಧರೆಗೆ ದಕ್ಷಿಣವಾರಣಾಸಿಯೆಂದೆನಿಸಿದೆ ।
ಪರಮಪವಿತ್ರ ಪಾವನ ಚರಿತ್ರೆಯು ನಿನ್ನ ॥
ಸ್ಮರಣೆಮಾತ್ರದಿ ಕೋಟಿಜನ್ಮದಘವನಳಿವ ।
ಪರಮಸಾಯುಜ್ಯದ ಫಲವೀವ ದೇವಿ ॥ ೪ ॥

---

೧ ಇ (೧೦) ಮತ್ತು ಓ ಪ್ರತಿಗಳಿಂದ ಆರಿಸಿಕೊಂಡಿದೆ.

ಪರಮಭಕ್ತ ಪ್ರಹ್ಲಾದಗೊಲಿದು ಬಂದ ।
ಪರಮ ನರಸಿಂಹಕ್ಷೇತ್ರವೆಂದೆನಿಸಿ ಮೆರೆದೆ ॥
ಧರೆಯೊಳಧಿಕವಾದ ಕೂಡಲಿಪುರದಲಿ ।
ವರದ ಪುರಂದರವಿಠಲನಿರಲು ಬಂದೆ ॥ ೫ ॥

## ೪೨

ರಾಗ—ಬಿಲಹರಿ ತಾಳ—ಅಟ

೧ ನೋಡುವ ಬನ್ನಿರಯ್ಯ ॥ ಪ ॥

ಕಾವೇರಿಯ ಭವಹಾರಿಯ ।
ಮುಕ್ತಿಕಾರಿಯ ನೋಡುವ ಬನ್ನಿರಯ್ಯ ॥ ಅ. ಪ ॥

ಮಾತೆಯ ಸುತಜನಜಾತೆಯ ಹರಿಮನಃ ।
ಪ್ರೀತೆಯ ಭುವನವಿಖ್ಯಾತೆಯ ॥
ನೀತಿಯುನ್ನತಕರದಾತೆಯ ಶಿವನ ಸಂ- ।
ಭೂತೆಯ ನೋಡುವ ಬನ್ನಿರಯ್ಯ ॥ ೧ ॥

೨ ಬಂದು ಸಕಲ ಮುನಿವೃಂದ ನೆರೆಯೆ ಮಾಯ- ।
ಲಂದು ನಾರದಮುನಿ ಪೊಗಳುತಿರೆ ॥
ಸಂದೇಹವಿಲ್ಲ ನೋಡಿದಡೆ ಮುಕುತಿಯಹು- ।
ದೆಂದರೆ ಮುಳುಗಲದೇತಕಯ್ಯ ? ॥ ೨ ॥

---

೧ ಕ. ವಿ. ವಿ. ತಾಳೆಗರಿ ಪ್ರತಿ ೨೨೯೩; ಕ್ರಿ. ಶ. ೧೬೭೦. ಇದರಲ್ಲಿ ಹಾಡು ಶುದ್ಧರೂಪದಲ್ಲಿದೆ. ಅ. ಎ. ಓ. ಪ್ರತಿಗಳಲ್ಲಿ ವಿಕಾರಗೊಂಡಿದೆ.

೨ ಮುಚ್ಯಂತಿ ಮುನಯಃ ಸರ್ವೇ । ಭವತ್ಯೇತಾಗತಿರ್ಮಮ ।
ಅಂಬ ತ್ವದ್ದರ್ಶನಾನ್ಮುಕ್ತಿಃ ನಜಾನೇ ಸ್ನಾನಜಂ ಫಲಂ ॥

೩ ಅರ್ಕಚಂದ್ರವಹ್ನಿಪುಷ್ಕರದೊಳು ಮಿಂದು ।
ಚಕ್ರತೀರ್ಥದೊಳಗೋಲಾಡಿ ॥
ಗಕ್ಕನೆ ಸದ್ಗತಿಯಹುದೆಂದು ಮನೆಗಳ ।
ಕಕ್ಕುಲತೆಯ ಬಿಟ್ಟು ನಡೆಯಿರಯ್ಯ ॥ ೩ ॥

೪ ಕಂಡರೆ ಸಕಲ ಪಾತಕ ಪರಿಹಾರ, ಪಡೆ- ।
ದುಂಡರೆ ದುರಿತ–ದುರ್ಜನದೂರವು ॥
ಕೊಂಡಾಡಿದವರಿಗನಂತ ಫಲವು ನೀ- ।
ರುಂಡರೆ ಭವಬಂಧ ಮೋಕ್ಷವಯ್ಯ ॥ ೪ ॥

೫ ಗಂಗೆ-ಯಮುನೆಗೆ ಹೋದಡೆ ಮೂರೈದುದಿ- ।
ನಂಗಳಿಗಹುದು ಮುಕುತಿಯೆಂದಡೆ ॥
ಹಿಂಗದೆ ಕಾವೇರಿಯ ನೋಡಿದಾಕ್ಷಣ ಪಾ- ।
ಪಂಗಳಿರದೋಡಿ ಪೋಪುವಯ್ಯ ॥ ೫ ॥

೬ ಯಾಗಾದಿ ಸ್ವರ್ಗಯೋಗದಿ ಪೊಕ್ಕು ಕಾಶಿಯೊಳು ।
ಆಗಲೆ ತನುವ ಬಿಡಲು ಮುಕುತಿ ।
ಭೋಗಿಶಯನನ ದಿನದಲಿ ಕಾವೇರಿಗೆ ।
ಹೋಗಿ ಮಿಂದವರಿಗಿದೇ ಗತಿಯಯ್ಯ ॥ ೬ ॥

---

೩ ಪುಷ್ಕರೇತು ಗಜಾರಣ್ಯೇ । ಚಕ್ರತೀರ್ಥೇಚ ಸಂಗಮೇ ।
ಅರ್ಕತೋಯನದೀಸ್ನಾನಂ । ಕಾವೇರೀ ವಂದಿತಂ ಫಲಂ ॥

೪ ದೃಷ್ಟ್ವಾ ಪಾಪಸ್ಯ ಶಮನಂ । ಸ್ಪೃಷ್ಟ್ವಾ ಪಾಪವಿಮೋಚನಂ ।
ಕಾವೇರೀ ವಂದಿತಂ ಪುಣ್ಯಂ । ಕೈವಲ್ಯಂ ತಜ್ಜಲಂ ಪಿಬನ್ ॥

೫ ತ್ರಿರಾತ್ರಂ ಜಾಹ್ನವೀತೀರೇ । ಪಂಚರಾತ್ರಂ ತು ಯಾಮುನೇ ।
ಸದ್ಯಃಪುನಾತಿ ಕಾವೇರೀ । ಪಾಪಮಾಮರಣಾಂತಿಕಂ ॥

೬ ಯಾಗತಿರ್ಯೋಗಯುಕ್ತಸ್ಯ । ವಾರಾಣಸ್ಯಾಂ ಮೃತಸ್ಯಚ ।
ಸಾಗತಿಃ ಸ್ನಾನಮಾತ್ರೇಣ । ಕಾವೇರ್ಯಾಂ ಹರಿವಾಸರೇ ॥

೭ ಕಾವೇರಿಯ ಗಾಳಿ ಸೋಂಕಿದ ದೇಶದೊ- ।
ಳಾವಾವ ಮನುಜರು ಸುಕೃತಿಗಳೇ ॥
ಕಾವೇರಿಯ ತೀರವಾಸಿಗಳಿಗೆ ಮುಕ್ತಿ ।
ಆಹೋದು ಸಂದೇಹವಿಲ್ಲವಯ್ಯ ॥ ೭ ॥

೮ ಆವಾವ ಜನ್ಮಕರ್ಮಂಗಳು ಸವೆವರೆ ।
ಕಾವೇರಿಯ ಕಂಡು ಸುಖಬಾಳಿರೈ ॥
ಶ್ರೀವರ ಸ್ವಾಮಿ ಶ್ರೀಪುರಂದರವಿಠಲನ ।
ಸೇವೆಯೊಳನುದಿನವಿಪ್ಪುದಯ್ಯ ॥ ೮ ॥

## ೪೨

ರಾಗ—ಬಿಲಹರಿ ತಾಳ—ಅಟ

೧ ಭಾಗೀರಥೀದೇವಿ ಭಯನಿವಾರಣೆ ಗಂಗೆ ।
ಸಾಗರನ ನಿಜರಾಣಿ ಸಕಲಕಲ್ಯಾಣಿ ॥ ಪ ॥

ಒಮ್ಮೆ ಶ್ರೀಹರಿಪಾದಕಮಲದಿಂದುದುಭವಿಸಿ ।
ಬ್ರಹ್ಮಕರಪಾತ್ರೆಯಲಿ ನಿಂದು ಬಂದೆ ॥
ಶ್ರೀಮನ್ನಾರಾಯಣನ ಪಾದತೀರ್ಥವಾಗಿ ।
ಬ್ರಹ್ಮಾಂಡವನು ಪಾವನಮಾಡ ಬಂದೆ ॥ ೧ ॥

ದೇವಿ ನೀ ವಿಷ್ಣುಪಾದೋದಕವೆಂದೆನಿಸಿ ।
ದೇವತೆಗಳಿಗೆಲ್ಲ ಅಧಿಕವಾದೆ ॥

೭ ಕಾವೇರೀತೋಯಮಾಶ್ರಿತ್ಯ । ವಾತೋಯತ್ರ ಪ್ರವರ್ತತೇ ।
ತದ್ದೇಶವಾಸಿನಾಂ ಮುಕ್ತಿಃ । ಕಿಮುತತ್ತೀರವಾಸಿನಾಂ ॥
೮ ಕಾವೇರೀವಿರಜಾತೋಯಂ । ವೈಕುಂಠಂ ರಂಗಮಂದಿರಂ ।
ಸವಾಸುದೇವೋ ರಂಗೇಶಃ । ಪ್ರತ್ಯಕ್ಷಂ ಪರಮಂಪದಂ ॥
೧ ಇ ಪ್ರತಿಯೊಂದರಲ್ಲಿಯೆ ಇದೆ.

ದೇವರೆಲ್ಲರು ನೆರೆದು ತಲೆಬಾಗಿದರು ಮಹಾ- ।
ದೇವನ ಶಿರದಿಂದ ಧರೆಗಿಳಿದು ಬಂದೆ ॥ ೨ ॥

ಜಹ್ನುವಿನುದರದಿ ಪೊಕ್ಕ ಕಾರಣದಿಂದ ।
ಜಾಹ್ನವಿಯೆಂದು ನೀನೆನಿಸಿಕೊಂಡೆ ॥
ಮುನ್ನ ನರಕಕ್ಕಿಳಿದ ಸಗರರಾಯನ ವಂಶ- ।
ವನ್ನು ಪಾವನಮಾಡಿ ಪೊರೆಯಲು ಬಂದೆ ॥ ೩ ॥

ನಿಟ್ಟಿಸಲು ಮುನ್ನೂರು ಜನ್ಮಪಾತಕಹರಣ ।
ದಿಟ್ಟಿಸಿಲು ಮೂರುಜನ್ಮದಿ ಮುಕುತಿಯು ॥
ಮುಟ್ಟಿ ಮಾಡಿದರೊಂದು ಸ್ನಾನಮಾತ್ರದಲಿ ।
ಸುಟ್ಟುಹೋಹುದು ಸಾಸಿರಜನ್ಮ ಪಾಪ ॥ ೪ ॥

ಹಲವು ಪರಿಯಲಿ ಹರಿಯ ಸ್ಮರಣೆಯಿಲ್ಲದೆ ಭವ- ।
ದೊಳಗೆ ಸಿಲುಕಿ ಕಡುನೊಂದೆ ನಾನು ॥
ಹಲವು ಮಾತೇಕೆ ಶ್ರೀಪುರಂದರವಿಠಲನ ।
ಚೆಲುವಪದದಿಂದಿಳಿದು ಒಲಿದು ದಯೆಮಾಡೆ ॥ ೫ ॥

## ೪೪

ರಾಗ—ಉದಯರಾಗ ತಾಳ—ಝಂಪೆ

೧ ವಾಸವನೆ ಮಾಡಿರೋ ಕಾಶಿಯಲ್ಲಿ ॥ ಪ ॥

ವಾಸವನೆ ಮಾಡಿ ಕಾಶಿಯಲಿ ವಸುಧೆಯ ಜನರು ।
ಏಸುಜನ್ಮದ ಪಾಪವನೆ ಕಳೆದು ಯಮಪುರಿಯ ॥
ಹೇಸಿಕೆಯ ರಾಶಿಗಳ ಒದೆದು ಹೆಚ್ಚಳವಾದ ।
ಮೀಸಲಳಿಯದ ಪದವಿ ಸಾರಿರಯ್ಯ ॥ ಅ. ಪ ॥

---

೧ ಇ ಪ್ರತಿಯೊಂದರಲ್ಲಿಯುಷ್ಟೆ ಸಿಕ್ಕುತ್ತಿದೆ.

ಶ್ರೀವಿಷ್ಣು ಸಿರಿಸಹಿತ ಗರುಡವಾಹನನಾಗಿ ।
ಜೀವಿಗಳ ಸ್ಥಿತಿಯ ನೋಡುತ ಬರಲು ಮರುಗಿ ಆ ।
ದೇವಿ ಬಿನ್ನಹಮಾಡಲಾಗ ಕರುಣಾಕರನು ।
ಭಾವಿಸಿದನೀ ಕೃತಿಯನು ॥
ದೇವತ್ರಿಧಾಮನವ ದಿವ್ಯ ವೈಕುಂಠದೊಳು ।
ಪಾವನಸ್ಥಳವಿದೆಂದೊರೆದ ಧರೆಯೊಳು ಕಾಶಿ ।
ಶ್ರೀವಾರಣಾಸಿ ಪಂಚಕ್ರೋಶಮಿತಿಯಲ್ಲಿ ।
ಆ ವಿಪುಳ ಮಣಿಕರಣಿಕೆ ॥ ೧ ॥

ಬಲಿಯ ಬಳಿ ಮೂರಡಿಯ ಭೂದಾನವನೆ ಬೇಡಿ ।
ನೆಲನಳೆಯೆ ಈರಡಿಗೆ ಸಾಲದಿರೆ ಬ್ರಹ್ಮಾಂಡ ।
ಬಲಪದದ ನಖದಿ ಸೀಳಲ್ಕೆ ಬಹಿರಾವರಣ ।
ಜಲಸುರಿಯೆ ಅಂಗುಟದಲಿ ॥
ಸಲೆ ತೀರ್ಥವೆಂದಜ ಕಮಂಡಲದೊಳಗೆ ಧರಿಸಿ ।
ತೊಳೆದನಾ ಚರಣಗಳ ಬಲು ಗಂಗೆ ಬರಲು ಜಡೆ- ।
ತಲೆಯೊಳಿಟ್ಟಾ ಶಿವ ಭಗಿರಥನ ಯತ್ನದಿಂ- ।
ದಿಳಿದಿಹಳು ಕಾಶಿಯಲ್ಲಿ ॥ ೨ ॥

ಪರಮನಿರ್ಮಲ ಶುಭ್ರತರದ ಭಾಗೀರಥಿಯು ।
ಸಿರಿಜೆ ಸೀಲಾಭೆ ಯಮುನೆಯ ಮಧ್ಯದಲಿ ಕಾರ್ತ- ।
ಸ್ವರವರ್ಣದಿಂದಲ್ಲಿ ಗುಪ್ತಗಾಮಿಸಿಯಾದ ।
ಸರಸತಿಯ ಸಂಗಮದಲಿ ॥
ಮೆರೆಯುವ ತ್ರಿವೇಣಿಯೆನಿಸುವ ತೀರದಲ್ಲಿ ವಟ- ।
ತರುಛಾಯೆಯಲ್ಲಿಹುದು ದೇವಋಷಿ ಮೌನಿಗಣ ।
ವರತೀರ್ಥರಾಜಪ್ರಯಾಗವೆನಿಸುವ ಕ್ಷೇತ್ರ- ।
ದೊರೆ ಮಾಧವನ ಭಜಿಸಿರೈ ॥ ೩ ॥

ಆ ಮಾಘಮಾಸದತಿಶಯವಾದ ಸ್ನಾನವನು ।
ಈ ಮಹಾನದಿಯೊಳಗೆ ಮಾಡಲೋಸುಗ ಬೊಮ್ಮ ।

ಸೋಮಶೇಖರ ಮುಖ್ಯ ದೇವತೆಗಳೈತಹರು ।
ಪ್ರೇಮದಿಂದಲ್ಲಿ ನಿರುತ ॥
ನೇಮವಿದು ದ್ವಿಜಕುಲೋತ್ತಮರಾದವರು ಕೇಳಿ ।
ಕಾಮ-ಕ್ರೋಧವ ಜರಿದ ಪ್ರಾಯಾಗ ಕ್ಷೇತ್ರದಲಿ ।
ರಾಮಣೀಯಕ ಸ್ನಾನನುಷ್ಠಾನ ತೀರ್ಥವಿಧಿ ।
ಹೋಮಗಳ ಮಾಡಿರಯ್ಯ ॥ ೪ ॥

ಆರ್ಯಾವರ್ತದ ಬ್ರಹ್ಮಾವರ್ತ ದೇಶದ ಮಧ್ಯೆ ।
ಧಾರ್ಯವಾದತಿ ಪುಣ್ಯವಾರಣಾಸೀ ಕ್ಷೇತ್ರ ।
ಕಾರ್ಯವಿಶ್ವೇಶತಾರಕ ಮಂತ್ರವುಪದೇಶಿ ।
ಸೂರ್ಯಚಂದ್ರಾಗ್ನಿನಯನ ॥
ತ್ವರ್ಯುಗ್ರನೆನಿಪ ಭೂತೇಶ ಭೈರವನಲ್ಲಿ ।
ವೀರ್ಯದಿಂದಘಕಾರಿ ಜೀವಿಗಳ ಶಿಕ್ಷಿಸುವ ।
ಶೌರ್ಯ ಅಗಣಿತ ಮಹಿಮ ಶ್ರೀಬಿಂದುಮಾಧವಗೆ ।
ಕಾರ್ಯದೊರೆತನವು ಅಲ್ಲಿ ॥ ೫ ॥

ಅರ್ತಿಯಲಿ ಪಂಚಗಂಗೆಯಲಿ ಮಜ್ಜನಮಾಡಿ ।
ನಿತ್ಯ-ನೈಮಿತ್ತ್ಯ ಕರ್ಮಂಗಳನು ಪತಿಕರಿಸಿ ।
ಸುತ್ತಿ ಅಂತರ್ವೇದಿಯನ್ನು ಪಂಚಕ್ರೋಶ- ।
ಯಾತ್ರೆಗಳ ಮಾಡಿ ಬಳಿಕ ॥
ಮತ್ತೆ ಶ್ರೀವಿಶ್ವೇಶ್ವರಗೆ ಪ್ರದಕ್ಷಿಣೆ ಮಾಡಿ ।
ಭಕ್ತಿಪೂರ್ವಕವಾಗಿ ಅಲ್ಲಲ್ಲಿ ಇಹವೈಷ್ಣ- ।
ವೋತ್ತಮರಿಗೆರಗಿ ಸದ್ಧರ್ಮಗಳ ಮಾಡಿ ಕೃತ-
ಕೃತ್ಯರೆಂದೆನಿಸಿರಯ್ಯ ॥ ೬ ॥

ಹತ್ತಶ್ವಮೇಧತೀರ್ಥಜ ಮಿಂದು ತರುವಾಯ ।
ಉತ್ತರದ ದಕ್ಷಿಣದ ಮಾನಸವ ಬಲಗೊಂಡು ।
ಸತ್ಯಶೌಚಾಚಾರ ವೈರಾಗ್ಯದಲ್ಲಿ ಶುಭ ।
ಕರ್ತವ್ಯಗಳನು ವಿಧಿಸಿ ॥

ಪೃಥ್ವಿಯೊಳಗುಳ್ಳ ತೀರ್ಥಂಗಳಭಿಮಾನಿಸುರ- ।
ವೊತ್ತ ಸ್ವರ್ನದಿಯಲ್ಲಿ ವಾಸವಾಗಿಹರೆಂದು ।
ಚಿತ್ತಶುದ್ಧಿಯಲಿ ಭಾವಿಸುತೆ ಮಣಿಕರ್ಣಿಕಾ ।
ತೀರ್ಥಸ್ನಾನವ ಮಾಡಿರೈ ॥ ೭ ॥

ಗಮಿಸಿ ಗಯೆಯಲಿ ವಿಷ್ಣುಪಾದದಲಿ ಪಿಂಡವನು ।
ಶಮಿಯ ಪತ್ರಪ್ರಮಾಣವನೀಯೆ ಮುಕ್ತಿ ಸಂ- ।
ಭ್ರಮವಾಗುವುದು ಪಿತೃಗಳಿಗೆ ಋಣತ್ರಯನಾಶ- ।
ಅಮಿತಮಹಿಮೆಯನೊರೆವೆನು ॥
ವಿಮಲ ವಾರಾಣಾಸಿ ಪಂಚಕ್ರೋಶದ ಮರಣ ।
ಅಮರರಿಚ್ಛೈಯಿಸುವರು ಮಿಕ್ಕವರ ಪಾಡೇನು ।
ಯಮುನಾಳುಗಳ ಭಯವೆ ಈ ನದಿಯೊಳಗೆ ಮಿಂದು ।
ಶಮೆದಮೆಯೊಳಿದ್ದ ಬಳಿಕ ॥ ೮ ॥

ಶ್ರದ್ಧೆಯಿಂದಿದನು ಈ ನವರತ್ನಮಾಲಿಕೆಯ ।
ಶುದ್ಧಾತ್ಮರಾಗಿ ಪ್ರತಿದಿಸದಲಿ ಕಂಧರದ ।
ಮಧ್ಯದಲ್ಲಿರಿಸಿ ಪುರಂದರವಿಟ್ಠಲನ ಪಾದ- ।
ಪದ್ಮ ಸ್ಮರಿಸುತಲಿ ಧರ್ಮ— ॥
ಪದ್ಧತಿಗಳಿಂದ ನಡೆವರಿಗೆ ಬಹ ಕಾಶಿಯೊಳ- ।
ಗಿದ್ದ ಫಲವಾವ ದೇಶದೊಳಿರಲು ಮುಕ್ತಿಸುಖ ।
ಮುದ್ದೆ ಮುಂದಿಹ,ದು ಸಂದೇಹಗೊಳಸಲ್ಲ ।
ಶ್ರುತಿಸಿದ್ಧವಿದು ಕೇಳಿರಯ್ಯ ॥ ೯ ॥

# ೬ ತುಲಸೀಮಾಹಾತ್ಮ್ಯೆ

೮೫

ರಾಗ—ಸೌರಾಷ್ಟ್ರ　　　　　　　　　　ತಾಳ—ಛಾಪು

೧ ವೃಂದಾವನವೇ ಮಂದಿರವಾಗಿಹ
ಇಂದಿರೆ ಶ್ರೀತುಳಸಿ ||
ನಂದನಂದನ ಮುಕುಂದಗೆ ಪ್ರಿಯಳಾದ |
ಚೆಂದದ ಶ್ರೀತುಳಸಿ || ಪ ||

ತುಳಸಿಯ ವನದಲಿ ಹರಿಯಿಹನೆಂಬುದ |
ಶ್ರುತಿಸಾರುತಲಿದೆ ಕೇಳಿ |
ತುಳಸೀದರ್ಶನದಿಂದ ದುರಿತಗಳೆಲ್ಲವು
ದೂರವಾಗುವುವು ಕೇಳಿ ||
ತುಳಸೀಸ್ಪರ್ಶವ ಮಾಡೆ ದೇಹಪಾವನವೆಂದು
ತಿಳಿದಿಲ್ಲವೇನು ಪೇಳಿ |
ತುಳಸೀಸ್ಮರಣೆ ಮಾಡಿ ಸಕಲೇಷ್ಟಗಳ ಪಡೆದು
ಸುಖದಿಂದ ನೀವು ಬಾಳಿ || ೧ ||

ಮೂಲಮೃತ್ತಿಕೆಯನು ಮುಖದಲಿ ಧರಿಸಲು
ಮೂಲೋಕ ವಶವಹುದು |
ಮಾಲೆ ಕೊರಳಲಿಟ್ಟ ಮನುಜಗೆ ಮುಕ್ತಿಯ
ಮಾರ್ಗವು ತೋರುವುದು ||
ಕಾಲಕಾಲಗಳಲಿ ಮಾಡುವ ದುಷ್ಕರ್ಮ
ಕಳೆದು ಬೀಸಾಡುವುದು |
ಕಾಲನ ದೂತರ ಕಳಚಿ ಕೈವಲ್ಯದ
ಲೀಲೆಯ ತೋರುವುದು || ೨ ||

---

೧ ಎ ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.

ಧರೆಯೊಳು ಸುಜನರ ಮರೆಯದೆ ಸಲಹುವ
ವರಲಕ್ಷ್ಮಿ ಶ್ರೀತುಳಸಿ ।
ಪರಮಭಕ್ತರ ಪಾಪಗಳನೆಲ್ಲ ತರಿದು ಪಾ-
ವನ ಮಾಡುವಳು ತುಳಸಿ ॥
ಸಿರಿ ಆಯು ಪುತ್ರಾದಿ ಸಂಪದಗಳನಿತ್ತು
ಹರುಷವೀವಳು ತುಳಸಿ ।
ಪುರಂದರವಿಠಲನ ಚರಣಕಮಲಗಳ
ಸ್ಮರಣೆಯೀವಳು ತುಳಸಿ ॥ ೩ ॥

## ೪೬

ರಾಗ—ಪೂರ್ವಿ ತಾಳ—ಆದಿ

೧ ಕಲ್ಯಾಣಂ ತುಳಸೀ ಕಲ್ಯಾಣಂ ॥ ಪ ॥
ಕಲ್ಯಾಣವು ನಮ್ಮ ಕೃಷ್ಣ ಶ್ರೀತುಳಸಿಗೆ ।
ಬಲ್ಲಿದ ಶ್ರೀವಾಸುದೇವನಿಗೆ ॥ ಅ. ಪ ॥

ಅಂಗಳದೊಳಗೆಲ್ಲ ತುಳಸೀವನವ ಮಾಡಿ ।
ಶೃಂಗಾರವ ಮಾಡೆ ಶೀಘ್ರದಿಂದ ॥
ಕಂಗಳ ಪಾಪವ ಪರಿಹರಿಸುವ ಮುದ್ದು ।
ರಂಗಬಂದಲ್ಲಿ ನೆಲಸಿಹನು ॥ ೧ ॥

---

೧ ಐ ಪ್ರತಿಯಿಂದ ತೆಗೆದುಕೊಂಡಿದೆ.

ಪಿ. ಸೂ.--೪ ಮತ್ತು ೬ ಪ್ರತಿಗಳಲ್ಲಿ ಒಂದು ನುಡಿ ಹೆಚ್ಚಾಗಿದೆ.

ಭಕ್ಷ್ಯಭೋಜ್ಯಂಗಳ ನೈವೇದ್ಯವನಿತ್ತು ।
ಲಕ್ಷಬತ್ತಿಯ ದೀಪವ ಹಚ್ಚಿದೆ ಅ- ।
ಧೋಕ್ಷಜ ಸಹಿತ ವೃಂದಾವನ ಪೂಜಿಸೆ ।
ಸಾಕ್ಷಾತು ಮೋಕ್ಷವ ಕೊಡುತಿಹಳು ॥

ಮಿಂದು ಮಡಿಯನುಟ್ಟು ಸಂದೇಹವ ಬಿಟ್ಟು ।
ತಂದ ಶ್ರೀಗಂಧಾಕ್ಷತೆಗಳಿಂದ ॥
ಸಿಂಧುಶಯನನ ವೃಂದಾವನದಲಿ ಪೂಜಿಸೆ ।
ಕುಂದದ ಭಾಗ್ಯ ಕೊಡುತಿಹಳು ॥ ೨ ॥

ಉತ್ಥಾನದ್ವಾದಶಿ ದಿವಸದಲ್ಲಿ ಕೃಷ್ಣ- ।
ಉತ್ತಮ ತುಲಸಿಗೆ ವಿವಾಹವ ॥
ಚಿತ್ತನಿರ್ಮಲರಾಗಿ ಮಾಡಿದವರಿಗೆ ।
ಉತ್ತಮ ಗತಿಯೀವ ಪುರಂದರವಿಠಲ ॥ ೩ ॥

೪೭

ರಾಗ—ಭೂಪಾಳಿ ತಾಳ—ಅಟ

೧ ಎಲ್ಲಿ ಶ್ರೀತುಳಸಿಯ ವನವು ।
ಅಲ್ಲೊಪ್ಪುವರು ಸಿರಿ-ನಾರಾಯಣರು ॥ ಪ ॥

ಗಂಗೆ ಯಮುನೆ ಗೋದಾವರಿ ಕಾವೇರಿ ।
ಕಂಗೊಳಿಸುವ ಮಣಿಕರ್ಣಿಕೆಯು ॥
ತುಂಗಭದ್ರೆ ಕೃಷ್ಣವೇಣಿ ತೀರ್ಥಗಳೆಲ್ಲ ।
ಸಂಗಡಿಸುತ ವೃಕ್ಷಮೂಲದಲ್ಲಿರುವುವು ॥ ೧ ॥

ಸರಸಿಜಭವ ಭವ ಸುರಪ ಪಾವಕ ಚಂ- ।
ದಿರ ಸೂರ್ಯ ಮೊದಲಾದವರು ॥
ಸಿರಿರಮಣನ ಆಜ್ಞೆಯಲಿ ಅಗಲದಂತೆ ।
ತರುಮಧ್ಯದೊಳು ನಿತ್ಯ ನೆಲಸಿಪ್ಪರು ॥ ೨ ॥

ಋಗ್ವೇದ ಯಜುರ್ವೇದ ಸಾಮ ಅಥರ್ವಣ ।
ಅಗ್ಗಳಿಸಿದ ವೇದಘೋಷಗಳು ॥

೧ ಓ ಪ್ರತಿಯಲ್ಲಿ ಮಾತ್ರ ಈ ಹಾಡು ಇದೆ.

ಅಗ್ರಭಾಗದಲಿವೆ ಬೆಟ್ಟದೊಡೆಯನಲ್ಲಿ |
ಶೀಘ್ರದಿ ಒಲಿವ ಶ್ರೀಪುರಂದರವಿಠಲ || ೩ ||

## ೪೮

### ಉಗಾಭೋಗ

೧ ಇಲ್ಲದಿದ್ದರೆ ಮುಗುಳುತೆನೆ |
ಇಲ್ಲದಿದ್ದರೆ ಚಿಗುರೆಲೆ |
ಇಲ್ಲದಿದ್ದರೆ ಬರಲುಕಟ್ಟಿಗೆ |
ಇಲ್ಲದಿದ್ದರೆ ಬೇರುಮಣ್ಣು |
ಅದೂ ಇಲ್ಲದಿದ್ದರೆ |
ತುಳಸಿ ತುಳಸಿ ಎಂದು ಕೂಗಿದರೆ ಸಾಕು |
ಎಲ್ಲ ವಸ್ತುಗಳನೀಡಾಡುವ ಪುರಂದರವಿಠಲ ||

## ೪೯

ರಾಗ—ಸೌರಾಷ್ಟ್ರ ತಾಳ—ಅಟ

೨ ವೃಂದಾವನದೇವಿ ನಮೋನಮೋ—ಚೆಲ್ವ- |
ಮಂದರಧರನ ಮನಃಪ್ರಿಯಳೆ || ಪ ||
ನಿನ್ನ ಸೇವಿಸಿ ಉದಕವನು ಎರೆಯಲು |
ಮುನ್ನಮಾಡಿದ ಪಾಪವಳಿಯುವುದು ||
ಎನ್ನ ಇಪ್ಪತ್ತೊಂದು ಕುಲದವರಿಗೆ ಎಲ್ಲ |
ಉನ್ನತ ವೈಕುಂಠಪದವೀವಳೆ || ೧ ||

೧ ಅ (VI) ಪ್ರತಿಯೊಂದರಲ್ಲಿ ಸಿಕ್ಕುತ್ತದೆ.
೨ ಇದು ಒ ಪ್ರತಿಯೊಂದರಲ್ಲಿಯೆ ಇದೆ.

ಒಂದೊಂದು ದಳದಲಿ ಒಂದೊಂದು ಮೂರುತಿ ।
ಸಂದಣಿಸಿವೆ ಬಹು ಗುಪಿತದಲಿ ॥
ಬಂದು ಕುಂಕುಮ ಶಂಖಚಕ್ರವಿರಿಸಿದರೆ ।
ತಂದೆ ನಾರಾಯಣ ಕರೆದೊಯ್ಯುವ ॥ ೨ ॥

ಹರಿಗೆ ಅರ್ಪಿಸಿದ ತುಳಸಿ ನಿರ್ಮಾಲ್ಯವ ।
ಕೊರಳೊಳು ಧರಿಸಿ ಕರ್ಣದೊಳಿಟ್ಟರೆ ॥
ದುರಿತ ರಾಶಿಗಳೆಲ್ಲ ಅಂಜಿ ಓಡುವುವು ಶ್ರೀ- ।
ಹರಿಯು ತನ್ನವರೆಂದು ಕೈಪಿಡಿವ ॥ ೩ ॥

ಹತ್ತು ಪ್ರದಕ್ಷಿಣೆ ಹತ್ತು ವಂದನೆ ಮಾಡೆ ।
ಉತ್ತಮ ವೈಕುಂಠಪದವೀವಳು ॥
ಭಕ್ತಿಯಿಂದಲಿ ಬಂದು ಕೈಮುಗಿದವರನು ।
ಕರ್ತೃನಾರಾಯಣ ಕರೆದೊಯ್ವುನು ॥ ೪ ॥

ಆವಾವ ಪರಿಯಲಿ ಸೇವೆಯ ಮಾಡಲು ।
ಪಾವನ ವೈಕುಂಠಪದವೀವಳೆ ॥
ದೇವ ಶ್ರೀಪುರಂದರವಿಟ್ಠಲರಾಯನ ।
ದೇವಿ ನಿನ್ನ ಮುಟ್ಟೆ ತ್ರಾಹಿ ಎಂಬೆ ॥ ೫ ॥

---

# ೭ ನಾಮಮಾಹಾತ್ಮ್ಯೆ



ರಾಗ—ಮೇಘಮಾಲಾ　　　　　　　　ತಾಳ—ಛಾಪು

೧ ಗಂಗಾದಿತೀರ್ಥಫಲಂಗಳನೀವುದು—ಹರಿಯ ನಾಮ ।
ಹಿಂಗದೆ ಜನರಿಗೆ ಮಂಗಳವೀವುದು—ಹರಿಯ ನಾಮ ॥ ಪ ॥

ವೇದಶಾಸ್ತ್ರಂಗಳ ಅರಿಯದ ಜನರಿಗೆ—ಹರಿಯ ನಾಮ ಜಗ- ।
ದಾದಿಪುರುಷನನು ಪೂಜಿಸದವರಿಗೆ—ಹರಿಯ ನಾಮ ॥
ಸಾಧಿಸುವೆವು ಪರವೆಂಬಂಥ ಜನರಿಗೆ—ಹರಿಯ ನಾಮ ।
ಶೋಧಿಸಿ ಇಟ್ಟ ಚಿನ್ನದ ಗಟ್ಟಿ ಕಾಣಿರೊ—ಹರಿಯ ನಾಮ ॥ ೧ ॥

ಸ್ನಾನಜಪಂಗಳ ಸಾಧಿಸದವರಿಗೆ—ಹರಿಯ ನಾಮ ।
ದಾನಧರ್ಮಕೆ ಒದಗದ ಮನುಜರಿಗೆ—ಹರಿಯ ನಾಮ ॥
ಧ್ಯಾನವೊಂದರಿಯದ ಮೂಢಾತ್ಮ ಜನರಿಗೆ—ಹರಿಯ ನಾಮ ।
ಮಾನುಷ್ಯಜನ್ಮವ ಪಾವನಮಾಡುವುದು—ಹರಿಯ ನಾಮ ॥ ೨ ॥

ವೇಳೆವೇಳೆಗೆ ವೆಚ್ಚ-ವ್ಯಯಗಳನೀವುದು—ಹರಿಯ ನಾಮ ।
ಜಾಳಿಗೆಮಾಳಿಗೆ ಮನೆಯ ನೆಚ್ಚದೆ ಪೇಳಿ—ಹರಿಯ ನಾಮ ॥
ಕಾಲನವರು ಬಂದು ಕದಲಲಾಗದ ಮುನ್ನ—ಹರಿಯ ನಾಮ ।
ಶ್ರೀಲೋಲ ಪುರಂದರವಿಠಲನ ಒಲುಮೆಗೆ—ಹರಿಯ ನಾಮ ॥ ೩ ॥

---

೧ ಕ. ವಿ. ವಿ. ತಾಳೆಗರಿ (ನಂ. ೧೨೫೮–೭೬೫೦) ಯಿಂದ ಪ್ರತಿಮಾಡಿದೆ.

೫೧

ರಾಗ—ಸೌರಾಷ್ಟ್ರ ತಾಳ—ಅಟ

೧ ಹರಿಯೆಂಬ ನಾಮಾಮೃತ ರುಚಿಕರವೆಲ್ಲ
ಪರಮಭಕ್ತರಿಗಲ್ಲದೆ—ಮಿಕ್ಕ- ।
ಅರಿಯದ ಕಡುಮೂರ್ಖ ಮನುಜರಿಗೆಲ್ಲ ತಾ
ಹರುಷವಾಗಬಲ್ಲದೆ? ॥ ಪ ॥

ಅಂದುಗೆ ಅರಳೆಲೆಯಿಟ್ಟರೆ ಕೋಡಗ
ಕಂದನಾಗಬಲ್ಲದೆ? ।
ಹಂದಿಗೆ ತುಪ್ಪ-ಸಕ್ಕರೆ ತಿನ್ನಿಸಲು ಗ-
ಜೇಂದ್ರನಾಗಬಲ್ಲದೆ? ॥
ಇಂದು ಪೂರ್ಣಕಳೆಯೊಳು ತಾನು ತೋರಲು
ಅಂಧ ನೋಡಬಲ್ಲನೆ?—ನಮ್ಮ- ।
ಇಂದಿರೆಯರಸನ ನಾಮದ ಮಹಿಮೆಯ
ಮಂದಜ್ಞಾನಿ ಬಲ್ಲನೆ? ॥ ೧ ॥

ಪರಿಪರಿ ಬಂಗಾರವಿಟ್ಟರೆ ದಾಸಿ ತಾ
ಅರಸಿಯಾಗಬಲ್ಲಳೆ? ।
ಭರದಿಂದ ಶ್ವಾನನ ಬಾಲವ ತಿದ್ದಲು
ಸರಳವಾಗಬಲ್ಲದೆ? ॥
ಉರಗಗೆ ಕ್ಷೀರವನೆರೆಯಲು ಅದು ತನ್ನ
ಗರಳವ ಬಿಡಬಲ್ಲದೆ? ।
ಭರದಿಂದ ನೀಲಿಯ ಕರದಿಂದ ತೊಳೆಯಲು
ಕರಿದು ಹೋಗಬಲ್ಲದೆ? ॥ ೨ ॥

ಮೋಡಕೆ ಮಯೂರ ಕುಣಿವಂತೆ ಕುಕ್ಕುಟ
ನೋಡಿ ಕುಣಿಯಬಲ್ಲದೆ? ।

೧ ಅ (ಅ) ಆ (P) ಪ್ರತಿಗಳಿಂದ ಹೊಂದಿಸಿ ಬರೆದಿದೆ.

ಗೋಡೆಗೆ ಎದುರಾಗಿ ನಾಟ್ಯವಾಡಲು
ನೋಡಿ ಸುಖಿಸಬಲ್ಲದೆ ? ||
ಹಾಡಿನ ಕುಶಲತೆ ಬಧಿರನು ತಾ ಸವಿ-
ಮಾಡಿ ಕೇಳಬಲ್ಲನೆ ? |
ರೂಢಿಗೊಡೆಯ ನಮ್ಮ ಪುರಂದರವಿಠಲನ
ಮೂಢಜ್ಞಾನಿ ಬಲ್ಲನೆ? || ೩ ||

೫೨

ರಾಗ—ಕಾಂಬೋದಿ ತಾಳ—ಅಟ

೧ ಹರಿನಾಮದರಗಿಣಿಯು ಹಾರುತಿದೆ ಜಗದಿ |
ಪರಮಭಾಗವತರು ಬಲೆಯ ಬೀಸುವರು || ಪ ||

ಕೋಪವೆಂಬ ಮಾರ್ಜಾರವು ಕಂಡರೆ ನುಂಗುವುದು |
ತಾಪವೆಂಬ ಹುಲಿಯು ಕೊಂಡೊಯ್ಯುವದದನು ||
ಕಾಪಾಡಿರದನು ಹೃದಯದೊಳಗಿಂಬಿಟ್ಟು |
ಆಪತ್ತಿಗೊದಗುವುದು ಈ ಮುದ್ದುಗಿಣಿಯು || ೧ ||

ದಾರಿಯು ನಡೆವಾಗ ಚೋರರ ಭಯವಿಲ್ಲ |
ಮಾರಿಬಂದರದನು ಹೊಡೆದು ನೂಕುವುದು ||
ಕ್ರೂರ ಯಮಭಟರನು ಮೂಗು-ರೆಕ್ಕೆಯಲಿ ಬಡಿದು |
ದಾರಿ ತೋರುವುದು ಮುರಾರಿಯ ಪಟ್ಟಣಕೆ || ೨ ||

ಎಷ್ಟೆಂದು ವರ್ಣಿಸಲಿ ಈ ಮುದ್ದು ಅರಗಿಣಿಯ |
ಹೊಟ್ಟೆಯೊಳೀರೇಳು ಜಗವನಿಂಬಿಟ್ಟ ||
ಸೃಷ್ಟೀಶ ಪುರಂದರವಿಟ್ಠಲನ ನೆನೆನೆನೆದು |
ಮುಟ್ಟಿ ಭಜಿಸುವುದು ಈ ಮುದ್ದುಗಿಣಿಯು || ೩ ||

---

೧ ಇ ಪ್ರತಿಯಿಂದ ತೆಗೆದುಕೊಂಡಿದೆ.

## ೫೩

ರಾಗ—ಶಂಕರಾಭರಣ ತಾಳ—ಆದಿ

೧ ಹರಿನಾರಾಯಣ ಹರಿನಾರಾಯಣ ।
ಹರಿನಾರಾಯಣ ನೆನೆ ಮನವೆ ॥ ಪ ॥

ನಾರಾಯಣನೆಂಬ ನಾಮದ ಬೀಜವ ।
ನಾರದ ಬಿತ್ತಿದ ಧರೆಯೊಳಗೆ ॥ ಅ. ಪ ॥

ತರಳಧ್ರುವನಿಂದಲಿ ಅಂಕುರಿಸಿತು ಅದು ।
ವರಪ್ರಹ್ಲಾದನಿಂದ ವೊಳಕೆಯಾಯ್ತು ॥
ಧರಣೀಶ ರುಕ್ಮಾಂಗದನಿಂದ ಚಿಗುರಿತು ।
ಕುರುಪಿತಾಮಹನಿಂದ ಹೂವಾಯ್ತು ॥ ೧ ॥

ವಿಜಯನ ಸತಿಯಿಂದ ಫಲವಾಯ್ತು—ಅದು ।
ಗಜೇಂದ್ರನಿಂದ ದೋರೆ ಹಣ್ಣಾಯ್ತು ॥
ದ್ವಿಜಶುಕಮುನಿಯಿಂದೆ ಫಲಪಕ್ವವಾಯಿತು ।
ಅಜಾಮಿಳ ತಾನುಂಡು ರಸಸವಿದ ॥ ೨ ॥

ಕಾಮಿತ ಫಲವೀವ ನಾಮವೊಂದಿರಲಾಗಿ ।
ಹೋಮ ನೇಮ ಜಪತಪವೇಕೆ ।
ಸ್ವಾಮಿ ಶ್ರೀಪುರಂದರವಿಠಲರಾಯನ ।
ನೇಮದಿಂದಲಿ ನೀ ನೆನೆ ಮನವೆ ॥ ೩ ॥

## ೫೪

ರಾಗ—ಧನ್ಯಾಸಿ ತಾಳ—ಆದಿ

೨ ಹರಿನಾಮಕೀರ್ತನೆ ಅನುದಿನ ಮಾಳ್ಪಗೆ ।
ನರಕಭಯಗಳುಂಟೆ? ॥ ಪ ॥

---

೧ ಅ (೭) ಖ (೭) ಗ (೪) ಛ ಪ್ರತಿಗಳಿಂದ ಆರಿಸಿದೆ.
೨ ಮ ಪ್ರತಿಯೊಂದರಲ್ಲಿ ಸಿಕ್ಕುತ್ತಿದೆ.

ಕೇಸರಿಗಂಜದ ಮೃಗವುಂಟೆ?—ದಿ- ।
ನೇಶನಿಗಂಜದ ತಮವುಂಟೆ ? ॥
ವಾಸುದೇವ ವೈಕುಂಠ ಜಗನ್ಮಯ ।
ಕೇಶವ ಕೃಷ್ಣ ನೀನೆಂದುಚ್ಚರಿಸುವ ॥ ೧ ॥

ಕುಲಿಶವನೆದುರಿಪ ಗಿರಿಯುಂಟೆ?—ಬಲು ।
ಪ್ರಳಯಬಂದಾಗ ಜೀವಿಪರುಂಟೆ ? ॥
ಜಲಜನಾಭ ಗೋವಿಂದ ಜನಾರ್ದನ ।
ಕಲುಷಹರಿಣ ಕರಿರಾಜರಕ್ಷಕನೆಂಬ ॥ ೨ ॥

ಗರುಡಗೆ ಅಂಜದ ಫಣಿಯುಂಟೆ?—ದ- ।
ಳ್ಳುರಿಯಲಿ ಬೇಯದ ತೃಣವುಂಟೆ ? ॥
ನರಹರಿನಾರಾಯಣ ಕೃಷ್ಣ ಕೇಶವ ।
ಪುರಂದರವಿಠಲ ನೀನೆಂದುಚ್ಚರಿಸುವ ॥ ೩ ॥

೫೫

ರಾಗ—ಭೂಪಾಳಿ ತಾಳ—ಝಂಪೆ

೧ ಭಯನಿವಾರಣವು ಶ್ರೀಹರಿಯನಾಮ ।
ಜಯಪಾಂಡುರಂಗವಿಟ್ಠಲ ನಿನ್ನ ನಾಮ ॥ ಪ ॥

ಧಾರಿಣೀದೇವಿಗಾಧಾರವಾಗಿಹ ನಾಮ ।
ನಾರದರು ನಲಿನಲಿದು ನೆನೆವ ನಾಮ ॥
ಘೋರಪಾತಕಿ ಅಜಾಮಿಳನ ಸಲಹಿದ ನಾಮ ।
ತಾರಕವು ಬ್ರಹ್ಮ-ಭವರಿಗೆ ನಿನ್ನ ನಾಮ ॥ ೧ ॥

ಮೊರೆಯ ಲಾಲಿಸಿ ಮುನ್ನ ಗಜವ ಸಲಹಿದ ನಾಮ ।
ಕರುಣದಿಂ ದ್ರೌಪದಿಯ ಕಾಯ್ದ ನಾಮ ॥

೧ ಇ (ಕ್ಷೆ) ಸು. ೬ ಪ್ರತಿಗಳಿಂದ ಆರಿಸಿಕೊಂಡಿದೆ.

ಮರುಗುತಿಹ ಧ್ರುವನ ಉನ್ನತನ ಮಾಡಿದ ನಾಮು ।
ಪರತತ್ತ್ವ ಇಹಕಲ್ಲವೇ ನಿನ್ನ ನಾಮು ॥ ೨ ॥

ಚರಣದಲ ಹಲ್ಯೆಯನು ಸೆರೆಯ ಬಿಡಿಸಿದ ನಾಮು ।
ಕರುಣದಲಿ ಪ್ರಹ್ಲಾದನನು ಕಾಯ್ದ ನಾಮು ॥
ತೊರೆಯಲಕ್ರೂರನಿಗೆ ನಿಜವ ತೋರಿದ ನಾಮು ।
ಸ್ಮರಿಪ ಜನರಿಗೆ ಸಮಸ್ತವನಿತ್ತ ನಾಮು ॥ ೩ ॥

ಚಂದ್ರಶೇಖರ ಗಿರಿಜೆಗೊರೆದ ಸಿರಿಹರಿನಾಮು ॥
ಬಂದಾ ವಿಭೀಷಣನ ಪಾಲಿಸಿದ ನಾಮು ॥
ಕಂದಮುಚುಕುಂದನಿಗೆ ಕಾಮಿತವನಿತ್ತ ನಾಮು ।
[ ಸಂದ ಪಾಂಡಪಕ್ಷ ಪಾವನವು ನಾಮು ] ॥ ೪ ॥

ಅಖಿಳವೇದಪುರಾಣ ಅರಸಿ ಕಾಣದ ನಾಮು ।
ಸಕಲ ಯೋಗಿ-ಜನಕೆ ಸೌಖ್ಯನಾಮು ॥
ಪ್ರಕಟಿಸಲು ಜಗವ ಪಾವನವ ಮಾಡಿದ ನಾಮು ।
ರುಕುಮಿಣೀಯರಸ ವಿಟ್ಠಲ ನಿನ್ನ ನಾಮು ॥ ೫ ॥

ಭಕ್ತಿಯಲಿ ನೆನೆವರನು ಎತ್ತಿ ಸಲಹುವ ನಾಮು ।
ಮುಕ್ತಿಮಾರ್ಗಕೆ ಯೋಗ್ಯ ಹರಿ ನಿನ್ನ ನಾಮು ॥
ಎತ್ತರಕೆ ಏರಿಪುದು ಸ್ವಾಮಿ ನಿನ್ನಯ ನಾಮು ।
ಚಿತ್ತಜನ ಪೆತ್ತ ಶ್ರೀಹರಿಯ ನಾಮು ॥ ೭ ॥

ವಾರಿಜಾನನೆ ತುಳಸಿಗೊಲಿದ ಹರಿನಾಮು ಕಾ- ।
ವೇರಿ ಮಧ್ಯದಲಿ ನೆಲಸಿದ ನಿನ್ನ ನಾಮು ॥
ಕ್ಷೀರಸಾಗರದಲ್ಲಿ ಶಯನವಾಗಿಹ ನಾಮು ।
ನಾರಾಯಣಾ ಕೃಷ್ಣ ಹರಿ ನಿನ್ನ ನಾಮು ॥ ೮ ॥

ಹೊಂದಿದ್ದ ಭಕ್ತವೃಂದವ ಸಲಹಿದಾ ನಾಮು ।
ತಂದು ಅಮೃತವ ಸುರರಿಗೆರೆದ ನಾಮು ॥

ಅಂದಂಬರೀಷನನು ಕಾಯ್ದ ಶ್ರೀಹರಿನಾಮು ।
ತಂದೆ ಪುರಂದರವಿಠಲ ಹರಿ ನಿನ್ನ ನಾಮು ॥ ೯ ॥

೫೬

ರಾಗ—ಪೂರ್ವಿ ತಾಳ—ಆದಿ

೧ ನೀನೇಕೊ ನಿನ್ನ ಹಂಗೇಕೊ—ನಿನ್ನ—
ನಾಮದ ಬಲವೆನಗಿದ್ದರೆ ಸಾಕೊ ॥ ಪ ॥

ಆ ಮರ ಈ ಮರವೆಂದೆನ್ನುತಿರೆ ರಾಮ- ।
ನಾಮವೆ ವ್ಯಾಧನ ಮುನಿಪನ ಮಾಡಿತು ॥ ೧ ॥

ನಾರಾಯಣೆನ್ನದೆ ನಾರಗನೆನ್ನಲು ।
ಘೋರಪಾತಕಿಯನು ನಾಮವೆ ಕಾಯ್ದಿತೊ ॥ ೨ ॥

ತಂದೆ ಪ್ರಹ್ಲಾದನ ಬಾಧೆಯ ಪಡಿಸೆ—ಗೋ- ।
ವಿಂದನೆಂಬ ಸಿರಿನಾಮವೆ ಕಾಯ್ದಿತೊ ॥ ೩ ॥

ಉತ್ತರೆಯು ಗರ್ಭದಿ ಸುತ್ತಲಸ್ತ್ರವಿರೆ ।
ಚಿತ್ರಜಪಿತ ನಿನ್ನ ನಾಮವೆ ಕಾಯ್ದಿತೊ ॥ ೪ ॥

ಕರಿಮಕರಿಗೆ ಸಿಲ್ಕಿ ಮೊರೆ ಇಡುತಿರುವಾಗ ।
ಪರಮಪುರುಷ ಹರಿನಾಮವೆ ಕಾಯ್ದಿತೊ ॥ ೫ ॥

ನಾರಿಯುಸೆಳತಂದು ಸೀರೆ ಸೆಳೆಯುತಿರೆ ।
ದ್ವಾರಕಾಪತಿ ನಿನ್ನ ನಾಮವೆ ಕಾಯ್ದಿತೊ ॥ ೬ ॥

ಹಸುಳೆ ಧ್ರುವರಾಯನು ಅಡವಿಗೆ ಪೋಪಾಗ ।
ವಸುದೇವಸುತ ನಿನ್ನ ನಾಮವೆ ಕಾಯ್ದಿತೊ ॥ ೭ ॥

೧ ಅ (೧) ಆ (P) ಪ್ರತಿಗಳಲ್ಲಿ ಈ ಹಾಡು ಪೂರ್ಣವಾಗಿದೆ. ಉಳಿದುವುಗಳಲ್ಲಿ ಪ್ರಾಸ ತಪ್ಪಿಹೋಗಿದೆ. ಮತ್ತು ಅ (೧) ರ ಪ್ರತಿಗಳಲ್ಲಿ ೫ ನುಡಿಗಳಿವೆ.

ನಿನ್ನ ನಾಮಕೆ ಸರಿಯಾವುದ ಕಾಣೆನೊ ।
ಪನ್ನಗಶಯನ ಶ್ರೀಪುರಂದರವಿಠಲ ॥ ೮ ॥

## ೫೭

ರಾಗ—ಕೇದಾರಗೌಳ ತಾಳ—ಅಟ

೧ ನಿನ್ನ ನಾಮವೆ ಎನಗೆ ಅಮೃತಾನ್ನವು ।
ಇನ್ನು ಹಸಿದಿರಲೇಕೆ ಎನಗೆ ನೀನೊಲಿದಿರಲು ॥ ಪ ॥

ಓಂಕಾರವೆಂಬ ನಾಮ ಉಪ್ಪು-ಉಪ್ಪಿನಕಾಯಿ ।
ಶಂಖಪಾಣಿಯ ನಾಮ ಪಾಕಾದಿ ಸೂಪ ॥
ಸಂಕರ್ಷಣನ ನಾಮ ದಿವ್ಯ ಶಾಲ್ಯನ್ನವು ।
ಪಂಕಜಾಕ್ಷನ ನಾಮ ಪಳಿದೆ ಬಗೆಬಗೆ ಸಾರು ॥ ೧ ॥

ಕೇಶವನೆಂಬ ನಾಮ ಕರಿದ ಹೂರಣಗಡಬು ।
ವಾಸುದೇವನ ನಾಮ ವಡೆ-ಸೇವಗೆ ॥
ಸಾಸಿರದ ನಾಮಗಳು ಸವಿಸವಿಯ ಪರಮಾನ್ನ ।
ದೋಷದೂರನ ನಾಮ ದೋಸೆ-ಸೂಸಲಗಡಬು ॥ ೨ ॥

ನಾರಾಯಣನ ನಾಮ ನೊರೆಹಾಲು ಸಕ್ಕರೆ ।
ಶ್ರೀರಾಮನಾಮ ಸರವಳಿ ಸಜ್ಜಿಗೆ ॥
ಕಾರುಣ್ಯನಿಧಿನಾಮ ಕರಿದ ಹಪ್ಪಳ-ಸಂಡಿಗೆ ।
ಪಾರಾಯಣನ ನಾಮ ಪರಿಪರಿಯ ಪಕ್ವಾನ್ನ ॥ ೩ ॥

ಯದುಪತಿಯೆಂಬ ನಾಮ ಎಣ್ಣೊರಿಗೆಯ ರಾಶಿ ।
ಮಧುಸೂದನನ ನಾಮ ಮಧುರ ಮಂಡಿಗೆಯು ॥
ಚದುರಗೋವಳ ನಾಮ ಚೆಲುವ ಬೀಸೂರಿಗೆ ।
ಪದುಮನಾಭನ ನಾಮ ಪರಿಪರಿಯ ಭಕ್ಷ್ಯ ॥ ೪ ॥

---

೧ ಮ ಪ್ರತಿಯಿಂದ ಆರಿಸಿಕೊಂಡಿದೆ.

ದೇವಕಿಸುತನ ನಾಮ ದಧ್ಯನ್ನದಾ ಮುದ್ದೆ ।
ಗೋವಿಂದನ ನಾಮ ಗುಳ್ಳೋರಿಗೆ ॥
ಮಾವಮರ್ದನನ ನಾಮ ಕಲಸುಮೇಲೋಗರ ।
ರಾವಣಾರಿಯ ನಾಮ ಇಡ್ಡಲಿಗೆ-ಸುಖಿಯುಂಡೆ ॥ ೫ ॥

ಗರುಡವಾಹನನ ನಾಮ ಘೃತಪಯೋದಧಿತಕ್ರ ।
ಪರಮಪುರುಷನ ನಾಮ ಪನ್ನೀರ ಪಾನ ॥
ಕರಿವರದ ನಿನ್ನ ನಾಮ ಕರ್ಪುರದ ವೀಳ್ಯವು ।
ಶರಧಿಶಯನನ ನಾಮ ಶಯನಪರ್ಯಂಕ ॥ ೬ ॥

ಈ ಪರಿಯ ನಾಮಾವಳಿಯನು ಸವಿದುಂಡು ।
ಆಪತ್ತು ಬಿಡಿಸೆನ್ನ ಕ್ಷುಧೆಯ ನೂಕಿ ॥
ಗೋಪಾಲ ಉರಗಾದ್ರಿ ಪುರಂದರವಿಠಲನ ।
ಶ್ರೀಪಾದವನೆ ನಂಬಿ ಅಪವರ್ಗ ಸೇರುವ ॥ ೭ ॥

## ೫೮

ರಾಗ—ಭೂಪಾಳಿ ತಾಳ—ಅಟ

೧ ನಾರಾಯಣಾ ನಿನ್ನ ನಾಮವನು ನೆನೆದರೆ ।
ಹಾರಿಹೋಹುದು ಪಾಪ ಜನ್ಮಜನ್ಮಾಂತರದಿ ।
ಶ್ರೀರಮಣ ನಿನ್ನ ಕೃಪೆಯಿತ್ತೆಮಗೆ ಮುಕ್ತಿಯ-
ದಾರಿ ತೋರಿಸೊ ಮುರಾರಿ ॥ ಪ ॥

ಸಕಲ ವೇದ-ಪುರಾಣ-ಶಾಸ್ತ್ರವನು ತಿಳಿದೋದಿ ।
ಭಕುತಿಯಿಂ ತಾಯ್ತಂದೆಗಳ ಚಿತ್ತ ಪಿಡಿದವರ ।
ರಕುಷಣೆಯ ಮಾಡಿ ಜಗದೊಳಗೆ ವಿಖ್ಯಾತ ಸುಕು-
ಮಾರ ತಾನೆನಿಸಿಕೊಂಡ ॥ ೧ ॥

---

೧ ಆ (II) ಪ್ರತಿಯೊಂದರಲ್ಲಿಯೇ ದೊರಕುತ್ತದೆ.

ವಿ. ಸೂ.— ಈ ಹಾಡಿನಲ್ಲಿ ಅಲ್ಲಲ್ಲಿ ಕೆಲವು ಭಾಗ ಬಿಟ್ಟುಹೋಗಿದೆಯೆಂದು ತೋರುವುದು.

ಪ್ರಕೃತಿಯಲಿ ಹೋಮಕೋಸ್ಕರ ಸಮಿಧೆ ತರಹೋಗಿ ।
ಕುಕರುಮುಗಳಿಂದ ಚಾಂಡಾಲಿತಿಯ ಕಂಡು ಕಾ- ।
ಮುಕನಾಗಿ ನಿಂದು ಮೈಮರೆದು ಪಾತಕಿಯು ಬಹ-
ದುರಿತವನು ತಾನರಿಯದೆ ॥ ೨ ॥

ನಿಲ್ಲುನಿಲ್ಲೆಲೆ ಕಾಂತೆ, ನಿನಗೊಲಿದೆ ನೀಸಾರೆ ।
ಸೊಲ್ಲಿಸೆನ್ನೊಡನೆ ಸತಿಯರ ಕುಲಕೆ ಕಟ್ಟಾಣಿ ।
ಚೆಲ್ಲೆನ್ನಮೇಲೆ ಕರುಣವನಿಂತು ಕೋಮಲೆಯೆ
ನಿಲ್ಲೆಂದು ಸೆರಗ ಪಿಡಿದ ॥ ೩ ॥

ಎಲೊ ವಿಪ್ರ ಕೇಳು ನಾ ಕುಲಹೀನೆ ನಮ್ಮ ಮನೆ ।
ಹೊಲಸಿನದು ಗೋಮಾಂಸ ಚರ್ಮದಾ ಹಾಸಿಕೆಯು ।
ಎಲುವಿನಾ ರಾಶಿ ಒದರುವ ನಾಯ ಹಿಂಡುಗಳು-
ಬಹು ಘೋರಘೋರವಿಹುದು ॥ ೪ ॥

ಬಲೆಗೆ ಸಿಲ್ಕಿದ ಪಕ್ಷಿ ಬೇಟೆಗಾರನದಲೇ ? ।
ಕುಲವನ್ನು ಕೂಡೆ ನಾ ಕಾಮಿನೀರನ್ನಳೆ ।
ಚಲದಿಂದ ಬದುಕುವೆನು ಸುಖದಿಂದಲಿರುವೆ ನೀ
ಬಲವು ನನಗೊಂದೆ ಎಂದ ॥ ೫ ॥

ವ್ಯರ್ಥ ಎನ್ನೊಡನೆ ಮಾತೇತಕೆಲೊ ಹಾರುವಾ ।
ಚಿತ್ತ ನನ್ನಲ್ಲಿ ಇದ್ದರೆ ಹೋಗಿ ನೀ ನಿನ್ನ ।
ಹೆತ್ತ ತಾಯ್ತಂದೆಯರ ಕೇಳು ಸಮ್ಮತಿಸಿದರೆ-
ಮತ್ತೆ ನಿನಗೊಲಿವೆನೆನಲು ॥ ೬ ॥

ಅತ್ತ ಕಾಮಿನಿಯ ಒಡಗೂಡಿ ತನ್ನಯ ಪಿತನ ।
ಹತ್ತಿರಕೆ ಹೋಗಿ ಕೇಳಿದರೆ ಆತನು ಎಂದ ।
ಉತ್ತಮದ ಕುಲವನೀಡಾಡಿ ಈ ಪಾತಕಿಯ-
ಹಸ್ತಕೊಳಗಾಗದಲಿರೈ ॥ ೭ ॥

ಆಗದಾಗದು ನನ್ನ ಕುಲ ಬಂಧು-ಬಳಗವನು ।
ನೀಗಿ ನಿನ್ನೊಡನೆ ಕೂಡುವೆನೆಂಬ ಮತವೆನಗೆ ।
ನಾಗಭೂಷಣನ ಪಣೆಗಣ್ಣಲುರಿದನ ಬಾಣ
ತಾಗಿತೆನ್ನೆದೆಗೆ ಎಂದ ॥ ೮ ॥

ಕೂಗಿ ಹೇಳುವೆ ನಿನ್ನ ಕುಲವಳಿಯದಿರು ಎಂದು ।
ಹೋಗಿ ಕೂಡದೆ ನಿನ್ನ ಹೆತ್ತ ತಾಯ್ತಂದೆಗಳಿ- ।
ಗಾಗದಿದ್ದರೆ ಆಚೆಯಾ ಮನೆಯೊಳಗೆ ಹೋಗಿ
ಇಬ್ಬರೂ ಇರುವೆವೆಂದ ॥ ೯ ॥

ಹಾಲಂತ ಕುಲವ ನೀರೊಳಗದ್ದಿ ಪೂರ್ವದಾ ।
ಶೀಲವನ್ನಳಿದು ಸತಿಯಳ ಕೂಡಿ ತಾನು ಚಾಂ- ।
ಡಾಲಿತಿಗೆ ಹತ್ತುಮಕ್ಕಳನು ಪಡೆಕೊಂಡವರ
ಲೀಲೆ ನೋಡುತಲಿ ಹಿಗ್ಗಿ ॥ ೧೦ ॥

ಬಾಳಿನಲ್ಲೀ ರೀತಿ ಅಜಮಿಳನು ಇರುತಿರಲು ।
ಕಾಲ ಬಂದೊದಗಿತ್ತು ಕರೆಯಿರೆನೆ ಪಾತಕನ ।
ಜೋಲುದುಟಿ ಡೊಂಕುಮೋರೆಯ ಅಬ್ಬರದಿ ಯಮನ
ಆಳುಗಳು ಬಂದರಾಗ ॥ ೧೧ ॥

ಎಡಗೈಯೊಳಗೆ ಪಾಶ ಹಿಡಿದು ಚಮ್ಮಟಿಗೆಗಳ ।
ಒಡನೆ ಜಾವಳಿನಾಯಿ ವಜ್ರಮೋತಿಯ ಕಾಯಿ ।
ತುಡುಕಿರೋ ಕೆಡಹಿ ಕಟ್ಟಿರೊ ಪಾತಕನನೆಂದು
ಘುಡುಘುಡಿಸಿ ಬಂದರಾಗ ॥ ೧೨ ॥

ಗಡಗಡನೆ ನಡುಗಿ ಕಂಗೆಟ್ಟು ಅಜಮಿಳನು ತಾ ।
ಕಡೆಯ ಕಾಲಕೆ ಅಂಜಿ ಮಗನ ನಾರಗನೆಂದು ।
ಒಡನೊಡನೆ ಕರೆಯಲ್ಕೆ ಯಮನಾಳ್ಗಳೋಡಿದರು
ಮುಟ್ಟಿಮುದು ಹರಿಗೆ ಮಗನು ॥ ೧೩ ॥

ಕೊರಳ ತುಳಸಿಯಮಾಲೆಯುರಳ ಪೀತಾಂಬರದ- ।
ವರಶಂಖಚಕ್ರದ್ವಾದಶನಾಮಗಳನಿಟ್ಟ ।
ಹರಿಯ ದೂತರು ಅಂಜಬೇಡ ಬೇಡೆನ್ನುತಲಿ
ಹರಿದೋಡಿಬಂದರಲ್ಲಿ ॥ ೧೪ ॥

ಪುಂಡರೀಕಾಕ್ಷನೀ ಭೃತ್ಯನನು ಬಾಧಿಸುವ ।
ಲಂಡರಿವರಾರು ನೂಕಿರಿ ನೂಕಿರೆಂತೆಂದು ।
ದಂಡವನು ತೆಗೆದು ಬೀಸಾಡಿ ಯಮನವರಿಗು- ।
ದ್ದಂಡರಿವರೆಂದರಾಗ ॥ ೧೫ ॥

ತಂದೆ ಕೇಳಿರಿ ಒಂದು ಬಿನ್ನಪವ ಲಾಲಿಸಿರಿ ।
ಒಂದುದಿನ ಹರಿಯೆಂದು ಧ್ಯಾನವನ್ನರಿಯ ನಾವ್- ।
ಬಂದಾಗ ಆತ್ಮಜನ ನಾರಗನೆ ಎಂದೆನಲು
ಕುಂದಿದುವೆ ಇವನ ಪಾಪ ? ॥ ೧೬ ॥

ಹಂದೆ-ಕುರಿಗಳಿಗೆ ನಿಮಗಿಷ್ಟು ಮಾತುಗಳೇಕೆ ।
ನಿಂದಿರದೆ ಹೋಗಿ ನಿಮ್ಮೊಡೆಯನಿಗೆ ಪೇಳೆನಲು ।
ಸಂದಲಾ ಯಮಭಟರು ಅಜಮಿಳನ ಹರಿಭಟರು
ತಂದರ್‍ವೈ ವೈಕುಂಠಕೆ ॥ ೧೭ ॥

ಮದ್ಯಪಾನವ ಮಾಡಿ ಪೆಂಗಳನು ಒಡಗೂಡಿ ।
ಅದ್ದಿದೆನು ನೂರೊಂದು ಕುಲವ ನರಕದೊಳೆಂದು ।
ಹದ್ದಿನಾ ಬಾಯೊಳಗಿನುರಗನಂತಜಮಿಳನು
ಇದ್ದನವ ನೆರೆಮರುಗುತ ॥ ೧೮ ॥

ವಿಪ್ರಕುಲದಲಿ ಹುಟ್ಟಿ ವೇದಶಾಸ್ತ್ರವನೋದಿ ।
ಮುಪ್ಪಾದ ತಾಯಿ-ತಂದೆಗಳೆಲ್ಲರನು ಬಿಟ್ಟು ।
ಒಪ್ಪಿ ಧಾರೆಯನೆರೆದ ಕುಲಸತಿಯ ಬಿಟ್ಟು ಕಂ-
ದರ್ಪನಾ ಬಲೆಗೆ ಸಿಲ್ಕಿ ॥ ೧೯ ॥

ವಿಪ್ರ ನಾನಾದರೂ ಜಗದಿ ನಿಂದ್ಯನು ಆಗಿ ।
ಇಪ್ಪೆನೀ ಪರಿಯೊಳೆನ್ನಂಥ ಪಾತಕಿಯಿಲ್ಲ ।
ತಪ್ಪಲಿಲ್ಲಪೊ ಹಣೆಯಬರೆಹವಿದು ಭುವನದೊಳು
ಬೊಪ್ಪರೇ ವಿಧಿಯೆಂದನು ॥ ೨೦ ॥

ಇಳೆಯೊಳಗೆ ಶ್ರೀಪುರಂದರವಿಠಲನಾಮವನು ।
ನೆಲೆಯರಿತು ನೆನೆವರಿಗೆ ಯಮನ ಬಾಧೆಗಳಿಲ್ಲ ।
ಸುಲಭದಿಂದಲ್ಲಿ ಸಾಯುಜ್ಯಪದವಿಯು ಸತ್ಯ
ಬಲುನಂಬಿ ಭಜಿಸಿ ಜನರು ॥ ೨೧ ॥

## ೫೯

ರಾಗ—ಮೋಹನ ತಾಳ—ಅಟ

೧ ನಾಮವನೊದಗಿಸಯ್ಯ—ಶ್ರೀಹರಿ ನಿನ್ನ ।
ನಾಮವನೊದಗಿಸಯ್ಯ ॥ ಪ ॥

ನಾಮವನೊದಗಿಸಯ್ಯ ನಾನೆಂಬ ಕರ್ತೃತ್ವ ಬಿಡಿಸಿ ।
ಸಾಮಜಪೋಷಕ ನಿನ್ನ ಪಾದಸರಸಿಜಗಳಿಗೆರಗುವೆ ॥ಅ.ಪ॥

ಮಾತನಾಡುವಾಗ ಮಲಗುವಾಗ ನಡೆಯುವಾಗ ।
ಭೀತಿಗೊಂಡಾಗ ಎಡಹಿಬೀಳುವಾಗ ॥
‘ಸೀತಾರಾಮ ಗೋವಿಂದ ಶ್ರೀವೈಕುಂಠಾಧೀಶ ಅ- ।
ನಾಥ ಬಾಂಧವ, ಕೃಷ್ಣಾ, ಕೃಷ್ಣಾ’ ಎಂದು ಕರೆವ ॥ ೧ ॥

ತನು ತಾಳದಂಥ ಕ್ಷುಧೆ ದಾಹವಿಕಾರಗ- ।
ಳನುಭವಿಸುತ ಕಂಗೆಡುವಂಥ ಸಮಯದಲ್ಲಿ ॥
ವನಜನಾಭ ಗೋವಿಂದ, ವಾಣೀಪತಿಪಿತ ಕೃಷ್ಣ ।
ದನುಜಮರ್ದನ ಭಕ್ತವತ್ಸಲನೆಂದು ಕರೆವ ॥ ೨ ॥

೧ ಅ (IIb) ಪ್ರತಿಯೊಂದರಲ್ಲಿಯು ಸಿಕ್ಕುತ್ತದೆ.

ಅಸಹ್ಯವಾದ ಜರೆ ರೋಗಂಗಳಾವರಿಸಿ ।
ಅಸುಗಳು ಕಂಠಗತವಾಗಿ ಧೃತಿತಪ್ಪಿ ॥
ವಿಷಮದೂತನ ಕೈವಶವಪ್ಪ ಸಮಯದಲ್ಲಿ ।
ಬಿಸಜಾಕ್ಷ ಪುರಂದರವಿಠಲನೆಂದು ಕರೆವ ॥ ೩ ॥

## ೬೦

ರಾಗ—ರೇಗುಪ್ತಿ ತಾಳ—ಅಟ

೧ ಕೇಶವ ನಾರಾಯಣ ಮಾಧವ—ಹರಿ ।
ವಾಸುದೇವ ಎನಬಾರದೆ ? ॥ ಪ ॥

ಕೇಶವನ ನಾಮವನು ಏಸು ಬಾರಿ ನೆನೆದರೂ ।
ದೋಷಪರಿಹರವಪ್ಪುದು—ಏ ಜಿಹ್ವೆ ! ॥ ಅ. ಪ ॥

ಜಲಜನಾಭನ ನಾಮವು—ಈ ಜಗ- ।
ದೊಳು ಜನಭಯಹರಣ ॥
ಸುಲಭವೇದ್ಯನೆನಲೇಕ ಸುಖಕೆ ಸಾಧನವಿದು ।
ಬಲಿಯೆಂಬ ಭಕ್ತನು ಬಗೆದು ರಸವನುಂಡ—ಹೇ ಜಿಹ್ವೆ ॥ ೧ ॥

(ಎರಡನೆಯ ನುಡಿಯನ್ನು ಮೂಲಪ್ರತಿಯಲ್ಲಿ ಬರೆದಿಲ್ಲ.)

ಹೇಮಕಶ್ಯಪ ಸಂಹಾರ—ಭಕ್ತರು ನಿನ್ನ- ।
ನಾಮವ ಸವಿದುಂಬರು ॥
ವಾಮನ ವಾಮನನೆಂದು ವಂದಿಸಿದವರಿಗೆ ।
ಶ್ರೀಮದನಂತ ಪುರಂದರವಿಠಲನು ಕಾಮಿತ ಫಲವೀವನು—
ಹೇ ಜಿಹ್ವೆ ॥ ೩ ॥

---

೧ ಆ (II) ಪ್ರತಿಯೊಂದರಲ್ಲಿಯಷ್ಟೆ ಸಿಕ್ಕುತ್ತಿದೆ.

## ೬೧

ರಾಗ—ನಾಟ ತಾಳ—ಅಟ

೧ ಎಲೆ ಮನವೆ ಹರಿಧ್ಯಾನವ ಮಾಡು ॥ ಪ ॥

ಎಲೆ ಮನವೇ ಕೇಳು ಕೇಶವನ ನಾಮವ ನುತಿಸು ।
ಎಲೆ ಮನವೆ ಮುರವೈರಿಯಂಘ್ರಿಗಳ ಭಜಿಸು ।
ಎಲೆಲೆ ಕರಗಳಿರ ಶ್ರೀಧರನ ಸೇವೆಯ ಮಾಡಿ ।
ಎಲೆ ಕರ್ಣಗಳಿರ ಅಚ್ಯುತನ ಕಥೆ ಕೇಳಿ ॥ ೧ ॥

ಎಲೆ ನೇತ್ರಗಳಿರ ಶ್ರೀಕೃಷ್ಣಮೂರ್ತಿಯ ನೋಡಿ ।
ಎಲೆ ಪಾದಗಳಿರ ಹರಿಯಾತ್ರೆಯನು ಮಾಡಿ ॥
ಎಲೆ ನಾಸಿಕವೆ ಮುಕುಂದನ ಚರಣಕರ್ಪಿಸಿದ ।
ತುಳಸೀಪರಿಮಳವನಾಘ್ರಾಣಿಸನುದಿನವು ॥ ೨ ॥

ಎಲೆ ಶಿರವೆ ನೀನಧೋಕ್ಷಜನ ಶ್ರೀಚರಣದ ।
ಜಲರುಹದೊಳಗಳಿಯಂತೆ ಲೋಲಾಡು ॥
ಎಲೆ ತನುವೆ ನೀನು ಶ್ರೀಪುರಂದರವಿಠಲನ ।
ಸಲೆ ಭಕುತಜನರಂಗಸಂಗತಿಯಲಿ ಬಾಳು ॥ ೩ ॥

## ೬೨

ರಾಗ—ಮೋಹನ ತಾಳ—ಝಂಪೆ

೨ ಆವಗಂ ನೆನೆಮನವೆ ಸಕಲಚಿಂತೆಯ ಕಡಿದು ।
ಕಾವುದಿದು ಕೃಷ್ಣನಾಮ ॥ ಪ ॥

---

೧ ಶ. ಎ. ಓ. ಪ್ರತಿಗಳಿಂದ ಆರಿಸಿಕೊಂಡಿದೆ.

೨ ಇ ಪ್ರತಿಯಿಂದ ಆರಿಸಿಕೊಂಡಿದೆ.

ಭಾವಿಸಲು ಯಮದೂತಮದಕರಿಗೆ ಕೇಸರಿಯು ।
ಶ್ರೀಕೃಷ್ಣದಿವ್ಯನಾಮ ॥ ಅ. ಪ ॥

ವರವೇದ-ಶಾಸ್ತ್ರಗಳ ವ್ಯಾಸಮುನಿ ಮಥಿಸಲು
ಸುಧೆಯಾದ ಕೃಷ್ಣನಾಮ ।
ಪರಮಭಕುತರು ಸವಿದು ಉಂಡು ಮುನಿಗಳ ಕಿವಿಗೆ
ಎರೆದ ಶ್ರೀಕೃಷ್ಣನಾಮ ॥
ಗುರುದ್ರೋಣ-ಭೀಷ್ಮ-ಅಶ್ವತ್ಥಾಮ-ಜಯದ್ರಥನ
ಜಯಿಸಿತ್ತೈ ಕೃಷ್ಣನಾಮ ।
ಕುರುಸೇನೆಶರಧಿಯನು ಪಾಂಡವರ ದಾಟಿಸಿತು
ಶ್ರೀಕೃಷ್ಣದಿವ್ಯನಾಮ ॥ ೧ ॥

ದ್ರೌಪದೀದೇವಿಯಭಿಮಾನವನು ಕಾಯ್ದುದಿದು
ಶ್ರೀಕೃಷ್ಣದಿವ್ಯನಾಮ ।
ಆಪತ್ತು ಪರಿಹರಿಸಿ ಕುಕ್ಷಿಯೊಳು ಪರಿಕ್ಷಿತನ
ರಕ್ಷಿಸಿತು ಕೃಷ್ಣನಾಮ ॥
ಗೋಪವನಿತೆಯರೆಲ್ಲ ಕುಟ್ಟುತಲಿ-ಬೀಸುತಲಿ
ಪಾಡುವುದು ಕೃಷ್ಣನಾಮ ।
ತಾಪಸನು ಸಾಂಧೀಪ ಮುಚುಕುಂದರಿಗೆ ಮನೋ-
ರಥವು ಶ್ರೀಕೃಷ್ಣನಾಮ ॥ ೨ ॥

ಸುಖದ ಅವಸಾನದಲಿ ಈ ನಾಮ ಗಾಯನವು
ಶ್ರೀಕೃಷ್ಣದಿವ್ಯನಾಮ ।
ದುಃಖಾವಸಾನದಲಿ ಈ ನಾಮವೇ ಜಪವು
ಶ್ರೀಕೃಷ್ಣದಿವ್ಯನಾಮ ॥
ಸಕಲ ಸುಖಗಳ ಕೊಟ್ಟು ಸದ್ಗತಿಯನೀವುದಿದು
ಶ್ರೀಕೃಷ್ಣದಿವ್ಯನಾಮ ॥
ಸುಖವನಧಿ ಅರವಿಂದನಾಭ ಪುರಂದರವಿಠಲ
ನೊಲುಮೆಯಿದು ದಿವ್ಯನಾಮ ॥ ೩ ॥

## ೬೩

ರಾಗ—ಮಧ್ಯಮಾವತಿ ತಾಳ—ಅಟ

೧ ಅಚ್ಯುತಾನಂತ ಗೋವಿಂದ—ಹರಿ- |
ಸಚ್ಚಿದಾನಂದಸ್ವರೂಪ ಮುಕುಂದ || ಪ ||

ಕೇಶವ ಕೃಷ್ಣ ಮುಕುಂದ—ಹರಿ- |
ವಾಸುದೇವ ಗುರು ಜಗದಾದಿವಂದ್ಯ ||
ಯಶೋದೆಯ ಸುಕೃತದ ಕಂದ—ನಮ್ಮ ||
ಶೇಷಶಯನ ಭಕ್ತಹೃದಯಾನಂದ || ೧ ||

ನಾರಾಯಣ ನಿನ್ನ ನಾಮ—ಎನ್ನ- |
ನಾಲಗೆಯೊಳಗಿರಬೇಕೆಂಬ ನೇಮ ||
ನಾನು ಬೇಡುವೆ ನಿನ್ನ ಪ್ರೇಮ—ಎನ್ನ |
ಪಯಣಸಮಯಕೊದಗಲಿ ಗುಣಧಾಮ || ೨ ||

ಮಾಧವ ಮಂಗಳಗಾತ್ರ—ಸ್ವಾಮಿ- |
ಯಾದವ ಕೈಲಾಸವಾಸನ ಮಿತ್ರ ||
ಮಹಿಮೆ ಕೇಳಿದರೆ ವಿಚಿತ್ರ—ಎನ್ನ- |
ಮನಮೆಚ್ಚಲಿ ಸತ್ಯಭಾಮಾಕಳತ್ರ || ೩ ||

ಗೋವಿಂದ ಗೋಪಾಲ ಬಾಲ—ಸೋಳ- |
ಸಾವಿರ ಗೋಪಿಯರ ಆನಂದಲೀಲಾ ||
ಜೀವಮಣಿಯು ಮುಕ್ತಾಮಾಲಾ—ನಿನ್ನ- |
ನೇನೆಂದು ಕರೆಯಲಿ ಸುಗ್ರೀವಪಾಲ || ೪ ||

ವಿಷ್ಣುಚಕ್ರವು ಬಂದು ಸುತ್ತಿ—ಮೂರು- |
ಸೃಷ್ಟಿಯನೆಲ್ಲವ ತಿರುಗಿ ಬೆನ್ನಟ್ಟಿ ||

---

೧ ಶ್ರೀ ಪ್ರತಿಯಲ್ಲಿ ಈ ಹಾಡು ಶುದ್ಧರೂಪದಲ್ಲಿದೆ. ಎ. ಓ ಪ್ರತಿಗಳಲ್ಲಿ ನುಡಿ ನುಡಿಗಳೇ ಬಿಡಲಾಗಿವೆ.

ಕೃಷ್ಣ ಸಲಹೆಂದು ಮೊರೆಯಿಟ್ಟ—ಮುನಿ- ।
ಶ್ರೇಷ್ಠಗಿಷ್ಟರ ಮೇಲೆ ಅಭಯವ ಕೊಟ್ಟೆ ॥ ೫ ॥

ಮಧುಸೂದನ ಮಾರಜನಕ—ನೀನು- ।
ಮದಗಜ ಸೀಳಿ ಮಲ್ಲರ ಗೆಲಿದೆ ತವಕ ।
ಒದಗಿ ಕಂಸನ ಕೊಂದ ಬಳಿಕ—ನೀ- ।
ಮುದುಕಗೆ ಪಟ್ಟವ ಕಟ್ಟಿದೆ ಧನಿಕ ॥ ೬ ॥

ತ್ರಿವಿಕ್ರಮ ತ್ರೈಲೋಕ್ಯನಾಥ—ದೇವ—।
ತ್ರಿಪುರರ ಸತಿಯರ ವ್ರತಕೆ ವಿಘಾತ ॥
ಯದುವಂಶ ಪಾಂಡವಪ್ರೀತ—ಎನ್ನ—।
ಹೃದಯದೊಳಡಗಿರೊ ಶ್ರೀಜಗನ್ನಾಥ ॥ ೭ ॥

ವಾಮನರೂಪದಿ ಬಂದು—ಬಲಿಯ ।
ದಾನವ ಬೇಡಲು ಉಚಿತವು ಎಂದು ॥
ಧಾರೆಯನೆರೆಯಲು ಅಂದು—ಬೆಳೆದು ।
ಧಾರಿಣಿಯೆಲ್ಲವನಳೆದೆ ನೀನಂದು ॥ ೮ ॥

ಶ್ರೀಧರ ಶೃಂಗಾರಾಧಾರ—ದಿವ್ಯ ।
ಶ್ರೀವತ್ಸಲಾಂಛನ ಶ್ರೀರಘುವೀರ ॥
ವಾರಿಧಿಸಮ ಗಂಭೀರ—ಗೈದೆ ।
ಕ್ರೂರರಕ್ಕಸರನೆಲ್ಲರ ಸಂಹಾರ ॥ ೯ ॥

ಹೃಷೀಕೇಶ ವೃಂದಾವನದಲಿ—ನೀ ।
ನಿಶೆಯಲಿ ಕೊಳಲನೂದುತ ಇರಲಲ್ಲಿ ॥
ಋಷಿವೃಂದವಂದ್ಯ ನಿನ್ನಗಲಿ—ನಿ- ।
ಮಿಷವು ಬಿಟ್ಟಿರಲಾರೆ ನಿಲ್ಲೋ ಮನದಲಿ ॥ ೧೦ ॥

ಪದ್ಮನಾಭನೆ ಕೇಳೊ ಮುನ್ನ—ಎನ್ನ ।
ಸುದ್ದಿಯನೆಲ್ಲವ ಉಸಿರುವೆ ಘನ್ನ ॥

ಅದ್ವೈತರೂಪ ಪ್ರಸನ್ನ—ಸ್ವಾಮಿ ।
ಇದ್ದ ಠಾವಿಗೆ ಕರೆದೊಯ್ಯೊ ನೀನೆನ್ನ ॥ ೧೧ ॥

ದಾಮೋದರ ದನುಜಹರಣ—ಹರಿ- ।
ರಾಮಚಂದ್ರನೆ ರಘುಕುಲ ಸಾರ್ವಭೌಮಾ ॥
ಸ್ವಾಮಿ ನೀಲಮೇಘಶ್ಯಾಮ—ದೇವ- ।
ಭೂಮಿಜಾಪತಿಯೆಂಬ ಬಹುಪುಣ್ಯನಾಮ ॥ ೧೨ ॥

ಸಂಕರ್ಷಣ ಸರುವಾಭರಣ—ಇಟ್ಟು- ।
ಪಂಕಜಮುಖಿ ದ್ರೌಪದಿ ಮೇಲೆ ಕರುಣ ॥
ಕುಂಕುಮಾಂಕಿತ ನೀಲಕಿರಣ—ರತ್ನ- ।
ಕಂಕಣಭೂಷಣ ಕೌಸ್ತುಭಾಭರಣ ॥ ೧೩ ॥

ವಾಸುದೇವ ಕೇಳೊ ನಿನ್ನ—ದಿವ್ಯ- ।
ಸಾಸಿರನಾಮವ ನೆನೆವನೆ ಧನ್ಯ ॥
ಬೇಸರದೆ ಸಲಹಬೇಕೆನ್ನ—ಸ್ವಲ್ಪ- ।
ಗಾಸಿಯ ಮಾಡದೆ ಕರುಣಸಂಪನ್ನ ॥ ೧೪ ॥

ಪ್ರದ್ಯುಮ್ನ ನೀನೆಂದು ಕರೆಯೆ—ದುರ್- ।
ಬುದ್ಧಿಯನೆಲ್ಲವ ನಿನ್ನಿಂದ ಮರೆಯೆ ॥
ಇದ್ದ ದುರ್ವಿಷಯವ ತೊರೆಯೆ—ಸಾಧು- ।
ಸಜ್ಜನಸಂಗನೆ ನಿನ್ನೊಳು ಬೆರೆಯೆ ॥ ೧೫ ॥

ಅನಿರುದ್ಧ ಗೋಕುಲದಲ್ಲಿ—ನೀ- ।
ಅನುದಿನ ಇರಲು ಗೋಪಿಯರ ಮನೆಯಲಿ ॥
ಸನಕಾದಿವಂದ್ಯ ನಿನ್ನಗಲಿ—ಒಂದು ।
ಕ್ಷಣವೂ ಬಿಟ್ಟಿರಲಾರೆ ನಿಲ್ಲೋ ಮನದಲಿ ॥ ೧೬ ॥

ಪುರುಷೋತ್ತಮಗಾರು ಸಾಟಿ?—ಶ್ರೀ- ।
ಪರಬ್ರಹ್ಮಸ್ವರೂಪ ನಿನಗಾರು ಧಾಟಿ? ॥

ನಿರವದ್ಯ ಭಕ್ತಕಿರೀಟಿ—ನಿನ್ನ- ।
ಶರೀರದೊಳಗೆ ಕಂಡ ಬ್ರಹ್ಮಾಂಡಕೋಟಿ ॥ ೧೭ ॥

ಅಧೋಕ್ಷಜ ಅಸುರಸಂಹಾರಿ—ದೇವ- ।
ಅದುಭುತ ರೂಪನೆ ಶಿಶುಪಾಲವೈರಿ ॥
ಭಜಕರ ಪಾಲಿಪ ಶೌರಿ—ನೀ- ।
ಅಜಮಿಳ ಕರೆದರೆ ಕಾಯ್ದೆ ಮುರಾರಿ ॥ ೧೮ ॥

ನರಸಿಂಹರೂಪವ ತಾಳಿ—ಬಂದೆ ।
ಕರೆಯೆ ಕಂಬದಿ ಕಂದನ ಮಾತ ಕೇಳಿ ॥
ದುರುಳರಕ್ಕಸನನು ಸೀಳಿ—ನಿನ್ನ- ।
ಕೊರಳಲಿ ಧರಿಸಿದೆ ಕರುಳಿನ ಮಾಲಿ ॥ ೧೯ ॥

ಅಚ್ಯುತ ನೀನತಿ ಮುದ್ದು—ಗೋಪಿ—।
ಬಚ್ಚಿಟ್ಟ ಹಾಲು-ಮೊಸರು-ಬೆಣ್ಣೆ ಮೆದ್ದು ॥
ತುಚ್ಛ ಶಕಟನ ಕಾಲಿಲೊದ್ದು—ಕರು- ।
ಬಿಚ್ಚಿ ಓಡಿದೆ ಚೋರಕಂಡಿಯಲಿ ಕದ್ದು ॥ ೨೦ ॥

ಜನಾರ್ದನ ಕೇಳೊ ಬಿನ್ನಪವ—ನೀ- ।
ತೊಲಗಿಸು ಬಂದೆನ್ನಮನದ ಕಲುಷವ ॥
ಹೊರಲಾರೆ ಭೂಭಾರತನುವ—ನಿನ್ನ- ।
ಸ್ಮರಣೆ ಇದ್ದವ ಮುಕ್ತಿಪಥವನೆ ಗೆಲುವ ॥ ೨೧ ॥

ಉಪೇಂದ್ರನುರಗನ ತುಳಿಯೆ—ಆಗ- ।
ಅಪರಿಮಿತ ವಿಷದ ಮಡುವು ಕಲಕಿ ಉಳಿಯೆ ।
ತ್ರಿಪುರರಕ್ಕಸರನು ಗೆಲಿಯೆ—ನಿನ್ನ- ।
ಚಪಲತನವ ನೋಡಿ ಸುರರೆಲ್ಲ ಬೆರೆಯೆ ॥ ೨೨ ॥

ಹರಿಹರಿ ಎಂದರೆ ಪಾಪ—ರಾಶಿ- ।
ಹರಿದುಹೋಗುವುದು ಮನದ ಸಂತಾಪ ॥

ಸರುವರೊಳಗೆ ವಿಶ್ವರೂಪ—ನಿನ್ನ- ।
ನೆರೆನಂಬಿದವರನು ಸಲಹು ಪ್ರತಾಪ ॥ ೨೩ ॥

ಕೃಷ್ಣ ಕೃಷ್ಣನೆಂಬ ಸೊಲ್ಲ—ಕೇಳಿ- ।
ನಷ್ಟವಾಗಿಹೋಯ್ತು ಪಾತಕವೆಲ್ಲ ॥
ಮುಟ್ಟಿ ಭಜಿಸಿರಿ ಜನರೆಲ್ಲ—ಪುರಂದರ- ।
ವಿಟ್ಠಲನಲ್ಲದೆ ಪರದೈವವಿಲ್ಲ ॥ ೨೪ ॥

## ೬೪

## ಸುಳಾದಿ

### ಧ್ರುವತಾಳ

೧ ಅಕಿಂಚನಗೆ ಅನರ್ಘ್ಯವಾದಂತೆ ।
ಅರತಂಗೆ ಆರತವಾದಂತೆ ।
ಅಂಧಕಂಗೆ ಅಕ್ಷಿಯಾದಂತೆ ।
ಅರವಿಂದಕಾದಿತ್ಯನಾದಂತೆ ।
ಅಳಿಗೆ ಅಮರಾಂಘ್ರಿಪವಾದಂತೆ ।
ಅಪುಣ್ಯಕ್ಕೆ ಅಮೃತವಾದಂತೆ ।
ಅಯ್ಯಾ ಅಕಿಂಚನಗೆ ಅನರ್ಘವಾದಂತೆ ।
ಅಪಾರ ಸಂಸಾರಭಯಭೇದ ।
ಅನೇಕದ ಅಧಿಪತಿಯಾದ ।
ಪುರಂದರವಿಟ್ಠಲರಾಯ ।
ಎನಗೆ ನಿನ್ನ ಸಿರಿನಾಮ ದೊರೆಕಿಸು ದೇವಾ ॥ ೧ ॥

೧ ಆ (ಮುದ್ರಿತ) ಜ ತ ಪ್ರತಿಗಳಿಂದ ಆರಿಸಿಕೊಂಡಿದೆ.

ಮಟ್ಟೆ ತಾಳ

ಅಕಳಂಕಚರಿತ ನಮೋ ನಮೋ ।
ಸಕಲಸ್ವರೂಪ ನಮೋ ನಮೋ ।
ಭಕುತವತ್ಸಲ ನಮೋ ನಮೋ ।
ಬಕವಿದಾರಣ ನಮೋ ನಮೋ ।
ಅಕುತೋಭಯ ನಮೋ ನಮೋ ।
ರುಕುಮಿಣೀಪತಿ ಪುರಂದರವಿಟ್ಠಲ ನಮೋ ನಮೋ ॥ ೨ ॥

ಏಕತಾಳ

ಹೃದಯಕಮಲದಲ್ಲಿ ನಾ ನಿನ್ನ ಪಾದ- ।
ಪದುಮವ ನೆನೆವಂತೆ ಮಾಡು ।
ಯದುರಾಜಾಧಿರಾಜ, ಸುದರುಶನಧರ ।
ಇದನೆ ಕೃಪೆಮಾಡೆನಗೆ ।
ಮದನಪಿತ ಪುರಂದರವಿಟ್ಠಲರಾಯ ॥ ೩ ॥

ಅಟತಾಳ

ಮನೆಯಾಶೆ ಮನ್ನಣೆಗೆಡಿಸುತಲಿದೆಯೆನ್ನ- ।
ಮನೆ-ಮನೆವಾರತೆಯಾಶೆ ಬಲು ಬಾಧಿಸುತಿದೆ ।
ಧನದಾಶೆ ದೈನ್ಯಬಡಿಸುತಿದೆ ।
ವನಿತೆಯರಾಶೆ ಒಡಲ ಸುಡುತಿದೆ ।
ಇನಿತಾಶೆಯ ಬಿಡಿಸು ಬುದ್ಧಿಯಲಿ ನಿನ್ನ ।
ನೆನೆವಂತೆ ಮಾಡೆನ್ನ ಪುರಂದರವಿಠಲ ॥ ೪ ॥

ಝಂಪೆ

ಮೊರೆಹೊಕ್ಕವರ ಕಾವ, ಮಾರಾಂತರನಿರಿವ ।
ದೇವ ನಿನಗಲ್ಲದುದುಂಟೆ ಸಚರಾಚರದೊಳು ।
ನಿನಗಲ್ಲದುದುಂಟೆ ನಾ ನಿನ್ನ ಮೊರೆಹೊಕ್ಕೆನಯ್ಯ ।
ನೀಯೆನ್ನ ಕಾಯ್ದುಕೊ ಪುರಂದರವಿಟ್ಠಲರಾಯ ॥ ೫ ॥

ಜತೆ

ನಿತ್ಯಾನಿತ್ಯ ಸುವಸ್ತುಗಳೊಳಗೆ ।
ನಿತ್ಯ ಸುನಿತ್ಯ ಪುರಂದರವಿಠಲ ॥

## ೬೫

ರಾಗ—ಬಿಲಹರಿ  ತಾಳ—ಅಟ

೧ ಹಣ್ಣು ಬಂದಿದೆ ಕೊಳ್ಳಿರೊ—ಹರಿದಾಸರು ।
ಹಣ್ಣು ಬಂದಿದೆ ಕೊಳ್ಳಿರೊ ॥ ಪ ॥

ಚಿನ್ನ ಬಾಲಕೃಷ್ಣನೆಂಬ ।
ಚಿನ್ನಾದ ಬಾಳೆಯ ॥ ಅ. ಪ ॥

ಕೊಳೆತುಹೋಗುವುದಲ್ಲ, ಹುಳಿತು ನಾರುವುದಲ್ಲ ।
ಕಳೆದು ಬೀಸಾಡಿಸಿಕೊಳುವುದಲ್ಲ; ॥
ಅಳತೆಗೊಂಬುದಲ್ಲ, ಗಿಳಿ ಕಚ್ಚಿ ತಿಂಬುದಲ್ಲ ।
ಒಳಿತಾದ ಶ್ರೀಹರಿ ಎಂಬ ಮಾವಿನಹಣ್ಣು ॥ ೧ ॥

ಅಜನ ಪಡೆದ ಹಣ್ಣು ಗಜವ ಸಲಹಿದ ಹಣ್ಣು ।
ತ್ರಿಜಗದಿ ಮುನಿಗಳಿಗೆ ತೋರಿದ ಹಣ್ಣು ॥
ತ್ರಿಜಗವಂದಿತಪಾದವೆಂಬ ಮಾವಿನಹಣ್ಣು ।
ಸುಜನಾನಂದಿಯರು ನೀವ್ ಕೊಳಬನ್ನಿರಮ್ಮ ॥ ೨ ॥

ತರುವಕಾಯ್ವ ಹಣ್ಣು, ಉರಗನ ತುಳಿದ ಹಣ್ಣು ।
ಕರಿದರಿ ಕಂಬದಿಂದ ಬಂದ ಹಣ್ಣು ॥
ಮರುಗುವ ಧ್ರುವನ ಉನ್ನತನ ಮಾಡಿದ ಹಣ್ಣು ।
ಪುರಂದರವಿಠಲನೆಂಬ ಹಣ್ಣು ಕೊಳಬನ್ನಿ ॥ ೩ ॥

---

೧ ಎ. ಓ. ಮು. ಶ್ರೀ. ಪ್ರತಿಗಳನ್ನು ಹೊಂದಿಸಿ ಬರೆದಿದೆ.

೬೬

ರಾಗ—ಪಂತುವರಾಳಿ ತಾಳ—

೧ ಮುತ್ತು ಕೊಳ್ಳಿರೊ—ಜನರು—ಮುತ್ತು ಕೊಳ್ಳಿರೊ॥ ಪ ॥
ಮುತ್ತು ಬಂದಿದೆ ಕೊಳ್ಳಿರೈಯ ।
ಸಚ್ಚಿದಾನಂದದ ದಿವ್ಯ ಮುತ್ತು ॥ ಅ. ಪ ॥

ಜ್ಞಾನವೆಂಬ ದಾರದಲ್ಲಿ ಪೋಣಿಸಿದ ಆಣಿ ಮುತ್ತು ।
ಧ್ಯಾನಕೊಟ್ಟುಕೊಂಬುದಿದನು ಮಾನ್ಯರಾದ ಭಕ್ತಜನರು ॥ ೧ ॥

ಕಟ್ಟಬಾರದಿದನು ಮೂಗಿನಲಿಟ್ಟು ಮೆರೆಯಬಾರದು ।
ಕಷ್ಟವಿಲ್ಲದೆ ಸೃಷ್ಟಿಗೊಡೆಯ ಕೃಷ್ಣನೆಂಬ ಶ್ರೇಷ್ಠಮುತ್ತು ॥ ೨ ॥

ಪಿಡಿಯಲಿಕ್ಕೆ ಸಿಲುಕದು, ಕಡೆಯ ಬೆಲೆಯ ಕಾಣದು ।
ಹಿಡಿಯಬಲ್ಲ ಪುರಂದರವಿಠಲ ಒಡೆಯನೆಂಬ ದಿವ್ಯಮುತ್ತು ॥ ೩ ॥

೬೭

ರಾಗ—ಕಲ್ಯಾಣಿ ತಾಳ—ಅಟ

೨ ಕಲ್ಲುಸಕ್ಕರೆ ಕೊಳ್ಳಿರೊ—ನೀವೆಲ್ಲರು ।
ಕಲ್ಲುಸಕ್ಕರೆ ಕೊಳ್ಳಿರೊ ॥ ಪ ॥

ಕಲ್ಲುಸಕ್ಕರೆ ಸವಿ ಬಲ್ಲವರೆ ಬಲ್ಲರು ।
ಫುಲ್ಲನಾಭ ಕೃಷ್ಣನ ದಿವ್ಯನಾಮವೆಂಬ ॥ ಅ. ಪ ॥

ಎತ್ತಹೇರುವುದಲ್ಲ ಹೊತ್ತುಮಾರುವುದಲ್ಲ ।
ಒತ್ತೊತ್ತಿ ಗೋಣಿಯ ತುಂಬುವುದಲ್ಲ ॥

---

೧ ಗ (A) ಎ ಪ್ರತಿಗಳಿಂದ ಆರಿಸಿಕೊಂಡಿದೆ.

೨ ಅ ಇ (೧೦) ಪ್ರತಿಗಳಲ್ಲಿಯ ಪಾಠ ಶುದ್ಧವಿದೆ. ಮಿಕ್ಕವುಗಳೆಲ್ಲ ತಿದ್ದು-ಪಡಿಗೆ ಒಳಗಾಗಿದೆ.

ಎತ್ತಹೋದರು ಮತ್ತೆ ಸುಂಕವು ಇದಕಿಲ್ಲ ।
ಹತ್ತೆಂಟು ಸಾವಿರಕೆ ಬೆಲೆಯಿಲ್ಲದಂತಹ ॥ ೧ ॥

ನಷ್ಟಬೀಳುವುದಲ್ಲ ನಾಶವಾಗುವುದಲ್ಲ ।
ಕಟ್ಟಿ ಇಟ್ಟರೆ ಮತ್ತೆ ಕೆಡುವುದಲ್ಲ ॥
ಎಷ್ಟು ದಿನವಿಟ್ಟರೂ ಕೆಟ್ಟುಹೋಗುವುದಲ್ಲ ।
ಪಟ್ಟಣದೊಳಗೊಂದು ಲಾಭವೆನಿಸುವಂಥ ॥ ೨ ॥

ಸಂತೆಪೇಟೆಗೆ ಹೋಗಿ ಶ್ರಮಪಡಿಸುವುದಲ್ಲ ।
ಎಂತು ಮಾರಿದರದಕಂತವಿಲ್ಲ ॥
ಸಂತತ ಪುರಂದರವಿಠಲನ ನಾಮವ ।
ಎಂತು ನೆನೆಯಲು ಪಾಪ ಪರಿಹಾರವಲ್ಲದೆ ॥ ೩ ॥

## ೭೮

ರಾಗ—ಆನಂದಭೈರವಿ ತಾಳ—ಅಟ

೧ ಇನ್ನೇಕೆ ಯಮನ ಬಾಧೆಗಳು ? ।
ಎನ್ನ ಜಿಹ್ವೆಯೊಳಗೆ ಹರಿನಾಮವಿರಲು ॥ ಪ ॥

ಪತಿತಪಾವನನೆಂಬ ನಾಮ— ಸಕಲ- ।
ಶ್ರುತಿತತಿಗಳಿಗೆಲ್ಲ ಸಿಲುಕದೀ ನಾಮ ॥
ಕ್ರತುಕೋಟಿ ಫಲ ಒಂದೇ ನಾಮ—ಸದ್- ।
ಗತಿಗೆ ಸಂಗಡ ಬಾಹೋದತಿ ದಿವ್ಯನಾಮ ॥ ೧ ॥

ಮುನ್ನ ಪ್ರಹ್ಲಾದನೆ ಸಾಕ್ಷಿ—ನಮ್ಮ- ।
ಕನ್ಯಾಶಿರೋಮಣಿ ದ್ರೌಪದಿ ಸಾಕ್ಷಿ ॥

೧ ಅ (P) ೩. (೧೦) ಶ್ರೀ. ಶ್ರುತಿಗಳನ್ನು ಸೇರಿಸಿ ಬರೆದಿದೆ.

೧ ಚೆನ್ನ ಅಜಮಿಳನೊಬ್ಬ ಸಾಕ್ಷಿ—ಆ ।
ಉನ್ನಂತ ಲೋಕವಾಳುವ ಧ್ರುವಸಾಕ್ಷಿ. ॥ ೨ ॥
ಹದಿನಾಲ್ಕು ಲೋಕವಾಳುವ—ನಮ್ಮ ।
ಮದನಜನಕನಾಗಿ ಮಹಿಮೆ ತೋರುವ ॥
ಪದುಮನಾಭನಾಗಿ ಮೆರೆವ—ನಮ್ಮ ।
ಪುರಂದರವಿಠಲನ ಹರುಷದಿ ಕರೆವ ॥ ೩ ॥

## ೭೯

### ಉಗಾಭೋಗ

೨ ಬೆಟ್ಟದಂಥ ದುರಿತವು ಸುತ್ತುಮುತ್ತು ಇರಲಾಗಿ ।
ಕೃಷ್ಣನಾಮದ ಕಿಡಿಬಿದ್ದು ದುರಿತವು ಬೇವುದ ಕಂಡೆ ।
ಎಲೆಎಲೆ ದುರಿತವೆ, ನಿಲ್ಲ-ನಿಲ್ಲದೆ ಹೋಗು ।
ಎಲೆಎಲೆ ದುರಿತವೆ, ತಿರುಗಿ ನೋಡದೆ ಹೋಗು ।
ಎಲೆಎಲೆ ದುರಿತವೆ, ಮರಳಿ ನೋಡದೆ ಹೋಗು ।
ಎನ್ನೊಡೆಯ ಪಂಢರಿರಾಯ ಪುರಂದರವಿಠಲ ಕಂಡರೆ ।
ಶಿರವ ಚಂಡಾಡುವನು—ತಿರುಗಿ ನೋಡದೆ ಹೋಗು ॥

## ೮೦

೩ ಪಾತಕರೊಳಗೆಲ್ಲ ನಾನು ವೆಗ್ಗಳನಯ್ಯ ।
ಪ್ರಾಯಶ್ಚಿತ್ತದಲಿ ನಿನ್ನ ನಾಮ ವೆಗ್ಗಳವಯ್ಯ ।
ಪಾತಕವ ನಾ ಮಾಡಿದೆನು ಪ್ರಾಯಶ್ಚಿತ್ತವ ನೀಡು ।
ಇನ್ನೇತರ ಭಯವಯ್ಯ ಪುರಂದರವಿಠಲ ॥

---

೧ ಚಿನ್ನನೆಂದಜಮಿಳ ಸಾಕ್ಷಿ (ಏ. ೬).
೨ ಆ (VI) ೬ ಪ್ರತಿಗಳಿಂದ ಆರಿಸಿಕೊಂಡಿದೆ.
೩ ಇ (೧೩) ಪ್ರತಿಯಿಂದ ಆರಿಸಿಕೊಂಡಿದೆ.

## ೭೧

೧ ಹಿಂಸಕರ ಸಂಗದಿಂದ ಬಂದ ಪಾತಕಕ್ಕೆ ।
ಕಂಸಮರ್ದನನೆಂದರೆ ಸಾಲದೆ ? ।
ಜಾರರ ಸಂಗದಿಂದ ಬಂದ ಪಾತಕಕ್ಕೆ ।
ಗೋಪೀಜನಜಾರನೆಂದರೆ ಸಾಲದೆ ? ।
ಚೋರರ ಸಂಗದಿಂದ ಬಂದ ಪಾತಕಕ್ಕೆ
ನವನೀತಚೋರನೆಂದರೆ ಸಾಲದೆ? ।
ಜಾರ–ಚೋರನಾದ ಅಜಮಿಳನನ್ನು ।
ವೈಕುಂಠಕ್ಕೇರಿಸಿದ ಪುರಂದರವಿಠಲಗೆ ನಮೋನಮೋ ॥

## ೭೨

೨ ಆವಿನ ಕೊಂಬಿನ ತುದಿಯಲಿ ಸಾಸಿವೆ
ನಿಂತಷ್ಟು ಹೊತ್ತಾದರಾಗಲಿ ।
ದೇವ ನಿನ್ನನು ನೆನೆದವ ಜೀವನ್ಮುಕ್ತನಲ್ಲವೆ ? ।
ಸರ್ವಕಾಲದಲ್ಲಿ ಒರಲುತ್ತ ನರಳುತ್ತ ।
ಹರಿಹರಿ ಎಂದವ ಜೀವನ್ಮುಕ್ತನೆಂಬುದು ।
ಏನು ಆಶ್ಚರ್ಯವಯ್ಯ ಪುರಂದರವಿಠಲ ॥ ೧ ॥

## ೭೩

೩ ಗಾಳಿಗಿಟ್ಟಿದ ದೀಪಿಗೆಯಂತೆ ಈ ದೇಹ ।
ನಿಮಿಷವೊ ನಿಮಿಷಾರ್ಧವೊ ತಿಳಿಯಲಾರದು ।

೧ ಅ (II) ಪ್ರತಿಯೊಂದರಲ್ಲಿ ಸಿಕ್ಕುತ್ತಿದೆ.
೨ ಅ (II) ಮತ್ತು (ಅ) ೩ (ಮುದ್ರಿತ) ಎಂಬ ಪ್ರತಿಗಳಿಂದ ತೆಗೆದುಕೊಂಡಿದೆ.
೩ ಅ (II) ಪ್ರತಿಯೊಂದರಲ್ಲಿ ಸಿಕ್ಕುತ್ತಿದೆ.

ಕಾಲಕಾಲಗಳಲಿ ಹರಿಗುಣ ಕಲ್ಯಾಣಗಳ |
ಕೇಳದವನ ಜನ್ಮ ವ್ಯರ್ಥವೊ ಪುರಂದರವಿಠಲ ||

## ೭೪

೧ ಚೋರಗೆ ಚಂದ್ರೋದಯ ಸೊಗಸುವುದೆ? |
ಜಾರಗೆ ಸೂರ್ಯೋದಯ ಸೊಗಸುವುದೆ? |
ಶ್ರೀರಮಣನ ಕಥೆ ಖಳಗೆ ಮೆಚ್ಚುವುದೆ ? |
ನಾರಿಯ ನಯನವಿಲ್ಲದ ಚೆಲುವಿಕೆಯು |
ಶಾರೀರವಿಲ್ಲದವನ ಹಾಡಿಕೆಯು |
ಅರಣ್ಯರೋದನವಯ್ಯ ಪುರಂದರವಿಠಲ ||

## ೭೫

೨ ಧನದಾಸೆ ದೈನ್ಯಪಡಿಸುತಿದೆ |
ವನಿತೆಯರಾಸೆ ಓಡಾಡಿಸುತಿದೆ |
ಮನದಾಸೆ ಮಂತ್ರವ ಕೆಡಿಸುತಿದೆ |
ಮನೆವಾರ್ತೆಯಾಸೆ ಮನವ ಬಾಧಿಸುತಿದೆ |
ಇಸಿತರಾಸೆಯ ಬಿಡಿಸಿ ನಿನ್ನ ಚರಣಗಳ |
ನೆನೆವಂತೆ ಮಾಡೊ ಪುರಂದರವಿಠಲ ||

---

೧ ಆ (VI) ಘ (೩) ಝ (೮) ಇವುಗಳಿಂದ ಆರಿಸಿಕೊಂಡಿದೆ.
೨ ಇ (೧೩) ಪ್ರತಿಯಿಂದ ಆರಿಸಿಕೊಂಡಿದೆ.

## ೭೬

೧ ಧ್ವಜವಜ್ರಾಂಕುಶ ರೇಖಾಂಕಿತವಾದ ।
ಹರಿಯ ಪದಾಂಬುಜವ ಸೇವಿಸುವ ।
ಅಜಭವಾದಿಗಳ ಭಾಗ್ಯವ ನೋಡು ।
ತ್ರಿಜಗವಂದ್ಯನ ಪಾಡು ।
ಭಕುತಿಯನು ಬೇಡು ।
ಕುಜನ ಮತವ ಸುಡು ।
ದುರ್ಜನರ ಸಂಗವ ಬಿಡು ।
ಗಜೇಂದ್ರನ ಕಾಯ್ದ ಶ್ರೀಕೃಷ್ಣನ ಧ್ಯಾನವ ಮಾಡು ।
ಪುರಂದರವಿಠಲನ ಬಿಡದೆ ಕೊಂಡಾಡು ॥

## ೭೭

ರಾಗ—ಆನಂದಭೈರವಿ ತಾಳ—

೨ ನಿನ್ನ ಧ್ಯಾನವ ಕೊಡೊ ಎನ್ನ ಧನ್ಯನ ಮಾಡೊ ।
ಪನ್ನಗಶಯನ ಶ್ರೀಪುರಂದರವಿಠಲ ॥

ಅಂಬುಜನಯನನೆ ಅಂಬುಜನಾಭನೆ ।
ಅಂಬುಜಾನಾಥ ಶ್ರೀಪುರಂದರವಿಠಲ ॥

ಪಂಕಜನಯನನೆ ಪಂಕಜಜನಕನೆ ।
ಪಂಕಜನಾಭ ಶ್ರೀಪುರಂದರವಿಠಲ ॥

ಭಾಗೀರಥೀಪಿತ ಭಾಗವತರ ಪ್ರಿಯ ।
ಯೋಗಿಗಳರಸ ಶ್ರೀಪುರಂದರವಿಠಲ ॥

---

೧ ಅ (II) ಪ್ರತಿಯಿಂದ ಆರಿಸಿಕೊಂಡಿದೆ.
೨ ಮ ಪ್ರತಿಯಿಂದ ತೆಗೆದುಕೊಂಡಿದೆ.

# ೮ ಏಕಾದಶೀವ್ರತಮಾಹಾತ್ಮ್ಯ

## ೭೮

ರಾಗ—ಶಂಕರಾಭರಣ     ತಾಳ—ಅಟ

೧ ಹರಿದಿನದಲಿ ಉಂಡ ನರರಿಗೆ—ಘೋರ- ।
ನರಕ ತಪ್ಪದು ಎಂದು ಶ್ರುತಿ ಸಾರುತಲಿದೆ ॥ ಪ ॥

ಗೋವ ಕೊಂದ ಪಾಪ, ಸಾವಿರ ವಿಪ್ರರ ।
ಜೀವಹತ್ಯವ ಮಾಡಿದ ಪಾಪವು ॥
ಭಾವಜನಯ್ಯನ ದಿನದಲುಂಡವರಿಗೆ ।
ಕೀವಿನೊಳಗೆ ಹಾಕಿ ಕುದಿಸುವ ಯಮನು ॥ ೧ ॥

ಒಂದೊಂದು ಅಗಳಿಗೆ ಕೋಟಿಕೋಟಿ ಕ್ರಿಮಿಗಳು ।
ಅಂದಿನ ಅನ್ನವು ನಾಯ ಮಾಂಸ ॥
ಮಂದರಧರನ ದಿನದಲುಂಡವರನು ।
ಹಂದಿಯ ಸುಡುವಂತೆ ಸುಡುವನು ಯಮನು ॥ ೨ ॥

ಅನ್ನ-ಉದಕ ತಾಂಬೂಲ-ದರ್ಪಣಗಳು ।
ಚೆನ್ನವಸ್ತ್ರಗಳೆಲ್ಲ ವರ್ಜಿತವು ॥
ತನ್ನ ಸತಿಯ ಸಂಗ ಮಾಡುವ ಮನುಜನ ।
ಬೆನ್ನಲಿ ಕರುಳ ಉಚ್ಚಿಸುವನು ಯಮನು ॥ ೩ ॥

ಜಾವದ ಜಾಗರ ಕ್ರತು ನಾಲ್ಕುಸಾವಿರ ।
ಜಾವ ನಾಲ್ಕರ ಫಲಕೆ ಮಿತಿಯಿಲ್ಲವು ॥
ದೇವದೇವನ ದಿನದಿ ನಿದ್ರೈಗೈದರೆ ಹುರಿ- ।
ಗಾವಲಿಯೊಳು ಹಾಕಿ ಹುರಿಯುವ ಯಮನು ॥ ೪ ॥

---

೧ ಇ (೧೦) ಝು (೧–೧೦) ಎ. ಓ. ಪ್ರತಿಗಳಿಂದ ಆರಿಸಿದೆ.

ಇಂತು ಏಕಾದಶಿ ಉಪವಾಸ ಜಾಗರ ।
ಸಂತತ ಕ್ಷೀರಾಬ್ಧಿಶಯನನ ಪೂಜೆ ॥
ಸಂತೋಷದಿಂದಲಿ ಮಾಡಿದ ಜನರಿಗ- ।
ನಂತ ಫಲವನೀವ ಪುರಂದರವಿಠಲ ॥ ೫ ॥

೭೯

ರಾಗ—ಕೇದಾರಗೌಳ ತಾಳ—ಅಟ

೧ ಹರಿವಾಸರದುಪವಾಸದ ಭಾಗ್ಯ ।
ದೊರಕುವುದೇ ಕಂಡ-ಕಂಡವರಿಗೆ ॥ ಪ ॥

---

೧ ಎ ಏ (ದಾ) ಓ ಪ್ರತಿಗಳಿಂದ ಆರಿಸಿಕೊಂಡಿದೆ.
ವಿ. ಸೂ.— ಎ ಮತ್ತು ಓ ಪ್ರತಿಗಳಲ್ಲಿ ಕೆಳಗಿನ ಎರಡು ನುಡಿಗಳು ಹೆಚ್ಚಿಗಿವೆ.

ತೋರುವ ದಶಮಿ ದ್ವಾದಶಿಯೆಂಬ ಸಂಪುಟಾ-
ಕಾರದಿಂದೊಪ್ಪುವ ಹರಿದಿನವು ।
ಮೂರುದಿನದ ವ್ರತ ನಾಲ್ಕುಹೊತ್ತಿನ ಆ-
ಹಾರವು ವರ್ಜಿತವು ।
ಊರುಪಾರಿಗಳನ್ನು ನಡೆಯಬಾರದು ತಾಂ-
ಬೂಲವು ವರ್ಜಿತವು ।
ನಾರಾಯಣನ ದಾಸರ ಸಂಘದೊಡನೆ ಜಾಗರ ಮಾಡಿ
ಶ್ರೀಹರಿಯ ಕೊಂಡಾಡುವ ॥

ಅತಿಶಯ ದಿನದಲ್ಲಿ ದೇವಋಷಿ ಪಿತೃ-
ತರ್ಪಣ ವರ್ಜಿತವು ।
ಪ್ರತಿವರುಷದಲಿ ಆಚರಿಸುವ ತಾಯ್ತಂದೆ
ತಿಥಿಗಳೆಲ್ಲವು ವರ್ಜ್ಯವು ।
ಸತತವು ಮಾಡುವ ಯಜ್ಞಪುರುಷಂಗಾ-
ಹುತಿಗಳೆಲ್ಲವು ವರ್ಜ್ಯವು ।
ಇತರವಾದ ಭೋಗದಾಸೆಗಳೆಲ್ಲ ವರ್ಜಿ-
ಸುತಲಿ ಧೀರವ್ರತವನ್ನಾಚರಿಸುವ ॥

ಹಿರಿದು ಜನ್ಮಗಳಿಂದ ಹರಿಯುನಾರಾಧಿಪ ।
ಪರಮಭಾಗವತ ಭಕ್ತರಿಗಲ್ಲದೆ ॥ ಅ. ಪ ॥

ಸ್ನಾನಸಂಧ್ಯಾನವೆ ಮೊದಲಾದ ಕರ್ಮ-
ನ್ಯೂನದ ಪಾಪಂಗಳು ।
ಹೇನು-ಇರುವೆ-ನೊಣ ಮೊದಲಾದ ಕ್ರಿಮಿಗಳ
ಹಿಂಸೆಮಾಡಿದ ಪಾಪವು ।
ದೀನತ್ವದಿಂದ ತುಚ್ಛರ ಕೈಯಿಂ ಪಡೆದ ದು-
ರ್ದಾನದ ಪಾಪಂಗಳು ।
ಭಾನುಬಿಂಬವ ಕಂಡ ಹಿಮದಂತೆ ತೊಲಗುವ
ಆನಂದನಂದನ ವ್ರತಕೆ ಸೇರದು ಪಾಪ ॥ ೧ ॥

ಪರಸತಿಯರ ನೋಡಿ ಮನವಿಟ್ಟ ಪಾಪವು
ಪರದೂಷಣೆಯ ಪಾಪವು ।
ಪರಹಿಂಸೆಯ ಮಾಡಿ ಪರರ ದ್ರವ್ಯಗಳಪ-
ಹರಿಸಿದ ಬಲು ಪಾಪವು ।
ಪರಮಾತ್ಮನ ಹೊಗಳುವ ನಾಲಗೆಯಿಂದ
ನರರ ಪೊಗಳುವ ಪಾಪವು ।
ಹರಿಯ ಮೋರೆಯ ಕಂಡ ಕರಿಯ ಸಂಘಗಳಂತೆ
ದುರಿತ ರಾಶಿಗಳೆಲ್ಲ ಪರಿಹರಿಸುವ ಶ್ರೀ ॥ ೨ ॥

ಮತ್ತದು ಸಕಲಪಾಪಗಳಿಗೆ ಪಕ್ಷಪ್ರಾ-
ಯಶ್ಚಿತ್ತವು ಹರಿದಿನವು ।
ಉತ್ತಮವಾದ ವ್ರತಂಗಳಲೆಲ್ಲ ತಾ-
ನುತ್ತಮವಾಗಿಹುದು ।
ಚಿತ್ತಶುದ್ಧಿಯನಿತ್ತು ಜ್ಞಾನ-ವೈರಾಗ್ಯದಿ
ಮುಕ್ತಿಸಾಧನವೀವುದು ।
ಮುಕ್ತಿಗೆ ಸೋಪಾನ ತರಣಿ ಭವಾಬ್ಧಿಗೆ
ಸತ್ಯಸನ್ನಿಧಿಗೆ ಹೆದ್ದಾರಿಯ ತೋರುವ ॥ ೩ ॥

ಆಡುವ ಅನೃತವಾಕ್ಯಗಳಿಂದ ಅಶುಭವ-
ನೀಡುವ ಪಾಪಂಗಳು ।
ಆಡಬಾರದ ದಿನಗಳಲಿ ಸ್ತ್ರೀಗೋಷ್ಠಿಯ-
ನಾಡಿದ ಪಾಪಂಗಳು ।
ಬೇಡಬಾರದಂಥ ವರವನು ಕೊಡು ಎಂದು
ಬೇಡಿದ ಪಾಪಂಗಳು ।
ಕಾಡುಗಿಚ್ಚನು ಕಂಡ ಖಗಮೃಗತತಿಯಂತೆ
ಓಡಿಸುತಿರುವಂಥ ಉತ್ತಮವ್ರತವಿದು ॥ ೪ ॥

ಹಲವು ಪುರಾಣಗಳೋದಿ ಶಾಸ್ತ್ರಂಗಳ
ತಿಳಿದು ಕೇಳಿದರೇನು ? ।
ಹಲವು ಪುಣ್ಯತೀರ್ಥ ನದ-ನದಿಗಳಲಿ ಮೈ-
ಮುಳುಗಿಸಿದರೆ ಏನು ? ।
ಹಲವು ವ್ರತಂಗಳಾಚರಿಸಿ ದಾನಗಳನು
ತಿಳಿದು ಮಾಡಿದರೇನು ? ।
ಹಲವು ದೈವಗಳೊಡೆಯ ಪುರಂದರವಿಠಲನ
ಒಲುಮೆಯ ವ್ರತಕವು ಸರಿಯೆನ್ನಬಹುದೆ ? ॥೫॥

## ೮೦

**ರಾಗ—ಭೈರವಿ** **ತಾಳ—ಅಟ**

೧ ರಂಗನ ನೋಡಿರೆ ರಾಯಚೆನ್ನಿಗ ನರ-
ಸಿಂಗನ ದೇವಕಿದೇವಿಯ ಸುತನ ॥ ಪ ॥

ಥಳಥಳಿಸುವ ನಗುಮೊಗದ ಚೆನ್ನಿಗನ ।
ಪೊಳೆವ ವಜ್ರದ ಕಿರೀಟವಿಟ್ಟವನ ॥
ಪ್ರಳಯಕಾಲದಿ ವಟಪತ್ರಶಯನನ ।
ನಳಿನಭವನ ನಾಭಿಯಲ್ಲಿ ಪೆತ್ತವನ ॥ ೧ ॥

ಅಣಿಮುತ್ತಿನ ದುಂಡುಮಕರಕುಂಡಲನ ।
ಭಾನುಪ್ರಭೆಯ ಭುಜಕೀರ್ತಿಯೊಪ್ಪುವನ ॥
ಕಾಣಿಸೆ ಅಪರಂಜಿ ಕಡಗ ಕಂಕಣ ಹೊಸ ।
ಮಾಣಿಕದುಂಗುರವಿಟ್ಟು ಮೆರೆವನ ॥ ೨ ॥

ಕಮಲಾಮನೋಹರ ಕಮಲಜಪಿತನ ।
ರಮಣಿಗೆ ಪಾರಿಜಾತವನೇ ತಂದವನ ॥
ಕ್ರಮದಿಂದ ಭಸ್ಮಾಸುರನ ಕೊಂದವನ ।
ರಮೆಯಾಣ್ಮನೆನ್ನಲು ಇಹಪರವೀವನ ॥ ೩ ॥

ಶುಕ್ರವಾರ ಪುಲಕುಪೂಜೆಗೊಂಬವನ ।
ಸಕ್ಕರೆ-ಹಾಲು-ಬೆಣ್ಣೆಯ ಮೆಲ್ಲುವವನ ॥
ಗಕ್ಕನೆ ಸುರರಿಗೆ ಅಮೃತವಿತ್ತವನ ।
ರಕ್ಕಸದಲ್ಲಣ ರಾವಣಾಂತಕನ ॥ ೪ ॥

---

೧ ಇ ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.

ಪಾಪವಿನಾಶದಿ ಸ್ನಾನವ ಮಾಡಿ ।
ಪಾಪಗಳೆಲ್ಲ ಬೇಗನೆ ಬಿಟ್ಟು ಓಡಿ ॥
ಈ ಪರಿಯಿಂದಲಿ ಮೂರುತಿ ನೋಡಿ ।
ಶ್ರೀಪತಿ ಪುರಂದರವಿಠಲನ ಪಾಡಿ ॥ ೫ ॥

## ೮೧

ರಾಗ—ಸಾರಂಗ ತಾಳ—ಅಟ

೧ ಗೋವರ್ಧನಗಿರಿಯ ನೆಗಹಿಬಂದು—ನೀನಿಲ್ಲಿ
ಹಾವಿನ ಮಂಚದ ಮೇಲೆ ಮಲಗಿದೆಯೊ ರಂಗ? ॥ಪ॥

ಮಧುರೆಯೊಳಗೆ ಜನಿಸಿ ಗೋಕುಲಕ್ಕೆ ತೆರಳಿ ।
ಹಾದಿಹೋಗಿ ಕಾಲುನೊಂದು ಮಲಗಿದೆಯೊ ರಂಗ? ॥ ೧ ॥

ಅಸುರೆಪೂತಣಿಯ ಮೊಲೆಯುಂಡು ಶಕಟನ ಒದೆದು ।
ಆಸುಗುಂದಿ ಮಲಗಿದೆಯೊ—ಶ್ರೀರಂಗ? ॥ ೨ ॥

ಕಡಹದ ಮರದಿಂದ ಧುಮುಕಿ ಕಾಳಿಂಗನ ।
ಹೆಡೆಯ ತುಳಿದು ಕಾಲ್ನೊಂದು ಮಲಗಿದೆಯೊ? ॥ ೩ ॥

ಬಾಲಬ್ರಾಹ್ಮಣನಾಗಿ ಬಲಿಯ ದಾನವ ಬೇಡಿ ।
ನೆಲನನಳೆದು ಕಾಲುನೊಂದು ಮಲಗಿದೆಯೊ? ॥ ೪ ॥

ಶ್ರೀಶ ಶ್ರೀರಂಗರಾಜ ಪರಮಪಾವನ ।
ಶೇಷಶಯನ ಶ್ರೀಪುರಂದರವಿಠಲ ॥ ೫ ॥

---

೧ ಆ (II) ಪ್ರತಿಯೊಂದರಲ್ಲಿಯಷ್ಟೆ ಸಿಕ್ಕುತ್ತಿದೆ.

೮೨

ರಾಗ—ಗೌಳ ತಾಳ—ತ್ರಿವಿಡೆ

೧ ಶರಣು ಶರಣು ಶರಣ್ಯವಂದಿತ
ಶಂಖಚಕ್ರಗದಾಧರ ।
ಶರಣು ಸರ್ವೇಶ್ವರ ಅಹೋಬಲ
ಶರಣ ಸಲಹೋ ನರಹರಿ ॥ ಪ ॥

ಶೀಲದಲಿ ಶಿಶು ನಿನ್ನ ನೆನೆಯಲು
ಕಾಲಲೊತ್ತುತ ಖಳರನು ।
ಲೀಲೆಯಿಂದಲಿ ಚಿಟಿಲು ಭುಗಿಭುಗಿ-
ಲೆನುತ ಉಕ್ಕಿನ ಕಂಬದಿ ॥
ಖೂಳದೈತ್ಯನ ತೋಳಿನಿಂದಲಿ
ಸೀಳಿ ಹೊಟ್ಟೆಯ ಕರುಳನು ॥
ಮಾಲೆಯನು ಕೊರಳೊಳಗೆ ಧರಿಸಿದ
ಜ್ವಾಲನರಸಿಂಹಮೂರ್ತಿಗೆ ॥ ೧ ॥

ಖಳಖಳಾ ಖಳನೆಂದು ಕೂಗಲು
ಕೋಟಿ ಸಿಡಿಲಿನ ರಭಸದಿ ॥
ಜಲಧಿ ಗುಳಗುಳನೆದ್ದು ಉಕ್ಕಲು
ಜ್ವಲಿತ ಕುಲಗಿರಿ ಉರುಳಲು ॥
ನೆಲನು ಬಳಬಳನೆಂದು ಬಿರಿಯಲು
ಕೆಳಗೆ ದಿಗ್ಗಜ ನಡುಗಲು ॥
ಥಳಥಳಾಥಳ ಹೊಳೆವ ಮಿಂಚಿನೊಲ್
ಹೊಳೆವ ನರಸಿಂಹಮೂರ್ತಿಗೆ ॥ ೨ ॥

ಕೋರೆ ಕೆಂಜೆಡೆ ಕಣ್ಣು ಕಿವಿ ತೆರೆ-
ಬಾಯಿ ಮೂಗಿನ ಶ್ವಾಸದಿ ॥

೧ ಥ ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.

ಮೇರುಗಿರಿ ಮಿಗಿಮಿಗಿಲು ಮಿಕ್ಕುವ
ತೋರ ಕಿಡಿಗಳ ಸೂಸುತ ||
ಸಾರಿಸಾರಿಗೆ ಹೃದಯರಕುತವ
ಸೂರೆ ಸುರಿಸುರಿದೆರಗುತ ||
ಘೋರರೂಪಗಳಿಂದ ಮೆರೆಯುವ
ಧೀರ ನರಹರಿಮೂರ್ತಿಗೆ || ೩ ||

ಹರನು ವಾರಿಜಭವನು ಕರಗಳ
ಮುಗಿದು ಜಯಜಯವೆನುತಿರೆ ||
ತರಳ ಪ್ರಹ್ಲಾದನಿಗೆ ತಮ್ಮಯ
ಶರಿರಬಾಧೆಯ ಪೇಳಲು ||
ಕರುಣಿ ಎನ್ನನು ಕರುಣಿಸೆನ್ನಲು
ತ್ವರದಲಭಯವನೀಡುತ ||
ಸಿರಿ ಬರಲು ತೊಡೆಯಲ್ಲಿ ಧರಿಸಿದ
ಶಾಂತ ನರಹರಿಮೂರ್ತಿಗೆ || ೪ ||

ವರವ ಬೇಡಿದನಿರುವ ತಂದೆಯ
ಪರಿಯನೆಲ್ಲವ ಬಣ್ಣಿಸಿ ||
ನಿರುತದಲಿ ನಿನ್ನೆರಡು ತೊಡೆಯಲಿ
ಶರಿರವಿರಲೆಂದೆನುತಲಿ ||
ಸುರರು ಪುಷ್ಪದ ವೃಷ್ಟಿಗರೆಯಲು
ಸರಸಿಜಾಕ್ಷನು ಶಾಂತದಿ ||
ಸಿರಿಯ ಸುಖವನು ಮೆರೆದಹೋಬಲ
ವರದ ಪುರಂದರವಿಠಲಗೆ || ೫ ||

## ೮೩

ರಾಗ—ಕಾನಡಾ ತಾಳ—ಅಟ

೧ ಇದು ಏನಂಗ ಮೋಹನಾಂಗ ।
ಮದನಜನಕ ತೊರವೆಯ ನರಸಿಂಗ ॥ ಪ ॥

ಸುರರು ತುತಿಸಿ ಕರೆಯೆ ತುಟಿಯ ಮಿಸುಕದವ ।
ತೆರೆದೆ ಏತಕೆ ಬಾಯ ತೆರನ ಪೇಳೊಮ್ಮೆ ॥ ೧ ॥

ವರನೀಲರತುನ ಮಾಣಿಕದ ಹಾರಗಳಿರೆ ।
ಕೊರಳೊಳು ಕರುಳ ಮಾಲೆಯನಿಟ್ಟು ಮೆರೆವುದು ॥ ೨ ॥

ಸಿರಿಮುದ್ದು ನರಸಿಂಹ ಪುರಂದರವಿಠಲ ।
ಸಿರಿಯಿಪ್ಪ ತೊಡೆಯಲಿ ಅರಿಯ ತಂದಿಡುವುದು ॥ ೩ ॥

## ೮೪

ರಾಗ—ಪೂರ್ವಿ ತಾಳ—ಆದಿ

೨ ದಾನವನ ಕೊಂದದ್ದಲ್ಲ ಕಾಣಿರೊ ।
೩ ನಾನಾವಿನೋದಿ ನಮ್ಮ ತೊರವೆಯ ನರಸಿಂಹ ॥ ಪ ॥

ಅಚ್ಚ ಪ್ರಹ್ಲಾದನೆಂಬ ರತ್ನವಿದ್ದ ಒಡಲೊಳು ।
ಬಿಚ್ಚಿ ಬಗಿದು ನೋಡಿದನಿನ್ನೆಷ್ಟು ಇದ್ದಾವೆಂದು ॥ ೧ ॥

---

೧ ಅ (ಲ) ಆ (P) ಎ. ಓ. ಪ್ರತಿಗಳನ್ನು ಹೊಂದಿಸಿ ಬರೆದಿದೆ.
ವಿ. ಸೂ.— ಮುದ್ದುರಂಗ ಮದನಜನಕ
ತೊರವೆಯ ನರಸಿಂಗ ॥ಪ॥. (ಆ II ಪ್ರತಿಯಲ್ಲಿ ಸಿಕ್ಕುತ್ತಿದೆ.)
೨ ಅ (ಲ) ಆ (P) ಮ ಪ್ರತಿಗಳಿಂದ ಆರಿಸಿಕೊಂಡಿದೆ.
೩ ಗಾನವಿನೋದಿ (ಬಹುಮತ).

ನಂಟುತನ ಬೆಳೆಯಬೇಕೆಂದು ಕರುಳ ಕೊರಳೊಳು ।
ಗಂಟುಹಾಕಿಕೊಂಡನೆಷ್ಟು ಸ್ನೇಹಸಂಬಂಧದಿಂದ ॥ ೨ ॥

ಸಿರಿಮುದ್ದು ನರಸಿಂಹ ಪ್ರಹ್ಲಾದಪಾಲಕ ।
ಉರಿವೋರೆ ದೈವ ನಮ್ಮ ಪುರಂದರವಿಠಲ ॥ ೩ ॥

## ೮೫

ರಾಗ—ತೋಡಿ ತಾಳ—ಅಟ

೧ ದಾಸ ಶೇಷಾದ್ರಿಯ ವಾಸ ತಿಮ್ಮಪ್ಪನ ।
ದಾಸನನು ಕರೆದೊಯ್ದು ॥
ಸಾಸಿರನಾಮವಿಲಾಸನ ಮೂರ್ತಿಯ ।
ಲೇಸಾಗಿ ತೋರೆನಗೆ ॥ ಪ ॥

ಬೆರಳು ಇಲ್ಲದ ಕೈಯೊಳುಂಡು ಜೀವಿಸುವನ ।
ಶಿರದ ಅಂದದ ದೇವನ ॥
ಉರುವ ಶಾಪಕೆ ತಾನು ಕಿರಿದಾಗಿ ಇರುವನ ।
ಶಿರದೊಳು ಧರಿಸಿದನ ॥
ಕೊರಳಮಾಲೆಯ ಪೆಸರೊಪ್ಪಿದ ಗಿರಿಯೊಳು ।
ಸ್ಥಿರವಾಗಿ ನೆಲಸಿಪ್ಪನ ॥
ಕರುಣವಾರಿಧಿ ವೆಂಕಟೇಶನ ಚರಣವ ।
ಕರೆದೊಯ್ದು ತೋರೆನಗೆ ॥ ೧ ॥

ವಾರಿಯೊಳುದಿಸಿದ ನಾರಿಯು ಮಧ್ಯದಿ ।
ಏರಿಯೆ ಕುಳಿತವನ ॥

೧೮ (೪೧) ಪ್ರತಿಯಲ್ಲಿ ಮಾತ್ರವಿದೆ.

ವಾರಿಜವದನದಿ ತೋರಿದ ಸಾರದಿ ।
ಮೂರೊಂದು ಪೆಸರವನ ॥
ಮೇರುವಿನಗ್ರದಿ ಊರಿದ ಚರಣವ ।
ಸಾರಿದವರ ಜೀವನ ॥
ಊರಿಗೆ ಕರೆದೊಯ್ದು ಶ್ರೀವೆಂಕಟೇಶ ಪ- ॥
ದಾರವಿಂದವ ತೋರೆನಗೆ ॥ ೨ ॥

ಸೋತ ಮಾನಿನಿಯೊಳು ಜಾತವಾಗಿಯೆ ಮೇಲೆ ।
ಮಾತೆಯ ಸಲಹಿದನ ॥
ನೀತಿ ತಪ್ಪಿಯೆ ನಡೆವ ವಾತಭಕ್ಷಕರನ್ನು ।
ಘಾತಿಸಿ ತರಿದವನ ॥
ನೂತನವಾಗಿಹ ನಾಮಶೈಲದ ಮೇಲೆ ।
ಕಾತರದೊಳು ನಿಂದನ ॥
ಪಾತಕನಾಶನ ಶ್ರೀವೆಂಕಟೇಶನ ।
ರೀತಿಯ ತೋರೆನಗೆ ॥ ೩ ॥

ಋಷಿಯ ಮಕ್ಕಳನೆಲ್ಲ ಹಸಿವಿಗೆ ಗುರಿಮಾಡಿ ।
ವಶತಪ್ಪಿ ನಡೆವವನ ॥
ಬಸಿರೊಳಗುದಿಸಿಯೆ ಬಿಸಿಯನೆಲ್ಲವ ತಿಂದು ।
ಎಸೆವ ಮಹಾವೀರನ ॥
ಪೆಸರೊಳಗೊಪ್ಪಿದ ಹಸನಾದ ಗಿರಿಯೊಳು ।
ಕುಶಲದಿ ನಿಂದವನ ॥
ನಸುಮುದ್ದು ಶ್ರೀವೆಂಕಟೇಶನ ಚರಣದ ।
ಬಿಸರುಹ ತೋರೆನಗೆ ॥ ೪ ॥

ಪಾದ ನಾಲ್ಕನು ಮೇದಿನಿಯೊಳಗೂರಿಯೆ ।
ಆದರಿಸುತ ಬಪ್ಪನ—ಮೇ- ॥

ಲಾದ ಪಾದವ ನಾಲ್ಕು ಅಂತರಿಕ್ಷದ ಮೇಲೆ ।
ಕಾದುಕೊಳ್ಳುತಲಿಪ್ಪನ ॥
ಆದಿಯ ನಾಮಕ್ಕೆ ಅದ್ರಿಯನೊಡಗೊಂಡು ।
ಹಾದಿಯನಿತ್ತವನ ॥
ಸಾಧಿಸಿ ಇಂತಹ ಶ್ರೀವೆಂಕಟೇಶನ ।
ಪಾದವ ತೋರೆನಗೆ ॥ ೫ ॥

ಆದಿನಾರಾಯಣನೆಂಬ ಪರ್ವತವನು ।
ಭೇದಿಸಿ ನಿಂತವನ ॥
ಸಾಧಿಸಿ ಮುಂದಣ ವೆಂಕಟಾದ್ರಿಯ ಮೇಲೆ ।
ಪಾದವನೂರಿದನ ॥
ಮೇದಿನಿಯೊಳಗುಳ್ಳ ಸಾಧುಭಕ್ತರನೆಲ್ಲ ।
ಕಾದುಕೊಳ್ಳುತಲಿಪ್ಪನ—ವಿ- ॥
ನೋದ ಮೂರುತಿಯಾದ ಶ್ರೀವೆಂಕಟೇಶನ ।
ಪಾದವ ತೋರೆನಗೆ ॥ ೬ ॥

ಅತ್ತೆಯ ವರಿಸಿಯೆ ಮತ್ತೆ ಅಳಿಯನಾದ ।
ಪುತ್ರಿಯ ತಂದವನ ॥
ಉತ್ತಮವಾಗಿಹ ಮುಗಳ ಸನ್ನಿಧಿಯಲ್ಲಿ ।
ನಿತ್ಯದೊಳಿರುತಿಪ್ಪನ ॥
ಬತ್ತಲೆಯಾಗಿಹ ಸತಿಯಳ ಸತ್ಯಕ್ಕೆ ।
ಪುತ್ರನೆಂದೆನಿಸಿದನ ॥
ಹತ್ತಿರ ಕರೆದೊಯ್ಯು ಪುರಂದರವಿಠಲನ ।
ನಿತ್ಯದಿ ತೋರೆನಗೆ ॥ ೭ ॥

೮೬

ರಾಗ—ಶಾಪಿ ತಾಳ—ಅಟ

೧ ಒಳ್ಳೆಯದೊಳ್ಳೆಯದು ॥ ಪ ॥

ಎಲ್ಲ ಸ್ಥಳವ ಬಿಟ್ಟು ಇಲ್ಲಿ ಅಡಗಿದುದು
ಬಲ್ಲಿದತನವೆ ? ॥ ಅ. ಪ ॥

ಬಿಡೆನೊ ಬಿಡೆನೊ ಎನ್ನ ಒಡೆಯ ತಿರುಮಲ ನಿನ್ನ ।
ಉಡೆಯ ಪೀತಾಂಬರ ಪಿಡಿದು ನಿಲಿಸಿಕೊಂಬೆ ॥ ೧ ॥

ಅರಿವುಮರೆವು ಮಾಡಿ ತಿರುಗಿಸಿದೆಯಾ ಎನ್ನ ।
ಕೊರಳಿಗೆ ನಿನ್ನಯ ಚರಣ ಕಟ್ಟಿಕೊಂಬೆ ॥ ೨ ॥

ಅತ್ತೆಯ ಮಕ್ಕಳಿಗೆ ತೆತ್ತಿಗ ನೀನಾಗಿ ।
ಎತ್ತದ ರಾಶಿ ತಂದಿತ್ತ ಪರಿಯಲಿ ॥ ೩ ॥

ಅತ್ತಲಿತ್ತಲಿ ನೋಡಿನ್ನೆತ್ತ ಪೋಗಲಿ ನಿನ್ನ ।
ಚಿತ್ತದಲ್ಲಿ ಹೊತ್ತು ಕಟ್ಟಿಕೊಂಬೆನು ॥ ೪ ॥

ಇರುಳು ಹಗಲು ಬಿಡದೆ ವರಪುರಂದರಗೊಲಿದೆ ।
ಅರಿದು ಏನು ಇಷ್ಟು ಪುರಂದರವಿಠಲನೆ ॥ ೫ ॥

೮೭

ಸುಳಾದಿ

ಧ್ರುವತಾಳ

೨ ವರಗಿರಿಯಿಂದ ತಿಮ್ಮಯ್ಯ ಬಂದ ।
ಸಿಂಹಗಿರಿಯಿಂದ ನರಸಿಂಹ ಬಂದ ।

೧ ಹ. ಓ. ಪ್ರತಿಗಳಲ್ಲಿ ದೊರಕುತ್ತಿದೆ.
೨ ಆ (II) (VI) ಇ (ಮುದ್ರಿತ) ಜ ೨ ಗಳಿಂದ ಹೊಂದಿಸಿ ಬರೆದಿದೆ.



ತೊರವೆಯ ಶ್ರೀ ನರಸಿಂಹ

ಹಸ್ತಿಗಿರಿಯಿಂದ ವರದರಾಜನು ಬಂದ ।
ಯದುಗಿರಿಯಿಂದ ನಾರಾಯಣ ಬಂದ ।
ಕಾವೇರಿಯಿಂದ ರಂಗನಾಥನು ಬಂದ ।
ಪುರುಷೋತ್ತಮದಿಂದ ಜಗನ್ನಾಥ ಬಂದ ।
ಪಾಂಡುರಂಗದಿಂದ ಎನ್ನ ಮನ್ನಿಸಿ ।
ಮನೆಗೆ ಪುರಂದರವಿಟ್ಠಲರಾಯ ಬಂದ ॥ ೧ ॥

ಮಟ್ಟತಾಳ

೧ ಬದರಿಕಾಶ್ರಮದಿಂದ ಬಾದರಾಯಣ ಬಂದ ।
೨ ಕಿಂಪುರುಷಖಂಡದಿಂದ ಹನುಮನೊಡೆಯ
ರಾಮಚಂದ್ರ ಬಂದ ।
ಕ್ಷೀರವಾರಿಧಿವಾಸಿ ಪುರಂದರವಿಠಲರಾಯ ಬಂದ ॥ ೨ ॥

ತ್ರಿವುಡೆ ತಾಳ

ಶ್ರೀಮದನಂತಶಯನದಿಂದ ಶ್ರೀಮದನಂತ ಪದ್ಮನಾಭ ಬಂದ ।
ಶ್ರೀಮದಾಚಾರ್ಯರಿಗೊಲಿದ ಶ್ರೀಮದುಡುಪಿಯ ಕೃಷ್ಣ ಬಂದ।
೩ ಶ್ರೀಮದ್ವಾರಣಾಸಿಯಿಂದ ಶ್ರೀಮಹಾವಿಷ್ಣುವೇ ಬಂದ ।
ಆಹಾ ಆಹಾ ಓ ಪುರಂದರವಿಠಲ ಮನೆಗೆ ಬಂದ ॥ ೩ ॥

ಅಟತಾಳ

ಪ್ರಯಾಗದಿಂದ ಪ್ರಯಾಗಮಾಧವ ಬಂದ ।
ಗಯೆಯಿಂದ ಗದಾಧರ ಬಂದ ।

೧ ಕೇದಾರದಿಂದ ಕಂದರಪ ಬಂದ (ಆ VI ಜ ೨).

೨ ಸದಮಲಯೋಗಿ ಕಿಂಪುರುಷ (ಆ VI ಜ ೨).

೩ ಶ್ರೀಮಧ್ವಾಚಾರ್ಯರ ಮುದ್ದುಗ ಶ್ರೀಮದ್ ದ್ವಾರಾವತಿಯಿಂದ ಪುರಂದರವಿಠಲರಾಯ ಬಂದ (ಆ II).

೧ ಆಯಾಸವಿಲ್ಲದೆ ಆದಿಕೇಶವ ಬಂದ ।
ಕೈವಲ್ಯ ಪುರಂದರವಿಟ್ಠಲ ಮನೆಗೆ ಬಂದ ॥ ೪ ॥

ಆದಿತಾಳ

ಅತಳ ವಿತಳ ಸುತಳ ಮಹಾತಳ ।
ತಳಾತಳ ರಸಾತಳ ಪಾತಾಳದಿಂದ ।
ಭೂಭುವಸ್ವಃ ಮಹಾಜನ ತಪಃಸತ್ಯಲೋಕದಿಂದ ।
ಪರಮಪದವೀವ ಪರಿಪೂರ್ಣ ಪರಬ್ರಹ್ಮ ।
ಪುರಂದರವಿಠಲ ಬಂದ ॥ ೫ ॥

ಝಂಪೆತಾಳ

೨ ಮೇಲುಗಿರಿಯಿಂದ ಮಹಾಲಕ್ಷ್ಮೀವರನು ಬಂದ ।
ಆಲುಮೇಲುಮಂಗದಿಂದ ಭೂರಮಣ ಬಂದ ।
ಕಾಲಿಂದಿಯಿಂದ ಕಾಳಿಂಗಮರ್ದನ ಬಂದ ।
ಲೀಲಾವಿನೋದಿ ಪುರಂದರವಿಠಲ ಬಂದ ॥ ೬ ॥

ಜತೆ

ಲೋಕಸಂರಕ್ಷಕ ಅಸುರ ಸಂಹಾರಕ ।
ಲೋಕೇಶ ಪುರಂದರವಿಟ್ಠಲ ಬಂದ ॥

## ೮೮

ರಾಗ—ಪೂರ್ವಿ ತಾಳ—ಅಟ

೩ ನೋಡುವ ಬನ್ನಿರೊ ಜನರು ಶ್ರೀಕೃಷ್ಣನ ।
ಜೋಡುದೀವಟಿಗೆ ಸೇವೆಯನು ॥ ಪ ॥

---

೧ ಕಾಶಿಯ ಆದಿಕೇಶವ ಕ್ಲೇಶನಾಶ ಬಂದ ।
ತನ್ನ ದಾಸರ ಮನೆಗೆ (ಅ II).
೨ ಈ ನುಡಿ ಅ (VI) ಪ್ರತಿಯಲ್ಲಿ ಮಾತ್ರ ಇದೆ.
೩ ಅ (ಶ I) ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.

ನೋಡಿಯೆ ನಮ್ಮಯ ಮನದ ಇಷ್ಟಾರ್ಥವ ।
ಬೇಡಿಕೊಂಡು ಪೊಗಳುವ ಪಾದಯುಗವ ॥ ಅ. ಪ ॥

ಅಂಜಿಕೆ ಪರಿಹಾರ ಅಸುರಭಂಜನನಾದ ।
ಕಂಜಾಕ್ಷ ಶ್ರೀಕೃಷ್ಣರಾಯನಿದಿರಿನೊಳು ॥
ಸಂಜೆಯ ಕಾಲದಿ ರಂಜಿಪ ರಜತದ ।
ಪಂಜುಸೇವೆಗೆ ಕರಾಂಜಲಿಯನ್ನು ಮುಗಿದು ॥ ೧ ॥

ನೆರೆದ ಜನರ ಮುಂದೆ ಗುರುರಾಯ ತಾ ಬಂದು ।
ಕರವ ಮುಗಿದು ನಿಂದಿರುತಿಪ್ಪ ಸಮಯದಿ ॥
ಪರಿಪರಿ ವಿನಿಯೋಗದವರೆಲ್ಲ ತಾವ್ತಮ್ಮ ।
ಸರದಿತಪ್ಪದೆ ಬಂದು ಇರುತಿಪ್ಪ ಸೊಬಗನು ॥ ೨ ॥

ಪಂಚಮುಖದ ಜ್ಯೋತಿ ಬೆಳಗಲು ಎಡಬಲ ।
ಸಂಚರಿಸುವ ಪೊಮ್ಮರಿಮೃಗಚೌರಿಯ ॥
ಕಾಂಚನಮಯದ ಕಟ್ಟಿಗೆಕೋಲು ಹಸುರಿನ ।
ಲಾಂಥನವಾದಗೆ ಹಾಕುವ ಪರಿಯ ॥ ೩ ॥

ಬಟ್ಟಿಲ ವೀಳ್ಯ ವಿಶಿಷ್ಟ ಲಾಜಾಕ್ಷತೆ ।
ಪುಟ್ಟಕದಳಿ ಬೆಲ್ಲ ಬೊಟ್ಟುಕಸ್ತೂರಿಗಂಧ ॥
ಕೃಷ್ಣರಾಯನ ಮುಂದಿಟ್ಟು ಅರ್ಪಿಸಿ ಹೊ- ।
ತ್ತಿಟ್ಟ ಆರತಿಯನ್ನು ಶ್ರೀಶಗೆತ್ತುವದನ್ನು ॥ ೪ ॥

ದೇವದೇವೋತ್ತಮ ದೇವೇಶನೆನುತಲಿ ।
ಭಾವಶುದ್ಧದಿ ಭಕ್ತರು ಸ್ತುತಿಗೈವುದ ॥
ಗೋವಳರಾಯನೆ ಜಯಶೀಲನಾಗೆಂದು ।
ಗೋವಿಂದ ಎನುತಲಿ ಘೋಷಮಾಳ್ಪುದನು ॥ ೫ ॥

ದುರಿತಹರಣ ಭಕ್ತಭಯನಿವಾರಣ ।
ಹರಿ ಕೃಷ್ಣ ಪರದೈವ ಪರಮಪುರುಷನೆಂದು ॥

ಸ್ಮರಣೆಯಿಂದಲಿ ಮನವೆರಸಿ ವಂದಿಸಿ ತ- ।
ಚ್ಚರಣವ ನೋಡಿಯೆ ಕರುಣಪಡೆವರೆ ॥ ೬ ॥

ಮಧ್ವರಾಯರ ಮತಕದ್ವೈತವಾಗಿಯೆ ।
ಸಿದ್ಧವಾಗಿಹ ಫಲವೆದ್ದು ತೋರಿದ ತೆರದಿ ॥
ಉದ್ಧರಿಸುವೆನೆಂದು ಪುರಂದರವಿಟ್ಠಲ ।
ಮುದ್ದು ಶ್ರೀಕೃಷ್ಣನ ಮೂರುತಿಯಾದುದ ॥ ೭ ॥

## ೬೯

ರಾಗ—ಶಂಕರಾಭರಣ ತಾಳ—ಅಟ

೧ ಧ್ವಜದ ತಿಮ್ಮಪ್ಪ ಪಲ್ಲಕಿಯೇರಿ ತನ್ನಯ ।
ನಿಜಗಿರಿಯಾತ್ರೆಗೈದಿದ ಹರುಷವ ಕೇಳಿ ॥ ಪ ॥

ಬಲದಲಬುಜಭವ ಭವಾದಿಗಳೆಡದಲಿ ।
ಉಲಿವ ವೇದ-ಉಪನಿಷದುಗಳು ॥
ಸಲುಗೆಯಲಿ ಸನಕಾದಿಗಳು ಸೇವಿಸೆ ಮುನ್ನ ।
ಹಲವು ಋಷಿ-ಮುನಿನಿಕರ ಹಿಂದೆ ಬರುತಿರಲು ॥ ೧ ॥

ಛತ್ರವ ಶಚಿ ಚಾಮರವ ಢಾಳಿಸೆ ಇಂದ್ರ ।
ಚಿತ್ತಜಾತನು ವ್ಯಜನವ ಬೀಸಲು ॥
ಹೊತ್ತು ಮಾರುತಿ ಹಡಪ ಹೊಳೆವೆಲೆಗಳ ಕೊಡಲು ।
ಹಸ್ತದ ಕಾಳಂಜಿ ಹರಿಣಾಂಕನು ಬರೆ ॥ ೨ ॥

ವರುಣನು ಸ್ವಾದುಜಲವ ಪಿಡಿದು ಬರೆ ।
ತರುಣಿ ತನಗೆ ಆಧಾರದಂತಿರಲು ॥

೧ ಇ ಪ್ರತಿಯೊಂದರಲ್ಲಿಯೆ ಇದೆ.

ಸುರರು ಸುಮನಗಳಿಂದ ಸರ್ವರು ತಮತಮ್ಮ ।
ಪರಿಪರಿ ಆಯುಧಗೊಂಡು ಬಳಸಿಬರೆ ॥ ೩ ॥

ಮಂದರ ಮಧ್ಯಮ ತಾರಕ ಮೋಹನ- ।
ದಿಂದ ಗಂಧರ್ವರು ಗಾನಮಾಡೆ ॥
ತೋಂಧಿಮಿಧಿಮಿಕೆಂದು ತಾಳಮೇಳದೆ ನಾ- ।
ರಂದ ಪಾಡಲು ಆಡುತಾಡುತ ಬರುತಿರೆ ॥ ೪ ॥

ಲೋಕನಾಯಕ ಲೋಕೈಕ ರಕ್ಷಾಮಣಿ ।
ಸಾಕಾರರೂಪ ಸದ್ಗುಣಭರಿತ ॥
ವೆಂಕಟೇಶ ವ್ಯಾಸಮುನಿವರದನಾದ ಕರು- ।
ಣಾಕರ ಪುರಂದರವಿಟ್ಠಲನು ಗರುಡ— ॥ ೫ ॥

# ೧೦ ಪುರಾಣಪುರುಷಮಾಹಾತ್ಮ್ಯ

## ೯೦

ರಾಗ—ಭೈರವಿ ತಾಳ—ಆದಿ

೧ ಇಂತು ವೇದಾಂತಗಳಲ್ಲಿ ಸುರರು ನಿನ್ನ
ಎಣಿಸುವರಹುದಹುದೈ—ನಿ-
ನ್ನಂತವ ತಿಳಿಯಲು ಬ್ರಹ್ಮಾದಿಗಳಿಗೆ
ಅಳವಲ್ಲಹುದಹುದೈ ! ॥ ಪ ॥

ರಂಡೆಯ ಮಕ್ಕಳು ಕುಂಡಗೋಳಕರು ರಾಯರು ನಿನ್ನಿಂದೈ ।
ಪಂಡಿತರಾದಾ ದ್ವಿಜರಿಗೆ ಭಿಕ್ಷಾಪಾತ್ರವು ನಿನ್ನಿಂದೈ ॥
ಮಂಡೆನೇವರಿಸಿ ಮೊಲೆಯನಿತ್ತವಳಿಗೆ ಮರಣವು ನಿನ್ನಿಂದೈ ।
ಭಂಡಾಟದಿ ಮೈಗೊಟ್ಟ ಗೋಪಿಯರು ಪಾವನ ನಿನ್ನಿಂದೈ ॥ ೧ ॥

ತೊತ್ತಿನ ಮಗನಿಗೆ ಒಲಿದು ನಿನ್ನ ಗುಣ ತೋರಿದೆ ಅಹುದಹುದೈ ।
ಉತ್ತಮರನು ನೀನಡವಿ ಸೇರಿಸಿದೆ ಉತ್ತಮನಹುದಹುದೈ ॥
ಅತ್ತೆಯನುಳುಹಿದೆ ಮಾವನ ಮಡುಹಿದೆ ಏತರ ನ್ಯಾಯವಿದೈ ।
ಮತ್ತನಾಗಿ ನಿನ್ನ ಬೈದ ಪಾತಕಿಯ ಮೈಯೊಳಗಿರಿಸಿದೆಯೈ ॥ ೨ ॥

ತಂದೆಯ ಕೊಂದು ಕಂದನ ಸಲಹಿದ ಚೆಂದವು ನಿನ್ನಿಂದೈ ।
ಕಂದನ ಕೊಂದು ತಂದೆಯ ಸಲಹಿದೆ ಏತರ ನ್ಯಾಯವಿದೈ ॥
ವಂದಿಸಿ ದಾನವ ಕೊಟ್ಟ ಬಲೀಂದ್ರನ ಬಂಧಿಸಿದಹುದಹುದೈ ।
ಮಂದರಧರ ಶ್ರೀಪುರಂದರವಿಠಲ ಮಾಡಿದ್ದೇ ಮರಿಯಾದೈ ॥ ೩ ॥

---

೧ ಇ (೧೫) ಝು (೩–೧೦) ಎ ಓ ಪ್ರತಿಗಳಿಂದ ಆರಿಸಿದೆ.

## ೯೧

ರಾಗ—ಪೂರ್ವಿ ತಾಳ—ಅಟ

೧ ಕೊಡಬಹುದೇ ಮಗಳ—ಸಮುದ್ರರಾಜ ।
ಕೊಡಬಹುದೇ ಮಗಳ ॥ ಪ ॥

ನಡೆದರೆ ಬಡವಹಳೆಂಬ ಕುಮಾರಿಯ ।
ಹಿಡಿಬಿಟ್ಟ ಮಾಡಿ ಹರಿಗೆ ಸಿಂಧುರಾಜನು ॥ ಅ. ಪ ॥

ಕುರುಹಬಲ್ಲವರಾರು, ಕುಲಗೋತ್ರವಾವುದೊ ।
ಅರಿತರಾಯರೊಳಗೆ ಆರ ಮಗನೊ ಇವ ।
ವರಶುಭಾಂಗಿಗೆ ತಕ್ಕ ವರನಹುದೆ ಇವ ।
ಹಿರಿಯರೆಂಬುದ ನೆರೆಹೊರೆಯೂ ಕಾಣದನಿವ ।
ಪರಿಪಂಥಿಜನಕೆಲ್ಲ ಪ್ರಾಣಘಾತಕನಿವ ।
ನಿರುತ ಮೇಘವ ಪೋಲ್ವ ನೀಲಮೆಯ್ಯವನಿವ ।
ಹಿರಿದಾದ ನಾಲ್ಕು ಹಸ್ತಗಳುಳ್ಳವನಿವ ।
ಅರುಣಚ್ಛಾಯೆಯ ರೇಖೆ ಅರಳಿಸಿ ಹಾರುವ ॥
ಗರುಡಹಕ್ಕಿಯ ನೆಚ್ಚಿದ—ಎದೆಯ ಮೇಲೆ ।
ಭರದಿ ಒದೆಯೆ ಮೆಚ್ಚಿದ—ಘೋರರೂಪ ।
ಧರಿಸಿ ಕೋಪದಿ ಹೆಚ್ಚಿದ—ಕರೆವ ಗೋವ- ।
ಕರುಗಳ ಕೊರಳುಚ್ಚಿದ—ಸಂಸಾರದೊಳ್ ।
ಇರುತಿಹ ನಾರಿಯರ ಮನವೆಲ್ಲ ಬಿಚ್ಚಿದ ॥ ೧ ॥

ಅಡಿಗಡಿಗೆ ಹತ್ತು ಅವತಾರವ ಮಾಡಿದ ।
ಕಡುಕಪಟಿಯಲ್ಲದೆ ಭಾರಿ ಗುಣದವನಲ್ಲ ।
ಗಿಡವ ಮರೆಯಲಿದ್ದು ಕಪಿಯ ಕೊಂದನು ಹೊಲ್ಲ ।
ನಡತೆಯಲಿ ಸಲೆ ಜನಲಜ್ಜೆ ಇವಸಿಗಿಲ್ಲ ।

೧ ಈ ಕೃತಿ ಪ್ರತಿಗಳಿಂದ ಆರಿಸಿಕೊಂಡಿದೆ.

ಹಿಡಿದು ಪೂತನಿ ಮೊಲೆಯುಂಡ ಚಾಪಟಮಲ್ಲ ।
ಮಡುಹಿದ ಮಾವನ ಮಥುರೆಯೊಳಗೆ ಖುಲ್ಲ ।
ಕೊಡೆಮಾಡಿ ಬೆಟ್ಟವ ಗೋಕುಲದೊಳಗೆಲ್ಲ ।
ಮಡದಿಯರುಡುಗೆಯ ಕದ್ದದ್ದು ಹುಸಿಯಲ್ಲ ॥
ಕಡಹದ ಮರವೇರಿದ—ಅವರ ಮಾನ- ।
ಕೆಡಿಸಿ ಭಂಡರ ಮಾಡಿದ—ದಧಿಕ್ಷೀರ- ।
ಗಡಿಗೆ ಸೂರೆಯಮಾಡಿದ—ಕಾಳಿಂಗನ- ।
ಮಡುವ ಕಲಕಿ ನೋಡಿದ—ಸ್ಯಂದನವನು ।
ನಡೆಸುವ ಕಾರಣ ನರಗೆ ಸಾರಥಿಯಾದ ॥ ೨ ॥

ಊದುತ ಕೊಳಲನರಣ್ಯದೊಳ್ ಗೋಗಳ ।
ಕಾದು ಕುಂಚಿಗೆ ಮಾಡಿ ಕಂಬಳಿ ಪೊದೆವನು ।
ಓದನವನು ಬೇಡಿ ಹೊಟ್ಟೆಯ ಹೊರೆದನು ।
ಯಾದವರೊಳಗಾಡಿ ಎಂಜಲನುಂಡನು ।
ಕ್ರೋಧದಿಂದ ಸುರರ ಕೊಂದು-ಕೊಂದಿಡುವನು ।
ಪಾದರಿ ಪೆಣ್ಣುಗಳೊಳಗಿರುತಿಪ್ಪನು ।
ಆದಿಯೆ ಇವಗಿಲ್ಲ ಎಂದೆಂದಿಗಿಪ್ಪನು ।
ಭೂದಿವಿಜರ ಕೂಡ ಭಿಕ್ಷಕೆ ಪೋಪನು ॥
ಮೇದಿನಿಯೊಳಗಿರುವ—ಮಸ್ತಕವು ಬೋ- ।
ಳಾದವರೊಳಗಿರುವ—ನೋಡಲು ಭೇದಾ- ।
ಭೇದದಂದದಿ ತೋರುವ—ಸಭೆಯೊಳಗೆ- ।
ಬೈದರೆ ಮೈದೋರುವ—ಶೇಷಶಾಯಿ- ।
ಯಾದಂಥ ಪುರಂದರವಿಠಲನೆಂದರಿಯದೆ ॥ ೩ ॥

೯೨

ರಾಗ—ಕಾಂಬೋದಿ ತಾಳ—ಝಂಪೆ

೧ ಏನು ಮರುಳಾದೆಯೇ ಎಲೆ ರುಕ್ಮಿಣಿ ।
ಹೀನಕುಲ ಗೊಲ್ಲ ಶ್ರೀಗೋಪಾಲಗೆ ॥ ಪ ॥

ಹಾಸಿಕಿಲ್ಲದೆ ಪೋಗಿ ಹಾವಿನೊಳು ಪವಡಿಸಿದ ।
ಹೇಸಿಕಿಲ್ಲದೆ ಕರಡಿಯನು ಕೂಡಿದ ॥
ಗ್ರಾಸಕಿಲ್ಲದೆ ಪೋಗಿ ದಾಸನ ಮನೆಯಲುಂಡ ।
ದೋಷಕಂಜದೆ ೨ ಮಾವನ ಶಿರವ ತರಿದವಗೆ ॥ ೧ ॥

ಕುಂಡಗೋಳಕರ ಮನೆ ಕುಲದೈವವೆನಿಸಿದನು ।
ಮುಂಡೆಬೋಳಾದವರ ಮನೆದೈವವು ॥
ಹಿಂಡು ಗೋವಳರೊಳಗೆ ಹಿರಿಯ ಗೋವಳನೀತ ।
ಭಂಡಾಟಗಾರನಿವ ಭುವನದೊಳಗೆಲ್ಲ ॥ ೨ ॥

ಒಬ್ಬರಲಿ ಪುಟ್ಟಿದನು ಒಬ್ಬರಲಿ ಬೆಳೆದನು ।
ಒಬ್ಬರಿಗೆ ಮಗನಲ್ಲ ಭುವನದೊಳಗೆ ॥
ಅಬ್ಬರದ ದೈವ ಸಿರಿ ಪುರಂದರವಿಟ್ಠಲನ ।
ಉಬ್ಬುಬ್ಬಿ ಮರುಳಾದೆ ಉತ್ಸಾಹದಿಂದ ॥ ೩ ॥

೯೩

ರಾಗ—ಕಾಂಬೋದಿ ತಾಳ—ಅಟ

೩ ಏನು ಮೆಚ್ಚಿದೆ ಎಲೆ ಹೆಣ್ಣೆ—ಏನು ಮರುಳಾದೆಯೆ ।
ಏನು ಮೆಚ್ಚಿದೆಯೆಲೆ ಹೆಣ್ಣೆ ॥ ಪ ॥

೧ ಆ (P) ಎ. ಏ. (೨) ಝು (೧—೦) ಶ್ರೀ: ಪ್ರತಿಗಳಿಂದ ಆರಿಸಿದೆ.
೨ (ಏ ೨) ತಾಯಿಯ.
೩ ಇ ಎ ಓ ಪ್ರತಿಗಳಿಂದ ಆರಿಸಿಕೊಂಡಿದೆ.

ನೋಟದಿ ಚೆಲುವನೆಂಬೆನೆ ಚಂಚಲರೂಪ ।
ಮಾಟದಿ ಚೆಲುವನೆ ಬೆನ್ನಲಿ ಬುಗುಟಿ ॥
ಗೂಟದಂತೆ ಹಲ್ಲು ಮೊಳದುದ್ದ ಮೋರೆಯು ।
ಬೂಟಕತನದಲ್ಲಿ ಬಾಯ ತೆರೆವನಿಗೆ ॥ ೧ ॥

ಅಣುರೂಪದವನಿವ ನಿಲುವು ಉಳ್ಳವನಲ್ಲ ।
ಬನವ ತರಿವವನಂತೆ ಕೈಯಲಿ ಕೊಡಲಿ ॥
ಅನುಜರ ಬಿಟ್ಟು ಕಪಿಗಳ ಕೂಡಿ ಆಡುವ ।
ಮನೆಮನೆಗಳ ಪೊಕ್ಕು ಕದ್ದು ತಿಂಬವನಿಗೆ ॥ ೨ ॥

ಗಂಭೀರಪುರುಷನೆಂಬೆನೆ ದಿಗಂಬರನಿವ ।
ಅಂಬರದಲಿ ಕುದುರೆ ಕುಣಿಸುವನು ॥
ಅಂಬುಜಾಕ್ಷ ನಮ್ಮ ಪುರಂದರವಿಠಲಗೆ ।
ಸಂಭ್ರಮದಿಂದಲಿ ಮರುಳಾದೆ ಹೆಣ್ಣೆ ॥ ೩ ॥

೯೪

ರಾಗ—ಶಂಕರಾಭರಣ ತಾಳ—ಆದಿ

೧ ಹೆಂಡಿರನಾಳುವಳೀ ಕನ್ನಿಕೆ ।
ಗಂಡನಿಲ್ಲದ ಹೆಂಗುಸೀ ಕನ್ನಿಕೆ ॥ ಪ ॥

ಅಂಥಿಂಥವಳೆಂದು ಅಳವಡಿಸಲು ಬೇಡ ।
ಇಂಥ ಸೊಬಗನಂತ ಏನೆಂಬೆನೊ ॥
ಸಂತತಸುರ-ದನುಜರಿಗೆ ಪ್ರಪ್ರಂಚದಿ ।
ಪಂಕ್ತಿಯೊಳಮೃತವ ಬಡಿಸಿದಳು ॥ ೧ ॥

ಶಿಶುವು ಬೊಂಬೆಯ ತೋರ ಆಲದೆಲೆಯ ಮೇಲೆ ।
ಅಸುಮಯಜಲದಲಿ ಮಲಗಿ ಮೈಮರೆದಳು ॥

೧ ಅ (ಲ) ಪ್ರತಿಯಿಂದ ಆರಿಸಿಕೊಂಡಿದೆ.

ಒಸಗೆಯಾಗದ ಮುನ್ನ ಹೊಕ್ಕುಳ ಹೂವಿನಲಿ ।
ಬಸುರಲಿ ಬೊಮ್ಮನ ಪಡೆದಳೀ ಕನ್ನಿಕೆ ॥ ೨ ॥

ಬೇಗೆಗಣ್ಣವನಿಗೆ ಬಿಸಿಗೈ ತಾಗುವಾಗ ।
ಭೋಗದ ಸೊಗತೋರಿ ಬೂದಿಯ ಮಾಡಿ ॥
ಭಾಗೀರಥಿಯ ಪಿತ ಬೇಲೂರ ಚೆನ್ನಿಗ ।
ಯೋಗಿಪುರಂದರವಿಟ್ಠಲನೆಂಬ ॥ ೩ ॥

೯೫

ರಾಗ—ಭೈರವಿ ತಾಳ—ಅಟ

೧ ಇಂಥಃ ಹೆಣ್ಣನು ನಾನೆಲ್ಲಿ ಕಾಣೆನೊ ।
ಹೊಂತಕಾರಿ ಕಾಣಿರೊ ॥ ಪ ॥

೨ ಸಂತತ ಸುರರಿಗೆ ಅಮೃತವನುಣಿಸಿದ ।
ಪಂತಿಯೊಳಗೆ ಪರಪಂತಿಯ ಮಾಡಿದ ॥ ಅ. ಪ ॥

ಮಂದರಗಿರಿ ತಂದು ಸಿಂಧುವಿನೊಳಗಿಟ್ಟು ।
ಚೆಂದದಿಂದಲಿ ಕಡೆದಮೃತವ ತೆಗೆದು ॥
ಇಂದುಮುಖಿಯೆ ನೀ ಬಡಿಸೆಂದು ಕೊಟ್ಟರೆ ।
ದಂಧನೆಯನು ಮಾಡಿ ದೈತ್ಯರ ವಂಚಿಸಿದ ॥ ೧ ॥

ವಿಸುವಾಸದಿಂದಲಿ ಅಸುರಗೆ ವರವಿತ್ತು ।
ತ್ರಿಶುಲಧರನು ಓಡಿ ಬರುತಿರಲು ॥
ನಸುನಗುತಲಿ ಬಂದು ಭಸುಮಾಸುರನಿಗೆ ।
ವಿಷಯದಾಸೆಯ ತೋರಿ ಭಸುಮವ ಮಾಡಿದ ॥ ೨ ॥

೧ ಅ (೧೧) ಇ (ಮುದ್ರಿತ) ಏ (೨) ಝ (೩ ೩-೧೦) ಪ್ರತಿಗಳಿಂದ ಆರಿಸಿದೆ.
೨ ಸಂತೋಷವನು ನೋಡು ಸುರರಿಗೆಲ್ಲ ಈಕೆ. (ಏ ೨)

ವಸುಧೆಯೊಳಗೆ ಹೆಣ್ಣು ಒಸಗೆಯಾಗದ ಮುನ್ನ ।
ಬಸುರಿಲ್ಲದೆ ಬೊಮ್ಮನ ಪಡೆದಿಹಳು ॥
ಕುಸುಮನಾಭ ನಮ್ಮ ಪುರಂದರವಿಠಲನ ।
ಪೆಸರ ಪೊತ್ತವಳು ಈ ಹೊಸ ಕನ್ನಿಕೆಯು ॥ ೩ ॥

೯೭

ರಾಗ—ಕೇದಾರಗೌಳ ತಾಳ—ಅಟ

೧ ಏತರ ಚೆಲುವ—ರಂಗಯ್ಯ ॥ ಪ ॥

ಏತರ ಚೆಲುವ ರಂಗಯ್ಯ ಶ್ರೀಹರಿಯೆಂಬ ।
ಮಾತಿಗೆ ಬರಿದೆ ಮರುಳಾದೆನಲ್ಲದೆ ॥ ಅ. ಪ ॥

ದೇಶವಾಸಗಳುಳ್ಳೊಡೆ—ತಾ ಕ್ಷೀರವಾ- ।
ರಾಶಿಯೊಳಗೆ ಮನೆ ಕಟ್ಟುವನೆ ? ॥
ಹಾಸುವ ಮಂಚವುಳ್ಳೊಡೆ—ಶ್ರುತಿಹೀನ ।
ಶೇಷನ ಮೇಲೆ ಮಲಗುವನೆ ? ॥ ೧ ॥

ಹಡೆದ ತಾಯಿ ತನಗುಳ್ಳೊಡೆ—ರಂಗ- ।
ಹೊಡೆದು ಕರು-ತುರುಗೊಂಡು ಬಾಳುವನೆ ? ॥
ಮಡದಿಯರುಳ್ಳೊಡೆ ಅಡವಿಯೊಳಾಡುವ ।
ಹುಡುಗಿಯರ ಸಂಗ ಮಾಡುವನೆ ? ॥ ೨ ॥

ಬುದ್ಧಿ ಪೇಳುವ ಪಿತನುಳ್ಳೊಡೆ—ರಂಗ- ।
ಕದ್ದು ಬೆಣ್ಣೆ ದಧಿ ಮೆಲ್ಲುವನೆ ? ॥

---

೧ ಆ (೨) ಇ ಓ ಎ ಪ್ರತಿಗಳಿಂದ ಆಯ್ದುಕೊಂಡಿದೆ.
ವಿ. ಸೂ.— ಎ ಪ್ರತಿಯಲ್ಲಿಯ ಎರಡು ನುಡಿಗಳು ಕೈಗಂಟಿನವೆಂಬಂತೆ ಕಾಣುತ್ತದೆ.

ನಿರ್ಝರ ವಾಹನನುಳ್ಳೊಡೆ—ಹಾರುವ- ।
ಹದ್ದಿನ ಹೆಗಲೇರಿ ಬಾಹನೆ ?—ರಂಗ ॥ ೩ ॥

ಸಿರಿಯುಳ್ಳೊಡೆ ತಾನು ಬಲಿಯ ಮನೆಗೆ ಪೋಗಿ ।
ಧರೆಯ ದಾನಕೆ ಕೈಯನೊಡ್ಡುವನೆ ? ॥
ಗರುವ ತಾನಾದರೆ ಪಾಂಡುಕುಮಾರನ ।
ಧುರದ ಬಂಡಿಯ ಬೋವನಾಗುವನೆ ? ॥ ೪ ॥

ಮದನಜನಕ ನಿಜ್ಜ ಚೆಲುವನೆಂತೆಂಬೆನೆ ।
ಮುದದಿಂದ ಕುಬ್ಜೆಯ ಕೂಡುವನೆ ? ॥
ಪದುಮನಾಭ ಸಿರಿ ಪುರಂದರವಿಟ್ಠಲ ।
ಗದುಗಿನ ವೀರನಾರಾಯಣ—ರಂಗ ॥ ೫ ॥

## ೯೭

ರಾಗ—ಧನ್ಯಾಸಿ ತಾಳ—ಆದಿ

೧ ಬಗೆಬಗೆ ಆಟಗಳೆಲ್ಲಿ ಕಲಿತೆಯೊ ।
ಜಗದ ಮೋಹಕನೆ ! ॥ ಪ ॥

ಖಗವರಗಮನನೆ ಅಗಣಿತಮುಹಿಮನೆ ।
ಜಗದೊಳು ನೀ ಬಹು [illegible]ಗಲಾಗೇ ಪರಿ ॥ ಅ. ಪ ॥

ಒಬ್ಬಳ ಬಸಿರಿಂದಲಿ ಬಂದು—ಮ- ।
ತ್ತೊಬ್ಬಳ ಕೈಯಿಂದಲಿ ಬೆಳೆದು ॥
ಕೊಬ್ಬಿದ [illegible] ಇಂಥ ।
ತಬ್ಬಿಬ್ಬಾಟಗಳೆಲ್ಲಿ ಕಲಿತೆಯೊ ! ॥ ೧ ॥

೧ ಆ (II) ಪ್ರತಿ[illegible]ದೆ.

ಮಗುವಾಗಿ ಪೂತಣಿ ಮೊಲೆಯ—ಉಂಡು ।
ನಗುತಲವಳ ಅಸುವನೆ ಕೊಂಡು ॥
ಅಘಹರ, ನೀ ಗೋಪಿಯೊಳು ಜನಿಸಿ ಇಂಥ ।
ಸೊಗಸಿನ ಆಟಗಳೆಲ್ಲಿ ಕಲಿತೆಯೊ! ॥ ೨ ॥

ಲೋಕರಂತೆ ನೀ ಮಣ್ಣನು ತಿನಲು ।
ತಾ ಕೋಪಿಸಿ ಜನನಿಯು ಬೇಗ ॥
ಓಕರಿಸೆನ್ನಲು ಬಾಯೊಳು ಸಕಲ ।
ಲೋಕವ ತೋರಿದುದೆಲ್ಲಿ ಕಲಿತೆಯೊ! ॥ ೩ ॥

ಮಡುವ ಧುಮುಕಿ ಕಾಳಿಂಗನ ಪಿಡಿದು ।
ಪೆಡೆಯ ಮೇಲೆ ಕುಣಿದಾಡುತಿರೆ ॥
ಮಡದಿಯರು ನಿನ್ನ ಬಿಡದೆ ಬೇಡಲು ।
ಕಡುದಯೆದೋರಿದುದೆಲ್ಲಿ ಕಲಿತೆಯೊ! ॥ ೪ ॥

ಒಂದು ಪಾದ ಭೂಮಿಯಲಿ ವ್ಯಾಪಿಸಿ ಮ- ।
ತ್ತೊಂದು ಪಾದ ಗಗನಕ್ಕಿಡಲು ॥
ಅಂದದಿ ಬಲಿಯ ಶಿರದಿ ಮೂರನೆಯದಿಟ್ಟು ।
ಬಂಧಿಸಿದಾಟಗಳೆಲ್ಲಿ ಕಲಿತೆಯೋ! ॥ ೫ ॥

ಭರದಿ ಭಸ್ಮಾಸುರ ವರವನು ಪಡೆದು ।
ಹರನ ಶಿರದಿ ಕರವಿಡಬರಲು ॥
ತರುಣಿರೂಪವ ತಾಳಿ ಉರಿಹಸ್ತದವನ ।
ಮರುಳುಗೊಳಿಸಿದುದನೆಲ್ಲಿ ಕಲಿತೆಯೊ! ॥ ೬ ॥

ಜಗಕೆ ಮೂಲನೆಂದು ನಾಗರಾಜ ಕರೆಯೆ ।
ಖಗವಾಹನನಾಗದೆ ನೀ ಬಂದು ॥
ನಗುತ ನಗುತ ಆ ವಿಗಡನಕ್ರನ ಕೊಂದ ।
ಹಗರಣದಾಟಗಳೆಲ್ಲಿ ಕಲಿತೆಯೊ! ॥ ೭ ॥

ವೇದಗಳರಸಿಯು ಕಾಣದ ಬ್ರಹ್ಮ ನೀ- |
ನಾದರದಲಿ ವಿದುರನ ಗೃಹದಿ ||
ಮೋದದಿ ಒಕ್ಕುಡಿತೆಯ ಪಾಲನೆ ಕೊಂಡು |
ಹಾದಿಯೊಳ್ ಹರಿಸಿದುದೆಲ್ಲಿ ಕಲಿತೆಯೊ ! || ೮ ||

ಡಂಬಕ ಹಿರಣ್ಯಕಶಿಪು ಪ್ರಹ್ಲಾದನ |
ಹಂಬಲವಿಲ್ಲದೆ ಶಿಕ್ಷಿಸಲು ||
ಸ್ತಂಭದಿ ಭಕ್ತಗೆ ರೂಪವ ತೋರಿ |
ಸಂಭ್ರಮವಿತ್ತುದನೆಲ್ಲಿ ಕಲಿತೆಯೊ! || ೯ ||

ಚಕ್ರಧರನೆ ಜರಾತನಯನೊಂದಿಗೆ ಕಾದಿ |
ಸಿಕ್ಕಿ ಓಡಿದವನಿವನೆಂದೆನಿಸಿ ||
ಭಕ್ತಭೀಮನ ಕೈಯಲಿ ಕೊಲ್ಲಿಸಿದ |
ಠಕ್ಕಿನಾಟಗಳನೆಲ್ಲಿ ಕಲಿತೆಯೊ ! || ೧೦ ||

ಪ್ರಾಣ ಸೆಳೆವೆನೀ ದಿನವೆಂದರ್ಜುನ |
ಧೇನಿಸದಲೆ ಸೈಂಧವಗೆನಲು ||
ಕಾಣದಂತೆ ಸೂರ್ಯಗೆ ಚಕ್ರವನಿಟ್ಟು |
ಬಾಣ ಹೊಡಿಸಿದುದನೆಲ್ಲಿ ಕಲಿತೆಯೊ || ೧೧ ||

ಆ ಶಿರವಾತನ ತಂದೆಯ ಕರದೊಳು |
ಸೂಸುತ ರಕ್ತವ ಬೀಳುತಿರೆ ||
ಸೋಸಿ ನೋಡದೆ ರುಂಡ ಬಿಸುಡಲವನ ಶಿರ |
ಸಾಸಿರ ಮಾಡಿಮುದೆಲ್ಲಿ ಕಲಿತೆಯೊ ! || ೧೨ ||

ಸರ್ಪನ ಬಾಣವು ಉರಿಯುತ ಬರಲು ಕಂ- |
ದರ್ಪನಪಿತ ನೀ ಕರುಣದಲಿ ||
ತಪ್ಪಿಸಿ ಪಾರ್ಥನ ರಥ ನೆಲಕೊತ್ತಿ |
ತೋರ್ದಿಡಿನಾಟವೆಲ್ಲಿ ಕಲಿತೆಯೊ ! || ೧೩ ||

ದುರುಳದುಃಶಾಸನ ದ್ರೌಪದಿ ಸೀರೆಯ ।
ಕರದಿಂದ ಸಭೆಯೊಳು ಸೆಳೆಯುತಿರೆ ॥
ಹರಿ ಶ್ರೀಕೃಷ್ಣ ನೀ ಪೊರೆಯೆನಲಾಕ್ಷಣ ।
ಅರಿವೆರೂಪದಿ ಬಂದುದೆಲ್ಲಿ ಕಲಿತೆಯೊ ! ॥ ೧೪ ॥

ಕುರುಪತಿ ಸಭೆಯೊಳು ಗರುವಿನಿಂದಿರುತ ।
ಸಿರಿ ಕೃಷ್ಣನು ಬರೆ ವಂದಿಸದೆ ॥
ಸ್ಥಿರವಾಗಿ ಕುಳಿತಿರೆ ಚರಣದಿ ಧರೆಮೆಟ್ಟ ।
ಕುರುಪನನುರುಳಿಸಿದ್ದೆಲ್ಲಿ ಕಲಿತೆಯೊ ! ॥ ೧೫ ॥

ದುರಿಯೋಧನ ಪಾಂಡವರ ಶಿಕ್ಷಿಸಲು ।
ಮೊರೆಯಿಡಲವನ ಮರುಳುಗೊಳಿಸಿ ॥
ಧುರದೊಳು ಪಾರ್ಥಗೆ ಸಾರಥಿಯಾಗಿ ನೀ ।
ಕುರುಕುಲವಳಿದುದನೆಲ್ಲಿ ಕಲಿತೆಯೊ! ॥ ೧೬ ॥

ಪತಿಶಾಪದಿ ಶಿಲೆಯಾದ ಅಹಲ್ಯೆಯ ।
ಹಿತದಿಂದವಳನು ಉದ್ಧರಿಸಿ ॥
ಪತಿಯೊಡಗೂಡಿಸಿ ಪತಿವ್ರತೆಯೆನಿಸಿದ—ಅ- ।
ಮಿತಮಹಿಮೆಯ ಕೃತಿಯೆಲ್ಲಿ ಕಲಿತೆಯೊ ॥ ೧೭ ॥

ಅಂಬರೀಷ ದ್ವಾದಶಿ ವ್ರತ ಸಾಧಿಸೆ ।
ಡೊಂಬೆತನದಿ ದೂರ್ವಾಸ ಬರೆ ॥
೨ ಇಂದುಧರಾಂಶನು ರಾಜನ ಪೀಡಿಸ- ।
ಲಂದು ಚಕ್ರದಿ ಕಾಯ್ದುದೆಲ್ಲಿ ಕಲಿತೆಯೊ ! ॥ ೧೮ ॥

ಕುಲಛಲಗಳನಳಿದ ಅಜಮಿಳ ಸರಸದಿ ।
ಹೊಲತಿಯ ಕೂಡಿರೆ ಮರಣ ಬರೆ ॥

---

೨ ಇಲ್ಲಿ ಪ್ರಾಸ ತಪ್ಪಿದೆ.

ಪ್ರಿ. ಸೂ.— ೬ ಪ್ರತಿಯಲ್ಲಿ ಎರಡು ನುಡಿಗಳು ಹೆಚ್ಚಿವೆ.

ಬಲು ಮೋಹದ ಸುತ ನಾರಗನೊದರಲು !
ಒಲಿದು ಗತಿಯನಿತ್ತುದೆಲ್ಲಿ ಕಲಿತೆಯೊ ! || ೧೯ ||

ಬಡತನ ಪಾರ್ವನ ಜಡದೆ ಬಾಧಿಸಲು |
ಮಡದಿಯ ನುಡಿ ಕೇಳಿ ಆಕ್ಷಣದಿ ||
ಒಡೆಯ ನೀನವನೊಪ್ಪಿಡಿಯವಲನು ಕೊಂಡು |
ಕಡುಭಾಗ್ಯನಿತ್ತುದನೆಲ್ಲಿ ಕಲಿತೆಯೊ ! || ೨೦ ||

ಎಂದೆಂದು ನಿನ್ನ ಗುಣವೃಂದಗಳೆಣಿಸಲು |
ಇಂದಿರೆ ಬೊಮ್ಮನಿಗಸದಳವು ||
ಮಂದರಧರ ಸಿರಿಪುರಂದರವಿಠಲನೆ |
ಚೆಂದ-ಚೆಂದದಾಟಗಳೆಲ್ಲಿ ಕಲಿತೆಯೊ ! || ೨೧ ||

೯೮

ರಾಗ—ಉದಯರಾಗ ತಾಳ—ಝಂಪೆ

( ಗಜೇಂದ್ರಮೋಕ್ಷ )

೧ ನಾರಾಯಣಾಯ ನಮೋ ನಾಗೇಂದ್ರಶಯನಾಯ |
ನಾರದಾದ್ಯಖಿಳ ಮುನಿನಮಿತ ಪಾದಾಂಭೋಜ |
ಸೇರಿದರೆ ಪೊರೆವ ಕಂಸಾರಿ ರಕ್ಷಿಪನೆಮ್ಮ |
ಕಾರುಣ್ಯದಿಂದ ಒಲಿದು || ಪ ||

ಪಾಂಡ್ಯದೇಶದೊಳು ಇಂದ್ರದ್ಯುಮ್ನನೆಂಬ ಭೂ- |
ಮಂಡಲಾಧಿಪನು ವೈರಾಗ್ಯದಲಿ ಹರಿಪಾದ- |
ಪುಂಡರೀಕಧ್ಯಾನಪರನಾಗಿ ತಪದೊಳಿರೆ
ಚಂಡತಾಪಸನಗಸ್ತ್ಯ ||

೨ ಅ (ತ) ಪ್ರತಿಯಿಂದ ತಿದ್ದುಕೊಂಡಿದೆ. ಬ. ಬಿ. ಪ್ರತಿಗಳಲ್ಲಿ ಮನಸ್ಸಿಗೆ ಬಂದಹಾಗೆ ತಿದ್ದಲಾಗಿದೆ.

ಹಿಂಡುಶಿಷ್ಯರುವೆರಸಿ ಬರಲು ಸತ್ಕರಿಸದಿರೆ ।
ಕಂಡುಗ್ರಕೋಪದಿಂ ಗಜವಾಗಿ ಜನಿಸಲು- ।
ದ್ದಂಡ ಶಾಪವನಿತ್ತು ಮುನಿ ತಿರುಗಲತ್ತಲೈ
ಶುಂಡಾಲನಾದನರಸ ॥ ೧ ॥

ಕ್ಷೀರಸಾಗರದಲಿರಡೀರೈದು ಯೋಜನದ ।
ಮೇರೆಯಲಿ ವರತ್ರಿಕೂಟಾದ್ರಿ ಶೃಂಗತ್ರಯದಿ ।
ರಾರಾಜಿಸುವ ತಾಮ್ರ-ರಜತ-ಕಾಂಚನದಿಂದ
ನಾರಾಯಣಾಂಶದಿಂದ ॥

ಪಾರಿಜಾತಾಂಭೋಜ ಬಕುಳ ಮಲ್ಲಿಗೆ ಜಾಜಿ ।
ಸೌರಭದಲಶ್ವತ್ಥ ಪೂಗ ಪುನ್ನಾಗ ಜಂ- ।
ಬೀರ ತರು ಗುಲ್ಮ ಶಾಖಾಮೃಗಗಳೆಸೆವಲ್ಲಿ
ವಾರಣೇಂದ್ರನು ಮೆರೆದನು ॥ ೨ ॥

ಆನೆ ಹೆಣ್ಣಾನೆ ಮರಿಯಾನೆಗಳ ಸಹಿತಲ್ಲಿ ।
ಕಾನನದಿ ತೊಳಲುತ್ತ ಬೇಸಗೆಯ ಬಿಸಿಲಲ್ಲಿ ।
ತಾನು ನೀರಡಿಸಿ ಬಂದೊಂದು ಸರಸಿಯ ತಟಕೆ
ಪಾನಾಭಿಲಾಷೆಯಿಂದ ॥

ನಾನಾಪ್ರಕಾರದಿಂ ಜಲಕ್ರೀಡೆಯಾಡುತಿರ- ।
ಲೇನಿದೆತ್ತಣ ರಭಸವೆಂದುಗ್ರಕೋಪದಿಂ ।
ಆ ನೆಗಳು ಬಾಯ್ದೆರೆದು ನುಂಗಿತೊಂದಂಘ್ರಿಯನು
ಏನೆಂಬೆನಾಕ್ಷಣದೊಳು ॥ ೩ ॥

ಒತ್ತಿ ಪಿಡಿದೆಳೆಯುತಿರೆ ಎತ್ತಣದಿದೇನೆನುತ ।
ಮತ್ತ ಇಭರಾಜನೌಡೊತ್ತಿ ನೋಡುತ್ತಂಘ್ರಿ ।
ಎತ್ತಿ ತಂದನು ತಡಿಗೆ ಮತ್ತೆ ನಡುಮಡುವಿನೊಳು
ಅತ್ತಲೇ ತಿರುಗೆ ನೆಗಳೆ ॥

ಇತ್ತಂಡದಿಂತು ಕಾದಿದರು ಸಾವಿರ ವರುಷ |
ಉತ್ತರಿಸಿತೇನೆಂಬೆ ಮತ್ತಾ ಗಜೇಂದ್ರಂಗೆ |
ಸತ್ತ್ವ ತಗ್ಗಿತು ತನ್ನ ಮನದೊಳಗೆ ಚಿಂತಿಸಿತು
ಮತ್ತಾರು ಗತಿಯೆನುತಲಿ || ೪ ||

ಬಂದುದಾ ಸಮಯದಲಿ ಹಿಂದೆಮಾಡಿದ ಪುಣ್ಯ- |
ದಿಂದ ದಿವ್ಯಜ್ಞಾನ ಕಣ್ದೆರೆದು ಮನದೊಳರ- |
ವಿಂದನಾಭಾಚ್ಯುತ ಮುಕುಂದ ಮಾಧವ ಕೃಷ್ಣ
ನಿಖಿಲಮುನಿವೃಂದವಂದ್ಯ ||

ಇಂದಿರಾರಮಣ ಗೋವಿಂದ ಕೇಶವ ಭಕ್ತ- |
ಬಂಧು ಕರುಣಾಸಿಂಧು ತಂದೆ ನೀ ಗತಿಯೆನಗೆ |
ಇಂದು ಸಿಲ್ಕಿದೆನು ಬಲು ದಂದುಗದ ಮಾಯಾಪ್ರ-
ಬಂಧಕನೆ ನೆಗಳಿನಿಂದ || ೫ ||

ಪರಮಾತ್ಮ ಪರಮೇಶ ಪರತತ್ತ್ವ ಪರಿಪೂಜ್ಯ |
ಪರತರ ಪರಂಜ್ಯೋತಿ ಪರಮಪಾವನಮೂರ್ತಿ |
ಪರಮೇಷ್ಟಿ ಪರಬ್ರಹ್ಮ ಪರಮ ಪರಮಾಕಾಶ
ಪರಿಪೂರ್ಣ ಪರಮಪುರುಷ ||

ನಿರುಪಮ ನಿಜಾನಂದ ನಿರ್ಲಯ ನಿರಾಕಾರ |
ನಿರವಧಿಕ ನಿರ್ಗುಣ ನಿರಂಜನ ನಿರಾಧಾರ |
ನಿರವದ್ಯ ನಿಸ್ಸಂಗ ನಿಶ್ಚಿಂತ ನಿಖಿಲೇಶ
ಇರದೆ ನೀ ಸಲಹೆಂದನು || ೬ ||

ಇಂತೆನುತ ಮೂರ್ಛೆಯಲಿ ಗುಪ್ತಕಂಠಸ್ವನದ |
ಕಾಂತ ನಡುನೀರೊಳಗೆ ತೇಲಿ ಮುಳುಗುತಲಿರೆ ಅ- |
ಚಿಂತ್ಯಮಹಿಮನು ಕೇಳಿ ಕರುಣದಿಂದಾ ಮಹಾ-
ನಂತಶಯನದೊಳಿದ್ದನು ||

ಸಂತವಿಡುತುಡೆ-ಮುಡಿಯು ಗರುಡನೇರದೆ ಬಂದು ।
ಚಿಂತೆ ಬೇಡೆನುತಭಯಹಸ್ತವನು ಕೊಡುತ ಶ್ರೀ- ।
ಕಾಂತ ಭಕ್ತನ ಬಳಿಗೆ ಬಂದೆಡದ ಕೈಯಿಂದ
ದಂತಿವರನನು ನೆಗಹಿದ ॥ ೭ ॥

ನೆಗಳ ಬಾಯನು ಚಕ್ರದಲಿ ಸೀಳಿ ಕರಿವರದ ।
ಒಗುವ ಕರಣದಲಿ ಮೈದಡಹಲ್ಕೆ ಗಜಜನ್ಮ ।
ತೆಗೆದುದಾಕ್ಷಣಕೆ ಮಣಿಮುಕುಟ-ಕುಂಡಲದಿಂದ
ನಗಧರನು ಓಲೈಸಿದ ॥
ವಿಗಡದೇವಲ ಮುನಿಯ ಶಾಪದಲಿ ಧಾರುಣಿಯೊ- ।
ಳಗೆ ನಕ್ರನಾಗಿ ಹೂಹೂ ಎಂಬ ಗಂಧರ್ವ ।
ಮಗುಳಿ ಪುರವನು ಕಂಡು ನಿಜಗತಿಗೆ ಐದಿದನು
ಕಮಲಾಕ್ಷ ಮಿಗೆ ಮೆರೆದನು ॥ ೮ ॥

ಮಣಿಮುಕುಟ ಕುಂಡಲ ಪದಕ ಹಾರ ಕಡಗ ಕಂ- ।
ಕಣ ಕೌಸ್ತುಭೋಜ್ಜ್ವಲಾಂಗದ ವೈಜಯಂತಿ ಭೂ- ।
ಷಣ ಶಂಖ-ಚಕ್ರ-ಗದೆ-ಪದ್ಮ ಧರಿಸಿಹ ಹಸ್ತ
ಪಣೆಯು ಕಸ್ತೂರಿ ತಿಲಕದಾ ॥
ಝಣಝಣಿಪ ನೂಪುರದ ದಂತಪಂಕ್ತಿಯು ಕೃಪೇ- ।
ಕ್ಷಣದ ಸಿರಿಮೊಗದ ಪೀತಾಂಬರದ ಮೂರುತಿಗೆ ।
ಮಣಿದು ಜಯ ಜಯ ಜಯಾ ಎಂಬ ಸುರನರರ ಸಂ-
ದಣಿಯಿಂದೆ ಹರಿ ಮೆರೆದನು ॥ ೯ ॥

ಹರಿಹರಿ ಎನುತ್ತಂಘ್ರಿಗೆರಗಲಿಭವರಸನಾ- ।
ದರದಿಂದಲೆತ್ತುತಲಿ ಕೇಳ್ಮಗನೆ ನೀನೆನ್ನ ।
ವಿರಜ ಶರಪರಿಧಿಯಿಾ ಸರವನಹಿಪತಿಯನ್ನು
ಪರಜನ್ಮನೀ ಲಕುಮಿಯ ॥

ಪರಮೇಷ್ಠಿ-ಭವರ ಮನು-ಮುನಿಗಳನು ಧರಣಿಯನು |
ತರಣಿ ಶಶಿ ನವಶಕ್ತಿ ವಿಷ್ಣು ಧರ್ಮವತಾರ- |
ಪರ ವರಗದಾ ಶಂಖ ಚಕ್ರಾಂಬುಜಂಗಳನು
ಸ್ಮರಿಸುವರ ಕಾವೆನೆಂದ || ೧೦ ||

ಆವಾವನಿದನುದಯದಲ್ಲೆದ್ದು ಭಕ್ತಿಯಲಿ |
ಭಾವಶುದ್ಧಿಯಲಿ ತಾ ಹೇಳಿಕೊಳುವನೊ ಅವನ- |
ಘಾವಳಿಯ ಪರಿಹರಿಸಿ ಸುಜ್ಞಾನವೀವೆ ದೇ-
ಹಾವಸಾನದಲೆನುತಲಿ ||
ಶ್ರೀವಾಸುದೇವನಾಜ್ಞಾಪಿಸಿ ಗಜೇಂದ್ರ ಸಹಿ- |
ತಾವಿಹಂಗಾಧಿಪನನೇರಿ ವೈಕುಂಠಕ್ಕೆ |
ದೇವ ಬಿಜಯಂಗೈದ ಪುರಂದರವಿಟ್ಠಲನ
ಸೇವಕರಿಗಿದುಚಿತ್ರವೆ || ೧೧ ||

## ೯೯

ರಾಗ—ಸೌರಾಷ್ಟ್ರ ತಾಳ—ರೂಪಕ

## ದ್ರೌಪದಿಯ ಮಾನಸಂರಕ್ಷಣೆ

೧ ರಂಗನೊಲಿದ ನಮ್ಮ ಕೃಷ್ಣನೊಲಿದ |
ಅಂಗನೆ ದ್ರೌಪದಿಗೆ ಅಕ್ಷಯವಸ್ತ್ರವನಿತ್ತ || ಪ ||

ಕರಿಯಪುರದ ನಗರದಲ್ಲಿ ಕೌರವರು ಪಾಂಡವರು |
ಧರೆಯನೊಡ್ಡಿ ಚಿತ್ರವಿಡಿದು ಜೂಜನಾಡಲು ||
ಪರಮಪಾಪಿ ಶಕುನಿ ತಾನು ಪಾಶಿನೊಳಗೆ ಪೊಕ್ಕಿರಲು |
ಧರುಮರಾಯ ಧಾರಿಣಿ-ದ್ರೌಪದಿಯ ಸೋತನು || ೧ ||

---

೧ ೨ (II) ನೇ ಪ್ರತಿಗಳಿಂದ ಆರಿಸಿಕೊಂಡಿದೆ.

ಮುದ್ದುಮೊಗದ ದ್ರೌಪದಿಯು ಮುಂದೆಮಾಡಿ ತನ್ನಿರೆಂದು ।
ತಿದ್ದಿ ತನ್ನ ಮನ್ನೆಯರಿಗೆ ತಿಳಿಯ ಹೇಳಿದ ॥
ಮುದ್ರೆಮನ್ನೆಯರು ಬಂದು ದ್ರೌಪದಿಯ ಮುಂದೆ ನಿಂತು ।
ಬುದ್ಧಿಯಿಂದಲೆಲ್ಲವನ್ನು ಬಿನ್ನಹಮಾಡಲು ॥ ೨ ॥

ಅಮ್ಮ ಕೇಳೆ ಅರಸುಗಳು ಅಚ್ಚ ಪಗಡೆಪಂಥವಾಡಿ ।
ಹೆಮ್ಮೆಯಿಂದ ಜೂಜಿಗಿಟ್ಟು ಲೆತ್ತವಾಡಲು ॥
ಧರ್ಮರಾಯ ಸೋತನೆಂದು ಸತ್ಯವಚನಿ ಕೌರವಂಗೆ ।
ನಿಮ್ಮ ನಿಜದಿ ಸೇರಿ ಆಗ ಕೊಟ್ಟರೆಂದರು ॥ ೩ ॥

ಪಟ್ಟಪದವಿ ಅವರಿಗಾಗಿ ಬಡವರಾಗಿ ಇರುವೆವೆಂದರೆ ।
ಕೆಟ್ಟ ಪಗಡೆ ಪಂಥ ಜೂಜಿದೆಲ್ಲಿ ಒದಗಿತು ? ॥
ದುಷ್ಟ ಕೌರವನು ಎನ್ನ ಲಜ್ಜೆ-ನಾಚಿಕೆಯ ಕೊಂಡು ।
ಭ್ರಷ್ಟಮಾಡುವನು ಎಂದು ಬಳಲಿ ದ್ರೌಪದಿ ॥ ೪ ॥

ಬಾಗಿ ಬಳುಕಿ ಬೆದರಿ ಬಿಕ್ಕಿ ಕಣ್ಣನೀರನುದುರಿಸುತಲಿ ।
ಮಾಗಿಯ ಕೋಗಿಲೆಯಂತೆ ಕಾಯ ಒಲೆಯುತ ॥
ಆಗ ಕೃಷ್ಣನಂಘ್ರಿಗಳನು ಅಂತರಂಗದಲ್ಲಿ ನೆನೆದು ।
ಸಾಗಿಸಾಗಿ ಹೆಜ್ಜೆ ಇಡುತ ಸಭೆಗೆ ಬಂದಳು ॥ ೫ ॥

ವೀರಕರ್ಣ ಅಶ್ವತ್ಥಾಮ ವಿದುರ ಶಲ್ಯ ಭಗದತ್ತರು ।
ಕ್ರೂರ ಕೌರವ ದುಃಶಾಸನ ಗುರುಹಿರಿಯರು ॥
ಸಾರುತಿಪ್ಪ ಭಟರು ಪರಿವಾರ ರಾವುತರ ಕಂಡು ।
ಧಾರಿಣಿಗೆ ಮುಖವ ಮಾಡಿ ನಾಚಿ ನಿಂತಳು ॥ ೬ ॥

ಚೆಂದದಿಂದ ದುರ್ಯೋಧನ ಚದುರಿ ದ್ರೌಪದಿಯ ಕಂಡು ।
ಮುಂದರಿಯದೆ ಮುಗುಳುನಗೆಯ ಮಾತನಾಡಿದ ॥
ಅಂದು ಸ್ವಯಂವರದಲ್ಲಿ ಐವರಿಗೆ ಆದ ಬಾಲೆ ।
ಇಂದು ಎನ್ನ ಪಟ್ಟದರಸಿಗೊಪ್ಪಿದೆಯೆಂದನು ॥ ೭ ॥

ಮಲ್ಲಿಗೆಯನು ಮುಡಿಯೆ ನಾರಿ ಮುದ್ದುಮೊಗದ ಒಯ್ಯಾರಿ ।
ಚೆಲ್ಲಿಗಂಗಳ ದ್ರೌಪದಿಯೇ ಬಾರೆ ಎಂದನು ॥
ಬಿಲ್ಲು ಎತ್ತಲಾರದವನೆ ಬಂಡಣ ಕಾದದಿದ್ದವನೇ ।
ಹಲ್ಲುಕೀಳುವರೈವರು ಬೇಡವೆಂದಳು ॥ ೮ ॥

ಬಟ್ಟೆಬಡಕರೈವರಿಗೆ ಮಿತ್ರೆಯಾಗುವುದು ಸಲ್ಲ ।
ಪಟ್ಟೆಮಂಚಕೊಪ್ಪುವಂತೆ ಬಾರೆ ಎಂದನು ॥
ಕೆಟ್ಟಮಾತನಾಡದಿರೊ ಕ್ರೋಧದಿಂದ ನೋಡದಿರೊ ।
ರಟ್ಟೆಕೀಳುವರೈವರು ಬೇಡವೆಂದಳು ॥ ೯ ॥

ಅಡವಿತಿರುಕರೈವರಿಗೆ ಮಡದಿಯಾಗುವುದು ಸಲ್ಲ ।
ತೊಡೆಯ ಮೇಲೆ ಒಪ್ಪುವಂತೆ ಬಾರೆ ಎಂದನು ॥
ಬೆಡಗುಮಾತನಾಡದಿರೊ ಭೀಮಸೇನನ ಗದೆಯು ನಿನ್ನ ।
ತೊಡೆಯ ಮೇಲೆ ಒಪ್ಪುವುದು ಜೋಡವೆಂದಳು ॥ ೧೦ ॥

ಅಚ್ಚ ಪೊಂಬಣ್ಣದ ಬೊಂಬೆ ಆನೆಯಂತೆ ನಡೆವ ರಂಭೆ ।
ಅಚ್ಚ ಮುತ್ತಿನಂತೆ ಬಿಂಬೆ ಬಾರೆ ಎಂದನು ॥
ಹೆಚ್ಚು-ಕುಂದನಾಡದಿರೊ ಪರರ ಹೆಣ್ಣ ನೋಡದಿರೊ ।
ಚುಚ್ಚಿಹಾಕುವರೈವರು ಬೇಡವೆಂದಳು ॥ ೧೧ ॥

ಎಷ್ಟು ಬಿಂಕ-ಬಡಿವಾರವು ಹೆಣ್ಣಬಾಲೆಗಿವಳಿಗೆಂದು ।
ಸಿಟ್ಟಿನಿಂದ ದುರ್ಯೋಧನ ನಾರಿ ಕೋಪಿಸಿ ॥
ಉಟ್ಟಸೀರೆ ಸೆಳೆಯಿರಿವಳ ಉಬ್ಬು ಕೊಬ್ಬು ತಗ್ಗಲೆಂದು ।
ದೃಷ್ಟಿಯಿಂದ ದುಃಶಾಸಗೆ ಸನ್ನೆಮಾಡಿದ ॥ ೧೨ ॥

ದುರುಳ ದುಃಶಾಸ ಬಂದು ದ್ರೌಪದಿಯ ಮುಂದೆ ನಿಂತು ।
ಕರವ ಪಿಡಿದು ಸೆರಗಹಿಡಿದು ಸಿರಿಯ ಸೆಳೆಯಲು ॥
ಮರುಳು ಆಗದಿರೋ ನಿನ್ನ ರಕ್ತದೊಳಗೆ ಮುಡಿಯನದ್ದಿ ।
ಕರುಳ ದಂಡೆಯನ್ನೆ ಮಾಡಿ ಮುಡಿವೆನೆಂದಳು ॥ ೧೩ ॥

ಗುಲ್ಲುಗಂಟಿ ಹೆಣ್ಣೆ ನಿನ್ನ ಕಾಡಿ ಬಳಲಿಸುವೆನು ಎಂದು ।
ಗಲ್ಲದಲ್ಲಿ ಕೈಯನಿಕ್ಕಿ ಸಿರಿಯ ಸೆಳೆಯಲು ॥
ನಿಲ್ಲೊ ನಿಲ್ಲೊ ಪಾಪಿ ನಿನ್ನ ನಾಲಗೆ ಎರಡಾಗಿ ಸೀಳಿ ।
ಪಲ್ಲಿನಲ್ಲಿ ಕೇಶ ಹಿಕ್ಕಿಕೊಂಬೆನೆಂದಳು ॥ ೧೪ ॥

ಬೆನ್ನಿನಲ್ಲಿ ಪೆಟ್ಟನಿಕ್ಕಿ ಭಂಡುಮಾಡುವೆನು ಎಂದು ।
ಕೆನ್ನೆಯಲ್ಲಿ ಕೈಯನಿಕ್ಕಿ ಸಿರಿಯ ಸೆಳೆಯಲು ॥
ರನ್ನೆ ವೀರಬೊಬ್ಬೆಯಿಕ್ಕಿ ರಭಸದಿಂದ ಸಾರುತಲಿ ।
ಪನ್ನಗಶಯನ ಕೃಷ್ಣ ಕೃಷ್ಣ ಕಾಯೊ ಎಂದಳು ॥ ೧೫ ॥

ಮಚ್ಛ ಕೂರ್ಮ ವರಹ ಕಾಯೊ, ಮುದ್ದು ನಾರಸಿಂಹ ಕಾಯೊ ।
ಹೆಚ್ಚಿನ ವಾಮನನೆ ಕಾಯೊ ಭಾರ್ಗವ ಕಾಯೊ ॥
ಅಚ್ಯುತ ರಾಮ ಕೃಷ್ಣ ಕಾಯೊ ಬೌದ್ಧ ಕಲ್ಕಿರೂಪ ಕಾಯೊ ।
ಸಚ್ಚಿದಾನಂದ ಸ್ವಾಮಿ ಕಾಯೊ ಎಂದಳು ॥ ೧೬ ॥

ಸಜ್ಜನರ ಪ್ರಿಯನೆ ಕಾಯೊ ಸಾಧುರಕ್ಷಕನೆ ಕಾಯೊ ।
ನಿರ್ಜರವಂದಿತನೆ ಕಾಯೊ ನರಹರಿ ಕಾಯೊ ॥
ಅರ್ಜುನನ ಸಖನೆ ಕಾಯೊ ಆನತಪಾಲಕನೆ ಕಾಯೊ ।
ಲಜ್ಜೆ-ನಾಚಿಕೆಯ ಕಾಯೊ ಸ್ವಾಮಿ ಎಂದಳು ॥ ೧೭ ॥

ಸಿಂಧುಸಾಗರದ ಶಯನ ದ್ರೌಪದಿಯ ಮೊರೆಯ ಕೇಳಿ ।
ಅಂದು ಉಟ್ಟ ವಸ್ತ್ರಗಳು ಅಕ್ಷಯವೆಂದನು ॥
ಒಂದು ಎರಡು ಮೂರು ನಾಲ್ಕುಕೋಟ್ಯಸಂಖ್ಯ ಸೀರೆಗಳು ।
ನೊಂದು ಬೆಂದು ದುಃಶಾಸನು ನಾಚಿ ಕುಳಿತನು ॥ ೧೮ ॥

ನೋಡಿದರು ದ್ರೌಪದಿಯ ಮಾನರಕ್ಷ ಲೀಲೆಗಳನು ।
ಮಾಡಿದರು ಮಾಧವನ ಮುದ್ದುಸ್ತೋತ್ರವ ॥
ಮೂಢ ಕೌರವನ ಕೂಡ ಮಾನಿನಿ ದ್ರೌಪದಿಯು ಪಂಥ- ।
ವಾಡಿ ತನ್ನ ಪತಿಗಳೈವರನ್ನು ಗೆಲಿದಳು ॥ ೧೯ ॥

ಕೇಶಮುಡಿಗಳನ್ನು ಕಟ್ಟಿ ಕೈಯಕಾಲ ಮಣ್ಣನೊರಸಿ ।
ಸಾಸಿರನಾಮದ ಕೃಷ್ಣನು ಸುರರ ಪಾಲಿಪ ॥
ವಾಸಿಯುಳ್ಳ ಕೃಷ್ಣ ಎನ್ನ ವಹಿಸಿ ಮಾನಕಾಯ್ದನೆಂದು ।
ತೋಷದಿಂದ ದ್ರೌಪದಿಯು ಮನೆಗೆ ಬಂದಳು ॥ ೨೦ ॥

ಇಂತು ಆ ದ್ರೌಪದಿಯ ಮಾನರಕ್ಷ ಲೀಲೆಗಳನು ।
ಸಂತತದಲಿ ಹಾಡಿ ಕೇಳಿ ನಲಿವ ಜನರಿಗೆ ।
ಸಂತಾನ ಸೌಭಾಗ್ಯ ಸಕಲಭೀಷ್ಟೆಗಳನು ಕೊಡುವ ।
ಕಂತುಜನಕ ನಮ್ಮ ಪುರಂದರವಿಠಲನು ॥ ೨೧ ॥

## ೧೦೦

ರಾಗ—ಮುಖಾರಿ ತಾಳ—ಝಂಪೆ

೧ ಪಾವೆಯೆಲ್ಲಿಹುದಯ್ಯ ವೈಕುಂಠಪತಿಗೆ ।
೨ ದೇವಭಾರ್ಗವನಾಗಿ ಮಾತೆಯ ಶಿರವ ಕಡಿದ ॥ ಪ ॥

ಒಬ್ಬ ಮಾವನ ಕೊಂದ, ಒಬ್ಬ ಮಾವನನೆಸೆದ ।
ಒಬ್ಬ ಮಾವನ ಕೂಡೆ ಕಡಿದಾಡಿದ ॥
ಒಬ್ಬ ಭಾವನ ಹಿಡಿದು ಹೆಡಗೈಯ ಕಟ್ಟಿದನು ।
ಒಬ್ಬ ಭಾವಗೆ ಬಂಡಿಬೋವನಾದ ॥ ೧ ॥

ಕುಂಭಿನಿಗೆ ಪತಿಯಾದ ಕುಂಭಿನಿಗಳಿಯನಾದ ।
ಕುಂಭಿನೀಪತಿಯ ಸಂಹರ ಮಾಡಿದ ॥
ಅಂಬುಧಿಗೆ ಪಿತನಾದ ಅಂಬುಜೆಗೆ ಪತಿಯಾದ ।
ಅಂಬುಜಾಸನಗೆ ತಾ ಸ್ವಾಮಿಯಾದ ॥ ೨ ॥

ಪೊಮ್ಮನನು ಮುಲಗಿಸಿದ ಅವನ ಹೆಮ್ಮಕ್ಕಳನು ।
ಇಮ್ಮೈಯ್ಯನರಿತು ಸಂಹರವಮಾಡಿದ- ॥

೧ ಅ (ಶ I) ತ ೩ ಮ ಜ ಪ್ರತಿಗಳಿಂದ ಆರಿಸಿದೆ.
೨ ಚೆಲ್ವರಾಮ (ಬಹುಮತ).

ರಮ್ಯಮೂರುತಿ ಪುರಂದರವಿಠಲದೇವೇಶ ।
ಬೊಮ್ಮಮೂರುತಿಗೆಲ್ಲಿ ಬಂಧುಬಳಗ ॥ ೩ ॥

## ೧೦೧

ರಾಗ—ಮೋಹನ ತಾಳ—ಅಟ

೧ ಹಿಂದಿನ ಭವಣೆಗಳೆಲ್ಲ ಆಗಲೆ ಮರೆದೆಯೇನೊ ।
ಇಂದು ಬಂದ ಭಾಗ್ಯವು ನಿಜವೆ ವೆಂಕಟತಂದೆ? ॥ ಪ ॥

ತಲೆಗೆ ಹುಲುಗಲ ಹೂವ ಕಟ್ಟಿ ತುರುಗಳ ಕಾಯುತಲಿದ್ದೆ ।
ಹಲವು ರತ್ನದ ಮುಕುಟ ಈಗ ಇಟ್ಟಿಹೆನೆಂದು ॥ ೧ ॥

ಒಪ್ಪಿಡಿ ಅವಲಕ್ಕಿಯನು ಒಪ್ಪದಿಂದ ಸವಿದೇ ಸವಿದೆ ।
ತಪ್ಪದೆ ಪಂಚಾಮೃತ ಉಂಡು ಸೊಕ್ಕಿದೆನೆಂದು ॥ ೨ ॥

ಭಾಗ್ಯವು ಬಂದರೆ ಭಕ್ತರನು ಮರೆವರೆ ಸೌ- ।
ಭಾಗ್ಯವಂತ ನೀನು ಪುರಂದರವಿಠಲ ॥ ೩ ॥

## ೧೦೨

ರಾಗ—ಆರಭಿ ತಾಳ—ಆದಿ

೨ ದಾತ ಹರಿಯು ದಯಮಾಡುವನಿರಲು ।
ಏತರ ಭಯವೋ ಹೇ ಮನುಜಾ ॥ ಪ ॥

ಬೆಳಗು ಬೈಗು ಮೈಹುಳುಕು ಹರಟೆಯಲಿ ।
ಕೆಲವು ಕಾಲದಲಿ ಗಳಿಗೆಯಾದರೂ ॥
.... .... ....
.... .... .... ॥ ೧ ॥

---

೧. ಶ್ರೀ ಪ್ರತಿಯಲ್ಲಿಯಷ್ಟೆ ಇದೆ.
೨ ಶ್ರೀ ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.
ವಿ. ಸೂ.— ೧-೨ನೆಯ ನುಡಿಗಳ ಉತ್ತರಾರ್ಧ ಸಿಕ್ಕಿಲ್ಲ.

ಸಂಸ್ಕಾರದ ಸುಖಪ್ರಾಶನ ಮಾಡದೆ ।
ಕಂಸಾರಿಯ ಪದಪಾಂಸುಗಳ ಭಜಿಸು ॥
... .... ....
.... .... .... ॥ ೨ ॥
ನೀರಬೊಬ್ಬುಳಿಯಂತೆ ನಿತ್ಯವಲ್ಲದ ದೇಹ ।
ಘೋರಸಂಸಾರದಿ ತೊಳಲದಿರು ॥
ಶ್ರೀರಮಣ ಪುರಂದರವಿಠಲಪರನೆಂದು ।
ಸಾರಿದೆಯಲ್ಲವೆ ಸುಮ್ಮನಿರಬೇಡ ॥ ೩ ॥

## ೧೦೩

### ಸುಳಾದಿ

### ಧ್ರುವತಾಳ

೧ ಗೋಪಿದೇವಿಯಂತೆ ನಿನ್ನ ಒರಳಿಗೆ ಕಟ್ಟದೆ
ಬರಿದೆ ದೈನ್ಯವ ಪಡುವೆ ನಾನಯ್ಯ ।
ಭೃಗುಮುನಿಯಂತೆ ನಿನ್ನ ಎದೆಯಮೇಲೊದೆಯದೆ
ಬರಿದೆ ದೈನ್ಯವ ಪಡುವೆ ನಾನಯ್ಯ ।
ಭೀಷ್ಮನಂತೆ ನಿನ್ನ ಹಣೆಯನೊಡೆಯುದೆ
ಬರಿದೆ ದೈನ್ಯವ ಪಡುವೆ ನಾನಯ್ಯ ।
ಕೊಂಕಣಡೆಮ್ಮಗೆ ಕೊಡತಿಯೆ ಮದ್ದು....
ಇವರೇ ನಿನಗೆ ಮದ್ದು ಪುರಂದರವಿಠಲ ॥ ೧ ॥

### ಮಟ್ಟತಾಳ

ಕಾಳಿಂಗನಂತೆ ನಿನ್ನ ಕಟ್ಟಿ ಬಿಗಿಯಲು ಬೇಕು ।
ಬಲಿಯಂತೆ ಬಾಗಿಲನು ಕಾಯಿಸಬೇಕು ।
ಕುಬುಜೆಯಂತೆ ನಿನ್ನ ರಟ್ಟುಭೂತವನೆ ಮಾಡಿ ।
ಮುಂಜೆರಗ ಪಿಡಿದು ಗುಂಜೆ ಹಾಕಲುಬೇಕು ।
ಪುರಂದರವಿಠಲ ನಿನಗೆ ಅಂಜದಿರಬೇಕು ॥ ೨ ॥

೧ ಅ (II), ಇ (ಮುದ್ರಿತ) ಎಂಬ ಪ್ರತಿಗಳಿಂದ ಆರಿಸಿಕೊಂಡಿದೆ.

ತ್ರಿವುಡೆ ತಾಳ

ಪಾಂಡುತನಯನಂತೆ ಕರೆಕರೆದು ನಿನ್ನ ।
ಅಟ್ಟುಮಣೆ ಅಡಿಮಣೆ ಇಕ್ಕಬೇಕು ।
ಅರ್ಜುನನಂತೆ ಬಂಡಿಯ ಬೋವನ ಮಾಡಿ ।
ಕುದುರೆಗಳ ವಾಘಿಸಬೇಕು ।
ಅಂಬು ತಾ ಬಿಲ್ಲು ತಾ ಎನ್ನಲುಬೇಕು ।
ನಾ ನಿನ್ನ ಅನುದಿನ ಪೂಜಿಸಿ ಪೂಜಿಸಿ ।
ಮೋಸಹೋದೆನಯ್ಯಾ ಪುರಂದರವಿಠಲ ॥ ೩ ॥

ಅಟತಾಳ

ವಾಲಿಯಂತೆ ನಿನ್ನ ಮೂದಲಿಸಬೇಕು ।
ಸುಗ್ರೀವನಂತೆ ನಿನ್ನ ಲೆಕ್ಕಿಸದಿರಬೇಕು ।
ಅಟ್ಟು ಇಟ್ಟು ಸುಟ್ಟು ಕೊಟ್ಟು ಮುಟ್ಟಿ ।
ಮೋಸಹೋದೆನಯ್ಯ ಪುರಂದರವಿಠಲ ॥ ೪ ॥

ಆದಿತಾಳ

ಇಂದ್ರನಂತೆ ನಿನ್ನ ಮಳೆಗರೆದು ಗೋಕುಲದಲ್ಲಿ ।
ನಿಂದಿರಿಸಬೇಕು ಏಳುದಿನ ।
ಗೋವರ್ಧನಗಿರಿಯನೆ ಹೊರಿಸಲು ಬೇಕು ।
ನಾ ನಿನ್ನ ಅನುದಿನ ಪೂಜಿಸಿ ಪೂಜಿಸಿದರೂ ।
ನೀಯೆನ್ನ ತಿರಿತಿಂಬುವಂತೆ ಮಾಡಿದೆ ।
ಪುರಂದರವಿಠಲ, ಹುಟ್ಟಿದ ಊರಲ್ಲಿಯೆ ।
ತಿರಿತಿಂಬುವಂತೆ ಮಾಡಿದೆ ॥ ೫ ॥

ಜತೆ

ಅಂಜುವರಿಗೆ ದೇವ ಬ್ರಹ್ಮರಾಕ್ಷಸನಂತೆ ।
ಅಂಜೆನು ನಿನಗಿನ್ನು ಪುರಂದರವಿಠಲ ॥

## ೧೮೪

### ಸುಳಾದಿ

### ಧ್ರುವತಾಳ

೧ ಅಚ್ಯುತ ಸುಳಿದ ಎನ್ನ ಕಣ್ಣಮುಂದೆ ಅವ್ವ ।
ಅನಂತ ಸುಳಿದ ಎನ್ನ ಕಣ್ಣಮುಂದೆ ಅವ್ವ ।
ಕಸ್ತೂರಿಮೃಗದಂತೆ ಘಮಘಮಿಸುತ ।
ನಗುತ ನೋಡುತ ನುಡಿಯುತ ನುಡಿಸುತ ।
ಏನೆಂಬೆನವ್ವ ಸೆರೆಗೊಂಡ ಸೂರೆಗೊಂಡ ।
ಉಮ್ಮತ್ತೂರ ಚೆನ್ನಯ ಪುರಂದರವಿಠಲ ॥ ೧ ॥

### ಮಟ್ಟತಾಳ

ಮಧುರಾಪಟ್ಟಣದ ರಾಜಬೀದಿಯಲಿ ।
ದಾಮ-ಸುದಾಮರೆಲ್ಲ ಕೈಹೊಡೆದು ನಗಲು ।
ಕುಬುಜೆಯ ಕೂಡ ತನ್ನ ಕಾಕುಪೋಕಿನ ಮಾತು ।
ಸನ್ನೆ-ಸನ್ನೆಯ ನೋಟ ನೂಕುತಾಕಿನಾಟ ।
ಉಮ್ಮತ್ತೂರ ಚೆನ್ನಯ ಪುರಂದರವಿಠಲ ॥ ೨ ॥

### ತ್ರಿವಿಡೆ ತಾಳ

ಸುಳಿದರೆ ಸುಂಕವ ಕೊಂಬ ಪುಂಡಗಾರ ।
ಹರಿಯಲ್ಲದಾರು ಹೇಳಿಲೆ ಅವ್ವ ।
ಯಶೋದೆ ರಂಗನಲ್ಲದೆ ಗೋಪಮ್ಮ ।
ಕೃಷ್ಣನಲ್ಲದೆ ಆದಾರು ಹೇಳೆ ।
ಉಮ್ಮತ್ತೂರ ಚೆನ್ನಯ ಪುರಂದರವಿಠಲ ॥ ೩ ॥

### ಅಟತಾಳ

ಕೊಂಬುಕೊಳಲು ತುತ್ತೂರಿ [illegible]ಗಳು ।
ಭುಂ ಭುಂ ಭುಂ ಭುಂ ಭೋರಿಡುತ ।

೧ ಅ (III) ೩ [illegible]

ಸರಿಗಮಪಧನಿಸ ಸನಿಧಪಮಗರಿಸ ।
ತುತ್ತುತ್ತುರುರುರು ಎನುತ ಮಧುರೆಯೊಳು ।
ಕೊಳಲನು ಪಿಡಿಯುತ ಝುಣಝುಣ ಸಣಸಣ ।
ಗೆಜ್ಜೆಯ ಕುಣಿಸುತ ಉಮ್ಮತ್ತೂರ ಚೆನ್ನಯ ।
ಪುರಂದರವಿಠಲ ॥ ೪ ॥

ಆದಿತಾಳ

೧ ಆರ ಮಡಿಯನುಟ್ಟೆ, ಆರ ಗಂಧವನಿಟ್ಟೆ ? ।
ಆರ ಪೂಗಳ ಮುಡಿದೆ, ಆರ ರಾಜ್ಯವ- ।
ನಾರಿಗಿತ್ತು ಮೆರೆದೆ ದೇವ ? ।
ಬಲ್ಲಿದರಿಗೆ ಬಟ್ಟೆ ಸಸಾರವೆಂಬಂತೆ ।
ಉಮ್ಮತ್ತೂರ ಚೆನ್ನಯ ಪುರಂದರವಿಠಲ ॥ ೫ ॥

ಜತೆ

ಅಸುರರ ಸಂಹರಿಸಿ ಸುರರ ಪಾಲಿಪ ನಮ್ಮ ।
ಉಮ್ಮತ್ತೂರ ಚೆನ್ನಯ ಪುರಂದರವಿಠಲ ॥

## ೧೦೫

ರಾಗ—ರೇಗುಪ್ತಿ ತಾಳ—ಅಟ

೨ ಆತನ ಪಾಡುವೆನನವರತ ।
ಪ್ರೀತಿಯಿಂದಲಿ ತನ್ನ ಭಕುತರ ಸಲಹುವ ॥ ಪ ॥

ಆವಾತನ ಕೀರ್ತಿಯನು ಪರೀಕ್ಷಿತ ಕೇಳಿ ।
ಪಾವನನಾದನು ಮೂಜಗವರಿಯೆ ॥

೧ ಇದು ಅ (II) ಪ್ರತಿಯಲ್ಲಿಲ್ಲ.
೨ ಇ ಎ ಓ ಪ್ರತಿಗಳಿಂದ ಆರಿಸಿದೆ.

ಭಾವಶುದ್ಧಿಯಲಿ ಶುಕನಾರನು ಪೊಗಳುವ ।
ಆವಗಂ ಪ್ರಹ್ಲಾದನಾವನ ನೆನೆವನಯ್ಯ ॥ ೧ ॥

ಶಿಲೆಯ ಬಾಲೆಯ ಮಾಡಿದ ಪಾದವಾರದು ।
ನಳಿನ ಸಂಭವನನು ಪೆತ್ತವನಾರು ॥
ಕಲಿಯುಗದ ಮನುಜರಿಗೆ ಆರನಾಮವು ಗತಿ ।
ಇಳೆಯ ಭಾರವನಿಳುಹಿ ಸಲಹಿದರಾರಯ್ಯ ॥ ೨ ॥

ದ್ರುಪದನ ಸುತೆಯ ಮಾನರಕ್ಷಕನಾರು ।
ನೃಪಧರ್ಮಜನಿಗೆ ಸಂರಕ್ಷಕನಾರು ॥
ಕೃಪೆಯಿಂದ ವಿದುರನ ಮನೆಯಲುಂಡವನಾರು ।
ಆಪತ್ಕಾಲದಿ ಗಜವ ಸಲಹಿದರಾರಯ್ಯ ॥ ೩ ॥

ಅತಿಶಯದಿಂದ ಅರ್ಜುನಗೆ ಸಾರಥಿಯಾಗಿ ।
ರಥವ ಪಿಡಿದು ನಡೆಸಿದವನಾರೊ ॥
ಪೃಥಿವಿಯೆಲ್ಲವ ಬಲಿ ಆರಿಗೊಪ್ಪಿಸಿದನು ।
ಮತಿವಂತ ಧ್ರುವನ ರಕ್ಷಕನಾರು ಪೇಳಯ್ಯ ॥ ೪ ॥

ಸಾಗರನ ಮಗಳಿಗೆ ಆರ ನಾಮವೆ ಗತಿ ।
ಯೋಗದಿ ನಾರದನಾರ ಭಜಿಸನಯ್ಯ ॥
ರಾಗರಚಿತ ಹನುಮಂತನೊಡೆಯನಾರು ।
ಭಾಗವತರ ಪ್ರಿಯ ಪುರಂದರವಿಠಲ ॥ ೫ ॥

## ೧೦೬

ರಾಗ—ಸಾರಂಗ ತಾಳ—ಆದಿ

೧ ದೇವಕಿ ನಂದಮುಕುಂದ ‖ ಪ ‖

ನಿಗಮೋದ್ಧಾರ—ನವನೀತಚೋರ ।
ಖಗಪತಿ ವಾಹನ ಜಗದೋದ್ಧಾರ ‖ ೧ ‖

ಶಂಖ-ಚಕ್ರಧರ—ಶ್ರೀಗೋವಿಂದ ।
ಪಂಕಜಲೋಚನ ಪರಮಾನಂದ ‖ ೨ ‖

ಮಕರಕುಂಡಲಧರ—ಮೋಹನವೇಷ ।
ರುಕುಮಿಣಿವಲ್ಲಭ ಪಾಂಡವಪೋಷ ‖ ೩ ‖

ಕಂಸಮರ್ದನ—ಕೌಸ್ತುಭಾಭರಣ ।
ಹಂಸವಾಹನ ಪೂಜಿತಚರಣ ‖ ೪ ‖

ವರವೇಲಾಪುರ ಚೆನ್ನಪ್ರಸನ್ನ ।
ಪುರಂದರವಿಠಲ ಸಕಲಗುಣ ಪೂರ್ಣ ‖ ೫ ‖

---

೧ ಗ (A) ಎ ಪ್ರತಿಗಳಿಂದ ಆರಿಸಿಕೊಂಡಿದೆ.

# ೧೨ ದಶಾವತಾರಮಾಹಾತ್ಮ್ಯೆ

## ೧೦೭

**ರಾಗ—ಮುಖಾರಿ** **ತಾಳ—ಝಂಪೆ**

೧ ಹೇಗೆ ಮಾಡಲಿ ಮಗುವಿಗೇನಾಯಿತೊ—ಇದರ- ।
ಆಗಮವ ಬಲ್ಲವರು ತಿಳಿದೆಲ್ಲ ಪೇಳಿ ॥ ಪ ॥

ತೂಗಿ ಮಲಗಿಸೆ ಕಣ್ಣಮುಚ್ಚಲೊಲ್ಲನು, ಬೆನ್ನ- ।
ಮೇಗೆ ಬುಗುಟೆಯು, ಎದೆಯು ಕಲ್ಲಾಗಿದೆ ॥
ರೋಗವನೆ ಕಾಣೆ ದಾಡೆಯಲಿ ನೀರಿಳಿಯುತಿದೆ ।
ಕೂಗುವ ಧ್ವನಿಯೊಮ್ಮೆ ಕುಂದಲಿಲ್ಲ ॥ ೧ ॥

ಖಂಡಸಕ್ಕರೆ ಹಣ್ಣ ಕೊಟ್ಟರೊಲ್ಲದೆ ಮಣ್ಣ ।
ಹೆಂಡೆಯನು ಬೇಡಿ ತಾ ಪಿಡಿವ ಕೊಡಲಿ ॥
ಮುಂಡೆ ಜಡೆಗಟ್ಟಿಹುದು ಮಾಡಲಿನ್ನೇನಿದಕೆ ।
ಹಿಂಡು ಸತಿಯರ ದೃಷ್ಟಿ ಘನವಾಯಿತೇನೊ ॥ ೨ ॥

ಮೊಲೆಯನುಂಬಾಗ ಪ್ಯೆಯಂಬರವನೊಡೆಯುತಿದೆ ।
ಕಲಿಕಿತನದಲಿ ಎನ್ನ ಕೊಲುವುದೇಕೋ ॥
ತಿಳಿದಿದರ ನೆಲೆಯನರಿತವರನೊಬ್ಬರ ಕಾಣೆ ।
ಚೆಲುವ ಸಿರಿ ಪುರಂದರವಿಠಲ ತಾ ಬಲ್ಲ ॥ ೩ ॥

---

೧ ಅ (೨) ಈ ಪ್ರತಿಗಳಿಂದ ಆರಿಸಿದೆ.

## ೧೦೮

ರಾಗ—ಪಂತುವರಾಳಿ ತಾಳ—ಅಟ

೧ ಅಂಬೆಗಾಲಿಕ್ಕುತಲಿ ಬಂದ ಗೋವಿಂದ ।
ಅಂಬುಜನಾಭ ದಯದಿಂದೆನ್ನಮನೆಗೆ ॥ ಪ ॥

೨ ಜಲಚರ ಜಲವಾಸ ಧರಣೀಧರ ಮೃಗರೂಪ ।
ನೆಲನಳೆದೀರಡಿ ಮಾಡಿ ಬಂದ ॥
ಕುಲನಾಶಿ ವನವಾಸಿ ನವನೀತಚೋರಸಿವ ।
ಲಲನೆಯರ ವ್ರತಭಂಗ ವಾಹನತುರಂಗ ॥ ೧ ॥

ಕಣ್ಣ ಬಿಡುವನು ಮುಖ ತಗ್ಗಿಸಿ ನೆಲನಗಿದು ।
ಅಣಕಿಸುವ ಬಾಯ್ದೆರೆದು ಬಾಲತನದಿ ॥
ಪ್ರಾಣಘಾತಕನುಣಲೊಲ್ಲ ಬೆಣ್ಣೆಯ ಮೆಲುವ ।
ಮಾನವ ಬಿಟ್ಟು ಕುದುರೆಯನೇರಿ ಮೆರೆವ ॥ ೨ ॥

ನೀರ ಪೊಕ್ಕನು ಗಿರಿಯ ನೆಗಹಿ ಧಾರಿಣಿ ತಂದ ।
ನರಮೃಗ ಬಲಿಬಂಧ ಕೊರಳಗೊಯ್ಕ ॥
ಶರಮುರಿದೊರಳೆಳೆದು ಬತ್ತಲೆ ಹಯವನೇರಿ ।
ಪುರಂದರವಿಠಲ ನಮ್ಮ ಮನೆಗೆ ಹರುಷದಲಿ ॥ ೩ ॥

## ೧೦೯

ರಾಗ—ಮೋಹನ ತಾಳ—ಆದಿ

೩ ನೋಡು ನೋಡು ನೋಡು ಕೃಷ್ಣ ।
ಹೇಗೆ ಮಾಡುತಾನೆ ।

---

೧ ಆ (೨) ಏ (೨) ಗ (A) ಶ್ರೀ ಪ್ರತಿಗಳಿಂದ ಆರಿಸಿಕೊಂಡಿದೆ.
೨ ಜಲಚರಾಚಲವಾಸ (ಆ ೨ ಶ್ರೀ).
೩ ಇ ಪ್ರತಿಯೊಂದರಲ್ಲಿಯೇ ಸಿಕ್ಕಿದೆ.

ಬೇಡಿಕೊಂಡರೆ ಬಾರ ಕೃಷ್ಣ ।
ಓಡಿಹೋಗುತಾನೆ ॥ ಪ ॥

ಕಂಡಕಂಡವರ ಮೇಲೆ ಕಣ್ಣು ಹಾಕುತಾನೆ ।
ಉಂಡು ಉಂಡು ಮುಸುಕನಿಟ್ಟು ಮಲಗಿಕೊಳ್ಳುತಾನೆ ॥
ಲಂಡತನವ ಮಾಡಿಮಾಡಿ ಮಣ್ಣು ಗೋರುತಾನೆ ।
ಭಂಡುಮಾಡಿ ಬಾಗಿಲೊಳಗೆ ಚೀರಿಕೊಳ್ಳುತಾನೆ ॥ ೧ ॥

ಕರುಣವಿಲ್ಲದಲೆ ಬಂದು ಕಾಲಲೊದೆಯುತಾನೆ ।
ಶರಣುಹೊಕ್ಕರೆಯು ತಾನು ಕೊಡಲಿ ಮಸೆಯುತಾನೆ ॥
ಹರಿಯುವ ವಾನರರ ಕೂಡ ಹಾರಾಡುತಾನೆ ।
ಸಿರಿಕೃಷ್ಣ ಹಾಲು-ತುಪ್ಪ ಸೂರೆಮಾಡುತಾನೆ ॥ ೨ ॥

ಬಾಲೆಯರಿಗೆ ವರವನಿತ್ತು ಪುರವ ಕೆಡಿಸುತಾನೆ ।
ನೀಲಗುದುರೆಯನೇರಿ ಹಾರಿಸಾಡುತಾನೆ ॥
ಬಾಲಕರ ಕೂಡಿಕೊಂಡು ಕುಣಿದಾಡುತಾನೆ ।
ಲೋಲಪುರಂದರವಿಠಲ ತಾನು ಕುಣಿಯುತಾನೆ ॥ ೩ ॥

## ೧೧೦

ರಾಗ—ಭೈರವಿ ತಾಳ—ಆದಿ

೧ ಕುಣಿತೆಯ ಕೃಷ್ಣ ಕುಳ್ಳಿರ ಕಲಿತೆಯ ।
ಕುಣಿತೆಯ ಎನ್ನೊಡೆಯ ॥ ಪ ॥
ಇಳೆಯೊಳು ಭಕುತರ ಹೃದಯಕಮಲದೊಳು ।
ಕುಣಿತೆಯ ಎನ್ನೊಡೆಯ ॥ ಅ. ಪ ॥

ಜಲಚರರೂಪದಿ ನಿಗಮಗಳೆಣಿಸುತ ಕುಣಿತೆಯ ಎನ್ನೊಡೆಯ ।
ಕುಲಗಿರಿಗಳನೆಲ್ಲ ನೆಗಪಿ ಕೂರ್ಮನಾಗಿ ಕುಣಿತೆಯ ಎನ್ನೊಡೆಯ ॥

೧ ಛ ಪ್ರತಿಯೊಂದರಲ್ಲಿಯೇ ಸಿಕ್ಕಿದೆ.

ಛಲದಿ ವರಾಹನಾಗಿ ಭೂಮಿದೇವಿಯ ತಂದು ಕುಳಿತೆಯ ಎನ್ನೊಡೆಯ ।
ಖಳಹಿರಣ್ಯಾಖ್ಯನ ಕರುಳಬಗಿವೆನೆಂದು ಕುಳಿತೆಯ ಎನ್ನೊಡೆಯ ॥ ೧ ॥

ತೊಡೆ ವಟುವೇಷವ ಸುರರ ರಕ್ಷಿಪೆನೆಂದು ಕುಳಿತೆಯ ಎನ್ನೊಡೆಯ ।
ಪೊಡವಿಯ ಕ್ಷತ್ರಿಯ ವಂಶ ಸವರುವೆನೆಂದು ಕುಳಿತೆಯ ಎನ್ನೊಡೆಯ ॥
ಮಡದಿಯ ಒಯ್ದನ ಕೆಡಹಿ ಲಂಕೆಯಲಿ ಕುಳಿತೆಯ ಎನ್ನೊಡೆಯ ।
ಕಡುಮೂರ್ಖ ಕೌರವನನ್ನು ಕೊಲುವೆನೆಂದು ಕುಳಿತೆಯ ಎನ್ನೊಡೆಯ ॥ ೨ ॥

ತ್ರಿಪುರರ ಸತಿಯರ ವ್ರತವ ಕೆಡಿಪೆನೆಂದು ಕುಳಿತೆಯ ಎನ್ನೊಡೆಯ ।
ಉಪನಿಷದ್ವಾಹನ ತೇಜಿಯ ಬೆನ್ನಲಿ ಕುಳಿತೆಯ ಎನ್ನೊಡೆಯ ॥
ಕೃಪೆಯಿಂದಲಿ ಮನದೊಳು ನೆನೆವವರಲಿ ಕುಳಿತೆಯ ಎನ್ನೊಡೆಯ ।
ಕಪಟನಾಟಕ ಸಿರಿ ಪುರಂದರವಿಟ್ಠಲ ಕುಳಿತೆಯ ಎನ್ನೊಡೆಯ ॥ ೩ ॥

## ೧೧೧

ರಾಗ—ಕೇದಾರಗೌಳ ತಾಳ—ಝಂಪೆ

೧ ಹೇಗೆ ಕೊಟ್ಟನು ಮಗಳ ಸಾಗರನು ಈ ವರಗೆ ।
ಶೃಂಗಾರಪುರುಷರು ಬಹುಮಂದಿ ಇರಲು ॥ ಪ ॥

ಗುಪ್ಪನಾರುವುದು ಮೈ ಕಣ್ಣ ಬಿಡುವನು ಸತತ ।
ಮುಟ್ಟ ನೋಡಿದರೆ ಬೆನ್ನತಿ ಕಠಿಣವು ॥
ಎಷ್ಟುದ್ದ ಹಲ್ಲುಗಳು ಸೊಟ್ಟುಮೊಗದವನಿವನು ।
ಇಷ್ಟು ಘೋರದ ಅಳಿಯನೆಲ್ಲಿ ದೊರಕಿದನೊ ॥ ೧ ॥

ಬೇಡುವನು ಭಿಕ್ಷವನು ಮಾಡದುದ ಮಾಡುವನು ।
ನೋಡಿದರೆ ತಲೆಯು ಜಡೆಗಟ್ಟಿಯಿಹನು ॥

೧ ಇ ಪ್ರತಿಯೊಂದರಲ್ಲಿಯೆ ಸಿಕ್ಕುತ್ತದೆ.

ಊಡಿಸುವ ಪಶುಗಳನು ಈಡಾಡುವನು ವಸನ ।
ನೋಡಿನೋಡಿಯು ಕೊಟ್ಟನಲ್ಲೆ ಸುಂದರಿಯ ॥ ೨ ॥

ಹಿಂಡು ಖಳರೊಳು ಕಲಹಕೊಂಡು ಬಹ ನಮ್ಮಯ ಪ್ರ- ।
ಚಂಡನೀತನ ಗುಣಕೆ ಎಣಿಕೆಯಿಲ್ಲ ॥
ಕಂಡವಾತಿಗೆ ಇನ್ನು ಅಂಡಲಿದರೇನಹುದು ।
ಪುಂಡರೀಕಾಕ್ಷ ಶ್ರೀಪುರಂದರವಿಠಲಗೆ ॥ ೩ ॥

## ೧೧೨

ರಾಗ—ರೇಗುಪ್ತಿ ತಾಳ—ಅಟ

೧ ಮನಸಿಟ್ಟು ಭ್ರಮಿಸುವರೇನೆ—ಘನ- ।
ಗುಣವಂತನೇನವ ಜಾಣೆ ? ॥ ಪ ॥

ಅನುದಿನ ಗೊಲ್ಲಪಳ್ಳಿಗೆ ಕಳ್ಳನೆನಿಸಿದ ।
ದನಗಾಹಿ ನಿನಗೇನ ಮರುಳುಮಾಡಿದನೆ ? ॥ ಅ. ಪ ॥

ಜಲವಾಸಿ ಮುಖವ್ಪೊಳಸೆಳೆವ—ಇವ ।
ನೆಲವಕೆದರಿ ಕಂಬದಿ ಬಾಯ್ ತೆಗೆವ ॥
ಇಳೆಯುನಳೆದ ಕೊರಳಗೊಯ್ಕ ವನವಾಸಿಯ ।
ಕೊಳಲಪಿಡಿದ ಕುರುಬಲವನಳಿದಾತಗೆ ॥ ೧ ॥

ಅಂದು ಮಥುರೆಯಲಿ ಪುಟ್ಟಿದನ—ಆ ।
ನಂದಗೋಪ-ಯಶೋದೆ ಕೋಮಲನ ॥
ಕಂದನಾಗಿ ಮೊಲೆಯುಂಡು ಪೂತನಿಯನು ।
ಕೊಂದು ಕಂಸನ ಪುರ ತಂದೆಗಿತ್ತವಗೆ ॥ ೨ ॥

---

೧ ಘ ಪ್ರತಿಯಲ್ಲಿಯಷ್ಟೇ ಸಿಕ್ಕುತ್ತಿದೆ.

ಬತ್ತಲಿರುವ ಶ್ರೀನಿರ್ವಾಣಿ—ತೇಜಿ- ।
ಹತ್ತಿ ಪಿಡಿದ ಖಡ್ಗಪಾಣಿ ॥
ಮತ್ತರನೆಲ್ಲರ ಮರ್ದಿಸಿ ಬಲವಂತ ।
ಪಾರ್ಥಗೊಲಿದ ಶ್ರೀಪುರಂದರವಿಠಲಗೆ ॥ ೩ ॥

## ೧೧೩

ರಾಗ—ಶ್ರೀರಾಗ ತಾಳ—ಅಟ

೧ ಧರಣಿಗೆ ದೊರೆಯೆಂದು ನಂಬಿದೆ—ಇಂಥ- ।
ಪರಮಲೋಭಿಯೆಂದು ಅರಿಯೆ ಶ್ರೀಹರಿಯೆ ॥ ಪ ॥

ಕಾಡಿಬೇಡುವರಿಗೆ ಕೊಡಲಾರದೆ ಅಂಜಿ ।
ಓಡಿ ನೀರೊಳು ಸೇರಿಕೊಂಡೆ ಬೇಗ ॥
ಹೇಡಿಯ ತೆರದಲಿ ಮೋರೆಯು ತೋರದೆ ।
ಓಡಿ ಅರಣ್ಯದಿ ಮೃಗಗಳ ಸೇರಿದೆ ॥ ೧ ॥

ಬಡವರ ಬಿನ್ನಪ ಲಾಲಿಸದಲೆ ಹಲ್ಲ ।
ಕಡುಕೋಪದಲಿ ತೆರೆದಂಜಿಸಿದೆ ॥
ತಡೆಯದೆ ಭಿಕ್ಷುಕನಾದರು ಬಿಡರೆಂದು ।
ಕೊಡಲಿಯ ಪಿಡಿದು ಕೋಡಗ ಹಿಂಡ ಕಾಯ್ದೆಯೊ ॥ ೨ ॥

ಉತ್ತಮನೆಂದರೆ ಮತ್ತೆ ಚೋರನಾದೆ ।
ಬತ್ತಲೆ ನಿಂತು ತೇಜಿಯನೇರಿದೆ ॥
ಎತ್ತಪೋದರು ಬಿಡೆ ಬಿಡೆ ನಿನ್ನ ಪಾದವ ।
ಚಿತ್ತಜಜನಕ ಶ್ರೀಪುರಂದರವಿಠಲನೆ ॥ ೩ ॥

೧ ಇ ಪ್ರತಿಯಿಂದ ಆರಿಸಿದೆ.

## ೧೧೪

ರಾಗ—ಪುನ್ನಾಗವರಾಳಿ ತಾಳ—ಅಟ

೧ ಏನ ಬೇಡಲಿ ನಿನ್ನ ಹರಿಯೆ ॥ ಪ ॥

ಏನ ಬೇಡಲಿ ನಿನ್ನ ಚಂಚಲ ಕಠಿಣನ ।
ಮೌನದಿಂದ ಮೋರೆ ಓರೆಮಾಡುವನ ॥ ಅ. ಪ ॥

ಕರುಳಹರಕನ—ಏನ ಬೇಡಲಿ ।
ತಿರಿದು ತಿಂಬವನ ॥
ಕೊರಳಗೊಯ್ಕ ಅರಣ್ಯ ತಿರುಗುವನ ಮೊ- ।
ಸರು ಬೆಣ್ಣೆ ಕದ್ದು ತಿಂಬವನ ॥ ೧ ॥

ವಾಸಶೂನ್ಯನ—ಬೇಡಲೇನು ಕತ್ತಿ- ।
ಬೀಸಿ ಸವರುವನ ॥
ಕಾಸುವೀಸವನೆಲ್ಲ ಮೀಸಲು ಮಾಡಿಟ್ಟು ।
ಕೇಸಕ್ಕಿ ಉಂಡುಂಡು ವಾಸಿಸುವವನ ॥ ೨ ॥

ಬೇಡಿದರೆ ಕೊಡನ—ಮೋರೆ ನೋಡಿ ।
ಭಿಡೆಯ ಹಿಡಿಯದವನ ॥
ಬಡವರ ಕರೆತಂದು ಅಡಿಗೆ ಸೇರಿಸಿಕೊಂಡ ।
ಒಡೆಯ ಪುರಂದರವಿಟ್ಠಲದೊರೆಯ ॥ ೩ ॥

---

೧ ಗ (B) ಪ್ರತಿಯಲ್ಲಿ ಶುದ್ಧವಾಗಿದೆ. ಓ ಪ್ರತಿಯಲ್ಲಿ ಏಳು ನುಡಿಗಳಿದ್ದು ಎಲ್ಲವೂ ವಿಕಾರಗೊಂಡಿವೆ.

## ೧೧೫

ರಾಗ—ಮೋಹನಕಲ್ಯಾಣಿ ತಾಳ—ಆದಿ

೧ ಮಂದರಧರ ದೇವ ಮೊರೆಹೊಕ್ಕವರ ಕಾಯ್ವ ॥ ಪ ॥
ಮಂದಾಕಿನಿಯ ಪಿತ ಮಾವ ಕಂಸನ ಹೃತ ।
ಸುಂದರ ಶಶಿವದನ—ರಂಗಯ್ಯ ॥ ಅ. ಪ ॥

ಕಣ್ಣುನೋಟದಿ ಚೆಲುವ, ಕಮಠರೂಪದಿ ನಲಿವ ।
ಹೆಣ್ಣುಮೊರೆಯ ಕೇಳಿ ಹಿರಣ್ಯನುದರ ಸೀಳಿ ॥
ಮಣ್ಣು ಬೇಡಿ ಬೆಳೆದೆ—ಕೃಷ್ಣಯ್ಯ ॥
ಹೊನ್ನ ಕೊಡಲಿಯ ಪಿಡಿದು ಹತ್ತು ಗ್ರೀವನ ಕಡಿದು ।
ಚಿಣ್ಣರ ಒಡಗೂಡಿ ಚಪಲೆಯರ ವ್ರತಗೆಡಿಸಿ ।
ಚೆನ್ನರಾವುತನಾದೆಯೊ—ರಂಗಯ್ಯ ॥ ೧ ॥

ಗೋಚರನಂದದಲಿ—ಗಿರಿಯ ತಾಳಿದೆ ಬೆನ್ನಿನಲಿ ।
ಭೂಚೋರನ ಕೊಂದು ಬಾಲ ಕರೆಯಲು ಬಂದು ।
ಯಾಚಕ ನೀನಾದೆ—ರಂಗಯ್ಯ ॥
ಸೂಚಕನ ಸುತಗೊಲಿದು ಶರಧಿಯ ಕಟ್ಟಿ ಮೆರೆದೆ ।
ಕೀಚಕಹತಪೋಷ ಖೇಚರಪುರವಾಸ ।
ನೀಚಜನರ ತರಿದೆ—ರಂಗಯ್ಯ ॥ ೨ ॥

ವನವನಲೆದುಬಂದ—ವನಿತೆರತ್ನವ ತಂದ ।
ಘನಕಂಭದಿಂದ ಬಂದು ಗರುವ ಮುರಿದು ಬಲಿಯ ।
ಜನನಿಯ ಶಿರವರಿದೆ—ರಂಗಯ್ಯ ॥
ಹನುಮವಂದಿತಪಾದ ಹರುಷ ಪಾಂಡವವರದ ।
ಮನಸಿಜವೈರಿಗೊಲಿದು ಮಹಾಕಲಿಕಿಯಾದೆ ।
ಘನಪುರಂದರವಿಠಲ—ರಂಗಯ್ಯ ॥ ೩ ॥

---

೧ ಇ ಚ ಝು (೫–೧೦) ಹ. ಪ್ರತಿಗಳಿಂದ ಆರಿಸಿಕೊಂಡಿದೆ.

೧೧೬

ರಾಗ—ಮಧ್ಯಮಾವತಿ ತಾಳ—ಅಟ

೧ ನೆಲಸೆನ್ನ ಹೃದಯಮಂದಿರದಿ—ಶ್ರೀಹರಿಯೆ ನೀ- ।
ಸಲಿಸೆಮ್ಮ ಮನದಿಷ್ಟ ಅನುದಿನ ದಯದಿ ॥ ಪ ॥

ಸಿರಿ ವಿರಿಂಚಿ ಮರುತ್ಸುಪರ್ಣ ಪು- ।
ರಾರಿವಂದಿತ ಚರಣಸರಸಿಜ ॥
ಪರಮಭಕ್ತ ಪ್ರಹ್ಲಾದ ನಾರದ ।
ವರಪರಾಶರ ಮುಖಸುಸನ್ನುತ ॥ ಅ. ಪ ॥

ನಾರುವಿ ಭಾರವ ಪೊರುವಿ—ಬಲು- ।
ಬೇರುಗಳನೆ ಕಿತ್ತು ಮೇಲುವಿ—ಕರಿ- ।
ವೈರಿ ರೂಪಗೊಂಡ ಗರುವಿ—ಬ್ರಹ್ಮ- ।
ಚಾರಿ ಖಳರ ಕತ್ತರಿಸುವಿ ।
ವೀರದಶರಥಸುತ ಸುರಾರ್ಚಿತ ।
ಜಾರತನದಲಿ ವ್ರತವ ಕೆಡಿಸುತ ।
ತೋರಿ ಮೆರೆವನೆ ತರಳ ಬಲು ಗಂ- ।
ಭೀರ ಕುದುರೆಯನೇರಿ ಮೆರೆವನೆ ॥ ೧ ॥

ಅನಿಮಿಷ ಮಂದರೋದ್ಧರಣ—ನೀನಾ- ।
ವನಗಪಂಚಾನನವದನ—ವಾ- ।
ಮನ ದಾನವರ ಕೊಯ್ವ ಕದನ—ಹೀನ- ।
ದನುಜರಾವಣ ಸಂಹರಣ ॥
ಧೇನುಕಾಸುರ ಶಕಟಮರ್ದನ ।
ಜ್ಞಾನದಾನವಿಡಂಬನಾನಕ ।
ಭಾನುಮಸ್ತಕ ನೀಲವರಕರ ।
ದೀನಜನಸಂತ್ರಾಣ ನಿಪುಣನೆ ॥ ೨ ॥

---

೧ ಇ ಪ್ರತಿಯಿಂದ ತೆಗೆದುಕೊಂಡಿದೆ.

ಮಚ್ಛಕಚ್ಛಪ ಸ್ವಚ್ಛಕಿರನೆ—ಬಲು- ।
ಅಚ್ಚ ಶಿಶುವೊರೆ ಕೇಳಿದವನೆ ॥
ಸ್ವೇಚ್ಛೆಯ ವಟು ಪರಶುಕರನೆ —ರಾಮು- ।
ವತ್ಸಾಸುರನ ವಧಿಸಿದವನೆ ॥
ತುಚ್ಛಜನರಿಗೆ ಕಪಟಕಾರಣ ।
ಹೆಚ್ಚಿನಶ್ವದ ಮೇಲೆ ಹೊಳೆವನೆ ।
ಮೆಚ್ಚಿ ಪುರಂದರವಿಟ್ಠಲನ ಪರ- ।
ಮಾಚ್ಯುತದ ಪದವೀವ ದೇವನೆ ॥ ೩ ॥

---

# ೧೨ ಸರ್ವೋತ್ತಮಮಾಹಾತ್ಮ್ಯ

## ೧೧೭

ರಾಗ—ನಾದನಾಮಕ್ರಿಯೆ    ತಾಳ—ಆದಿ

೧ ಹೊಡೆಯೊ ನಗಾರಿ ಮೇಲೆ ಕೈಯ ।
ಆನಂದಮದವೇರಿ ಗಡಗಡ ॥ ಪ ॥

ಮೃಡಸಖನ ಪಾದ ಬಿಡದೆ ಭಜಿಪರಘ ।
ಬಿಡಿಸಿ ಕಾಯ್ವ ಜಗದೊಡೆಯ ಶ್ರೀಹರಿಯೆಂದು ॥ ೧ ॥

ವೇದಗಮ್ಯ ಸಕಲಾರ್ತಿನಿವಾರಕ ।
ಮೋದವೀವ ಮಧುಸೂದನ ದೊರೆಯೆಂದು ॥ ೨ ॥

ಗಾನಲೋಲ ತನ್ನ ಧ್ಯಾನಿಸುವರನೆಲ್ಲ ।
ಮಾನದಿಂದ ಕಾಯ್ವ ಶ್ರೀನಿಧಿ ಪರನೆಂದು ॥ ೩ ॥

ನಿಷ್ಠೆಯಿಂದಲಿ ಮನಮುಟ್ಟಿ ಭಜಿಸುವರ ।
ಕಷ್ಟವ ಕಳೆವ ಶ್ರೀಕೃಷ್ಣನು ಪರನೆಂದು ॥ ೪ ॥

ಈ ಪೃಥಿವಿಯೊಳಗೆ ವ್ಯಾಪಕನಾಗಿಪ್ಪ ।
ಶ್ರೀಪತಿ ಪುರಂದರವಿಠಲನು ಧಣಿಯೆಂದು ॥ ೫ ॥

## ೯೯

ರಾಗ—ಸಾವೇರಿ    ತಾಳ—ಅಟ

೨ ಹರಿಯೆ ಸರ್ವೋತ್ತಮ ಹರಿಯೆ ಪರದೈವತ ।
ಹರಿಯೆ ಸರ್ವಂ ವಿಷ್ಣುಮಯಂ ಜಗತು ॥ ಪ ॥

---

೧ ಮ ಎ ಓ ಪ್ರತಿಗಳಿಂದ ಆರಿಸಿಕೊಂಡಿದೆ.

೨ ಅ (೨) ಅ (VI) ಪ್ರತಿಗಳಿಂದ ಆರಿಸಿದೆ.

ಹರಿಯಲ್ಲದನ್ಯತ್ರ ದೈವಗಳುಂಟೆಂದು ।
ಉರಗನ ಮುಡಿಯನಾರಾದರೆತ್ತಲಿ ॥ ಅ ಪ ॥

ಜಗಂಗಳ ಪುಟ್ಟಿಸುವ ಬೊಮ್ಮ ನಿನ್ನ ಮಗ ।
೨ ಜಗದ ಸಂಹಾರಕ ನಿನ್ನ ಮೊಮ್ಮಗನು ॥
ಜಗದ ಪಾವನೆ ಭಾಗೀರಥಿ ನಿನ್ನ ಮಗಳು ।
ಜಗದ ಜೀವನಮಾತೆ ನಿನ್ನರಸಿಯಲೆ ದೇವ ॥ ೧ ॥

ವಿಶ್ವತೋಮುಖ ನೀನೆ, ವಿಶ್ವತಶ್ಚಕ್ಷು ನೀನೆ ।
ವಿಶ್ವತೋಬಾಹು ವಿಶ್ವಉದರ ನೀನೆ ॥
ವಿಶ್ವವ್ಯಾಪಕ ವಿಶ್ವಸೂತ್ರಧಾರಕ ನೀನೆ ।
ವಿಶ್ವನಾಟಕ ವಿಶ್ವವಿಷ್ಣುವೇ ನಮೋ ನಮೋ ॥ ೨ ॥

ಆಗಮನಿಗಮ ಪೌರಾಣ ಶಾಸ್ತ್ರಂಗಳಿಗೆ ।
ಯೋಗಿಜನಕಗಮ್ಯ ಮೂರ್ತಿ ನೀನೆ ॥
ನಾಗಶಯನ ಸಿರಿ ಭೋಗಿಭೂಷಣವಿನುತ ।
ಭಾಗವತರ ಪ್ರಿಯ ಪುರಂದರವಿಠಲ ॥ ೩ ॥

---

೨ ಜಗವ ಮೋಹಿಸುತಿಪ್ಪ ಮಾಯೆ ನಿನ್ನ ದಾಸಿ (ಆ VI).

ವಿ. ಸೂ.— ಜಗಂಗಳ ಸೃಷ್ಟಿಸುವ ಬೊಮ್ಮ ನಿನ್ನ ಮಗ ।
ಜಗಂಗಳ ಪಾವನೆ ನಿನ್ನ ಪುತ್ರಿ ॥
ಜಗಂಗಳ ರಕ್ಷಿಸುವ ಲಕ್ಷ್ಮಿ ನಿನ್ನ ರಾಣಿ ।
ಜಗಂಗಳ ಮೋಹಿಸುವ ಮಾಯೆ ನಿನ್ನ ದಾಸಿ ॥ ೧ ॥
(Y ೧೦)

## ೧೧೮

ರಾಗ—ಶಂಕರಾಭರಣ ತಾಳ—ಝಂಪೆ

೧ ವಿಧಾತೃದೇವತೆಗಳೂ ವಿಷ್ಣುವಿನ ಹಿಂದೆ ।
ಇದಕೆ ತಪ್ಪಿದರೆ ಫಣಿಫಣವ ಪಿಡಿವೆ ॥ ಪ ॥

ಸಕಲ ತೀರ್ಥಗಳೆಲ್ಲ ಸಾಲಗ್ರಾಮದ ಹಿಂದೆ ।
ಪ್ರಕಟಗ್ರಂಥಗಳೆಲ್ಲೆ ಭಾರತದ ಹಿಂದೆ ॥
ಸಕಲ ವೃಕ್ಷಗಳೆಲ್ಲ ಶ್ರೀತುಳಸಿಯ ಹಿಂದೆ ।
ಸಕಲ ಪರ್ವತಗಳು ಮೇರುವಿನ ಹಿಂದೆ ॥ ೧ ॥

ಮತಗಳೆಲ್ಲವು ಮಧ್ವಮತದ ಸಾರದ ಹಿಂದೆ ।
ಇತರ ವರ್ಣಗಳೆಲ್ಲ ವಿಪ್ರರ ಹಿಂದೆ ॥
ವ್ರತಗಳೆಲ್ಲವು ಹರಿಯ ದಿನದ ವ್ರತದ ಹಿಂದೆ ।
ಅತಿಶಯದ ದಾನಗಳು ಅನ್ನದಾನದ ಹಿಂದೆ ॥ ೨ ॥

ಉತ್ತಮಗುಣಗಳೆಲ್ಲ ಉದಾರತ್ವದ ಹಿಂದೆ ।
ಮತ್ತೆ ಕರ್ಮಗಳು ಮಜ್ಜನದ ಹಿಂದೆ ॥
೩ ಪೃಥ್ವಿಯೊಳಗೆ ನಮ್ಮ ಪುರಂದರವಿಠಲನ ।
ಭಕ್ತವತ್ಸಲನೆಂಬ ನಾಮವೇ ಮುಂದೆ ॥ ೩ ॥

---

೧ ಅ (೧) ಎ ಓ ಶ್ರೀ ಪ್ರತಿಗಳಿಂದ ಆರಿಸಿದೆ.
(ಓ) ವಿದಿತ ದೈವಗಳೆಲ್ಲ—(ಇ) ವಿಧಿಭವಾದಿಗಳೆಲ್ಲ.

೨ (ಎ) ಭಾಗವತ.

೩ ಕಡೆಯ ಎರಡು ಚರಣಗಳು ಮುದ್ರಿತಪ್ರತಿಗಳಲ್ಲಿ ಹೀಗೆ ಬದಲಾಗಿವೆ.
(ಎ) ಇತ್ತ ದ್ರವ್ಯಗಳೆಲ್ಲ ವಿದ್ಯಾದ್ರವ್ಯದ ಹಿಂದೆ ।
ಚಿತ್ತಜನಯ್ಯ ಶ್ರೀಪುರಂದರವಿಠಲ ॥
(ಓ) ಸತ್ಯನೇಮಗಳು ಗಾಯತ್ರೀ ಜಪದ ಹಿಂದೆ ।

## ೧೧೯

ರಾಗ—ಪಂತುವರಾಳಿ ತಾಳ—ಅಟ

೧ ಅಂದೆ ನಿರ್ಣಯಿಸಿದರು ಕಾಣೋ ।
ಇಂದಿರಾಪತಿ ಪರದೈವತವೆಂಬುದ ॥ ಪ ॥

ಅಂದು ಚತುರ್ಮುಖ ನಾರದನಿಗೆ ತನ್ನ ।
ತಂದೆ ಶ್ರೀಹರಿ ಪರದೈವವೆಂದು ॥
ಸಂದೇಹಗಳ ಪರಿಹರಿಸಿಹ ದ್ವಿತಿಯದ ।
ಸ್ಕಂಧದೊಳಯ್ದನೆಯ ಅಧ್ಯಾಯದಲಿ ॥ ೧ ॥

ಅಂದು ಕಪಿಲದೇವ ದೇವಹೂತಿಗೆ ತಾನು ।
ಚೆಂದದ ತತ್ತ್ವವನೆಲ್ಲ ಬೋಧಿಸಿದ ॥
ಅಂದದಲರ್ಜುನ-ಉದ್ಧವರಿಗೆ ಅಂದಾ- ।
ನಂದದಿ ಗೀತಾಶಾಸ್ತ್ರವನೊರೆದನೆಂದು ॥ ೨ ॥

'ವೇದೈಶ್ಚ ಸರ್ವೈರಹಮೇವ ವೇದ್ಯಃ' ।
'ವೇದವಿಧಾಯಕ' ನಾಮುದವನು ॥
ವೇದಾಕ್ಷರಗಳು ಹರಿನಾಮಗಳೆಂದು ।
ವೇದಾಂತಸಿದ್ಧಾಂತಗಳಲಿ ಪೇಳಿದರೆಂದು ॥ ೩ ॥

ರಾಜಸ-ತಾಮಸ ಪೌರಾಣಗಳಿವು ।
ರಾಜಸ-ತಾಮಸ ಜೀವರಿಗೆ ॥
ರಾಜಸ-ತಾಮಸ ಗತಿಗೋಸ್ಕರ ಮುನಿ- ।
ರಾಜ ವ್ಯಾಸನು ಮೋಹಕವೆಂದು ಪೇಳಿದ ॥ ೪ ॥

ಬಿಡು ಪಾಷಂಡಮತದ ದುರ್ಬುದ್ಧಿಯ ।
ಬಿಡದೆ ಮಾಡು ವೈಷ್ಣವಸಂಗವ ॥
ದೃಢಭಕ್ತಿಯಿಂದ ಶ್ರೀಹರಿಯ ಪೂಜಿಸಿದರೆ ।
ಮೃಡಪ್ರಿಯ ಪುರಂದರವಿಠಲನೊಲಿವನೆಂದು ॥ ೫ ॥

---

೧ ಇ ಎ ಓ ಓಪ್ರತಿಗಳಿಂದ ಆರಿಸಿದೆ.

## ೧೨೦

### ಸುಳಾದಿ

#### ಧ್ರುವತಾಳ

೧ ಸ್ಥಿರದಿ ಅಜ-ಭವಾದಿಗಳು ನಾರಾಯಣನ ಗುಣಗಳನೆಲ್ಲ ।
ಅರಿಯಲಾರರು ಮಿಕ್ಕ ಸುರರಿನ್ನು ಬಲ್ಲರೇನು ।
ಸರಸಿಜಾಕ್ಷಿ ಇಂದಿರಾದೇವಿ ತನ್ನ ಪತಿಯ ಪಾದಕಮಲ ।
ಕಿರುಬೆರಳ ನಖತುದಿಯ ನೋಡಲಳವಲ್ಲದಂಥ ।
ನರಹರಿಗೆ ಶರಣು ಶರಣೆನ್ನಿ ॥ ೧ ॥

#### ಮಟ್ಟತಾಳ

ಬಿಡು ಕಾಮ ಕ್ರೋಧ ಮದ-ಮತ್ಸರಾದಿ ಷಡ್ವರ್ಗ ।
ನುಡಿನುಡಿಗೆ ವಾಸುದೇವ ಎಂಬ ಶಬ್ದವ ।
ನುಡಿಸಿ ಸುಡಿಸು ಸಂಚಿತ ಪಾಪಕರ್ಮಗಳನೆಲ್ಲ ।
ಕೆಡಲಿ ಬೇಡಿ ಈ ದೇಹ ಸ್ಥಿರವಲ್ಲ ।
ಒಡೆಯನಾದವಗೆ ನರಹರಿಗೆ ಶರಣು ಶರಣೆನ್ನಿ ॥ ೨ ॥

#### ತ್ರಿವುಡೆ ತಾಳ

ಅಗಣಿತ ಮಹಿಮನು ಸುಗುಣನು ನಗೆಮೊಗ ।
ಜಗದಾಧಾರನ ಹಗಲಿರುಳು ।
ಪೊಗಳಲು ಶಕಟನ ಅಳಿದವನ ।
ನಗಧರ ಖಗವಾಹನ ಕೈಪಿಡಿವ ।
ಅಗಣಿತಮಹಿಮ ನಮ್ಮ ನರಹರಿಗೆ ಶರಣು ಶರಣೆನ್ನಿ ॥ ೩ ॥

#### ಅಟತಾಳ

ವಕ್ಷಸ್ಥಲದಲಿ ಶ್ರೀವತ್ಸ ।
ಕುಕ್ಷಿಯಲಿ ಇಟ್ಟು ಮೂರು ಲೋಕವನು ।

೧ ಗ (B) ಪ್ರತಿಯೊಂದರಲ್ಲಿಯೆ ಇದೆ.
ಟಿ. ಸೂ — ಇದರ ರಚನೆ ಮಿಕ್ಕ ಸುಳಾದಿಗಳಿಗಿಂತ ಬೇರೆಯಾಗಿ ಕಾಣುತ್ತಿದೆ.

ರಕ್ಷಿಸುವನು ಭಕ್ಷಿಸಬಂದ ಸುರರ ಮಡುಹಿದ ।
ಪಕ್ಷಿವಾಹನ ಅಕ್ಷಯವೆಂದು ಪಾಂಚಾಲಿಯ ಪೊರೆದ ।
ನರಹರಿಗೆ ಶರಣು ಶರಣೆನ್ನಿ ॥ ೪ ॥

ಏಕತಾಳ

ಮಾನ ಅವಮಾನ ಜ್ಞಾನ ಅಜ್ಞಾನ ।
ಜಾನಕೀಪತಿಯ ಧ್ಯಾನ ।
ಸ್ನಾನ ಪೂಜಿತನಾಗಿ ।
ತಾನು ಕೊಡಿಸುವ ಮುಕ್ತಿ ।
ನಿತ್ಯಾನಂದದಲಿರುವ ನರಹರಿಗೆ ಶರಣು ಶರಣೆನ್ನಿ ॥ ೫ ॥

ಝಂಪೆ

ದುಷ್ಟ ದುರ್ಯೋಧನ ದಶಮುಖ ಬಾಣಾಸುರರಂದದಿ ।
ಶಿಷ್ಟರಾಗಿ ಶಿವನ ಪೂಜಿಸಿ ಗತಿಯೆಂದರೆ ।
ಭ್ರಷ್ಟರಾಗಿ ಪುತ್ರ-ಮಿತ್ರ-ಕಳತ್ರವು ।
ಅಷ್ಟು ಹತವಪ್ಪುದು ।
ಶ್ರೇಷ್ಠರಾರಯ್ಯ ಹೇಳಿರಿಂದು ॥ ೬ ॥

ರೂಪಕತಾಳ

ಅಕ್ರೂರ ಪ್ರಹ್ಲಾದ ಅಂಬರೀಷ ಅಜಮಿಳ ।
ನಕ್ರಪಿಡಿದ ಗಜೇಂದ್ರ ಕುಚೇಲ ಯಾವತ್ಪರಿವಾರ ।
ಚಕ್ರಧಾರಿ ಕೃಷ್ಣನ ನಂಬಿದವರ ।
ಅಕ್ಕರದಿಂದಲಿ ಸಲಹಿದ ಪುರಂದರವಿಠಲ ॥ ೭ ॥

ಜತೆ

ನುಡಿವ ಮಾತುಗಳನ್ನು ಅಡಿಗಡಿಗೆ ಭೋಗಭಾಗ್ಯ ।
ಸುಡಿಸುವ ದಾರಿದ್ರ್ಯ ದುಷ್ಕೃತವ ನಡಿಸುವ ಸುಕೃತದ ।
ಯೋಗ್ಯತೆ ಪರಿಯಲಿ ॥

## ೧೨೧

ರಾಗ—ಶ್ರೀರಾಗ ತಾಳ—ತ್ರಿವಿಡಿ

### ಸುಳಾದಿ

೧ ವಿಶ್ವನೆನಿಸಿ ವಿಶ್ವಜಾಗರವ ಪ್ರೇರಿಸುವೆ ದೇವ |
ತೈಜಸನೆನಿಸಿ ಲೋಕದ ಸ್ವಾಪನವ ಸೃಜಿಸುವೆ ದೇವ |
ಪ್ರಾಜ್ಞನೆನಿಸಿ ಜನರಿಗೆ ಸುಬುದ್ಧಿಯನೀವೆ |
ತುರೀಯನೆನಿಸಿ ಚೇತನರಿಗೆ ಪರಗತಿಯನೀವೆ |
ಆತುಮ ಅಂತರಾತುಮನೆನಿಸಿ ನೀನೆ ಶುಭಸಾರವ
ಭೋಗಿಪೆ ದೇವ |
ಅನಿರುದ್ಧನೆನಿಸಿ ಲೋಕವನಾದಿಯಲಿ ಸೃಜಿಸುವೆ ದೇವ |
ಪ್ರದ್ಯುಮ್ನನೆನಿಸಿ ಲೋಕವನನವರತ ಪಾಲಿಸುವೆ ದೇವ |
ಸಂಕರುಷನೆನಿಸಿ ಲೋಕವ ನಿನ್ನೊಳಗಿಡುವೆ |
ವಾಸುದೇವನೆನಿಸಿ ಕೈವಲ್ಯವನೀವೆ |
ಸರ್ವವ್ಯಾಪಾರಕೆ ಕಾರಣ ನೀನೆಯಲಾ ಪುರಂದರವಿಠಲ
ವಿಭುವೆ ದೇವ ॥ ೧ ॥

### ಮಟ್ಟಿತಾಳ

ಒಂದೊಂದವತಾರದೊಳನಂತ ಮಹಿಮೆ |
ಒಂದೊಂದವಯವದೊಳನಂತ ಮಹಿಮೆ |
ಒಂದೊಂದು ರೋಮಾದಿಗಳಲಿ ಅಜಭವಾದಿಕಾರ್ಯ |
ಪುರಂದರವಿಠಲ ನೀನೆ ಸಮರ್ಥ ॥ ೨ ॥

### ಆದಿತಾಳ

ಉಗುರು ಬೊಮ್ಮಾಂಡವ ಖರ್ಪರವನೊಡೆಯಿತು |
ಅಂಗುಟವು ದುರ್ಯೋಧನನ ಕೆಡಹಿತು |

೧ ಅ (೨) ಇ (ಮುದ್ರಿತ) ಪ್ರತಿಗಳಿಂದ ತೆಗೆದುಕೊಂಡಿದೆ.

ಪಾದ ಶಕಟನ ನುಗ್ಗೊತ್ತಿತು ।
ಬಾಹು ಕೇಶಿಯನೆತ್ತಿ ಕೆಡಹಿ ಬೀಸಾಟಿತು ।
ದೃಷ್ಟಿ ಕುರುಸೈನ್ಯವ ಅಸುಗುಂದಿಸಿತು ।
ಜಗಜಟ್ಟಿ ಪುರಂದರವಿಠಲಗಿದಿರುಂಟೆ ॥ ૩ ॥

**ಅಟತಾಳ**

ರಂಗನ ಚರಣಗಳನ್ನು ಹಿಂಗದೆ ನೀ ನೆನೆಮನವೆ ।
ಗಂಗಾಜನಕನ ಶರಣರ ಸಂಗದೊಳಿರಿಸೆಲೆ ಮನವೆ ।
ಹಿಂಗದೆ ಹಿಂಗದೆ ಹಿಗ್ಗುವವನ ನಂಬು ಪಾಂಡುರಂಗ
ಪುರಂದರವಿಠಲನ—ಹಿಂಗದೆ ॥ ೪ ॥

**ಝುಂಪೆತಾಳ**

ಸಂಸಾರಸಾಗರದ ತಡಿಗಳ ತೆರೆಗಳ ।
ಏಳುತ ಮುಳುಗುತಲೈದೇನೆ ದೇವ ।
ಕಡೆಗೈದುವೆನೆಂದು ಆಡುತ ಪಾಡುತಲೈದೇನೊ ದೇವ ।
ಪುರಂದರವಿಠಲನ ನಾಮದಿ ಲೋಲಾಡುತ
ಪಾಡುತಲೈದೇನೊ ದೇವ ॥ ೫ ॥

**ಜತೆ**

ನಮೋ ನಮೋ ನಾರಾಯಣ ನಾರಾಯಣ ।
ತ್ವಮೇವ ಶರಣಂ ಪುರಂದರವಿಠಲ ॥ ೬ ॥

## ೧೨೨

ರಾಗ—ಮಾಳಿ ತಾಳ—ಅಟ

೧ ಹಿರಿಯ ಒಡೆಯನಲ್ಲವೆ—ನಮ್ಮಯ ದೇವ ।
ಹಿರಿಯ ಒಡೆಯನಲ್ಲವೆ ? ॥ ಪ ॥

---

೧ ನ ಪ್ರತಿಯೊಂದರಲ್ಲಿಯೆ ದೊರಕುತ್ತಿದೆ.

ಪ್ರಳಯೋದಕದಲ್ಲಿ ಪ್ರಣವಪ್ರತಿಪಾದ್ಯನು ।
ಮಲಗಿರೆ ಮಹಾಕಾಂತಿ ಪೊಗಳಲಿಳೆ ॥
ಹಲವು ಜೀವರ ಕರ್ಮಫಲವ ನೇಮಿಸಿಕೊಟ್ಟ ।
ಜಲಜಲೋಚನ ಸಿರಿ ಬಿನ್ನಹ ಕೈಕೊಂಬ ॥ ೧ ॥

ಕ್ಷುದ್ರತಮನೆಂಬ ದೈತ್ಯನು ವೇದವ ।
ಕದ್ದೊಯ್ಯಲು ಸುಮನಸರು ಸಾರಿ ತುತಿಸೆ ॥
ಪದ್ಮಜಾಪತಿ ದೈತ್ಯನ ಕೊಂದು ವೇದ ಕಮ- ।
ಲೋದ್ಭವಗಿತ್ತು ಕಾಯಿದ ಕಾರಣದಿಂದ ॥ ೨ ॥

ಕ್ಷುದ್ರ ದೈತ್ಯನಿಗೆ ಶ್ರೀರುದ್ರನು ವರವಿತ್ತು- ।
ಪದ್ರದಿ ಬಳಲುತ ಓಡಾಡಲು ॥
ಭದ್ರಮೂರುತಿ ಸಿರಿಪುರಂದರವಿಠಲನು ।
ಛಿದ್ರಿಸಿ ರುದ್ರನ ಸಲಹಿದ ಕಾರಣ ॥ ೩ ॥

## ೧೨೩

ರಾಗ—ಧನ್ಯಾಸಿ ತಾಳ—ಆದಿ

೧ ಹೊಸಪರಿಯೊ —ರಂಗ—ಹೊಸಪರಿಯೊ ।
ಶಶಿಧರವಂದ್ಯನೆ ಕುಸುಮಜಜನಕ ॥ ಪ ॥

ಬೊಮ್ಮಗೆ ನೀ ಪರಬೊಮ್ಮನಾದೆಯೊ ರಂಗ ।
ತಮ್ಮಗೆ ನೀ ಮತ್ತೆ ತಮ್ಮನಾದೆಯೊ ರಂಗ ॥
೨ ಮಗನ ಮಗನ ಮೊಮ್ಮಗನಾದೆಯೊ ರಂಗ ।
ಮಗನ ಮಗಳ ನೀ ಮದುವೆಯಾದೆಯೊ ರಂಗ ॥ ೧ ॥

೧ ಅ (ಅ) ಪ್ರತಿಯಿಂದ ಆರಿಸಿದೆ.
೨. ಇಲ್ಲಿ ಪ್ರಾಸ ತಪ್ಪಿದೆ.
ವಿ. ಸೂ.— ಎ ಮತ್ತು ಓ ಪ್ರತಿಗಳಲ್ಲಿ ಪಾಠ ಸರಿಯಾಗಿಲ್ಲ.

ಮಾವಗೆ ನೀ ಮತ್ತೆ ಮಾವನಾದೆಯೊ ರಂಗ ।
ಮಾವನ ಮಗಳ ನೀ ಮದುವೆಯಾದೆಯೊ ರಂಗ ॥
ಭಾವಗೆ ನೀ ಮತ್ತೆ ಭಾವನಾದೆಯೊ ರಂಗ ।
ಭಾವಜವೈರಿಗೆ ಸಖನಾದೆಯೊ ರಂಗ ॥ ೨ ॥

ಅತ್ತೆಯ ಅರ್ಥಿಯಿಂದಾಳಿದೆಯೋ ರಂಗ ।
ಅತ್ತೆಯ ಮಗಳ ನೀ ಮದುವೆಯಾದೆಯೊ ರಂಗ ॥
ಮತ್ತೊಬ್ಬರಿಗುಂಟೆ ಈ ಪರಿ ಮಹಿಮೆಯು ।
ಕರ್ತೃ ಶ್ರೀಪುರಂದರವಿಠಲನಿಗಲ್ಲದೆ ॥ ೩ ॥

## ೧೨೪

ರಾಗ—ಶಂಕರಾಭರಣ ತಾಳ—ಆದಿ

೧ ಹರಿಯೆ ಗತಿ ಸಿರಿ ವಿರಿಂಚಿ ಶಿವರಿಗೆ ನರ- ।
ಹರಿಯೆ ಗತಿ ಸುರಪತಿ ಸುರರಿಗೆ ॥ ಪ ॥

ರುಕುಮಿಣಿದೇವಿಯ ಶಿಶುಪಾಲಗೀವೆನೆಂದು ।
ರುಕುಮ ಸಂಭ್ರಮಿಸಲು ಕೃಷ್ಣ ಬಂದು ॥
ಸಕಲ ರಾಯರುಗಳು ಸನ್ನದ್ಧರಾಗಿರೆ ।
ರುಕುಮಿಣಿದೇವಿಯ ವರಿಸಿ ಆಳಿದನಾಗಿ ॥ ೧ ॥

ಹಯಾಸ್ಯನೆಂಬವ ವೇದವ ಕದ್ದೊಯ್ಯೆ ।
ಹಯಗ್ರೀವನಾಗಿ ಹರಿಯವನ ।
ಕಾಯುವ ಖಂಡಿಸಿ ಅಜಗೆ ವೇದವನಿತ್ತು ।
ಕಾಯ್ದ ಕರುಣಿ ಕಮಲಾಕ್ಷನೆ ದೈವವೆಂದು ॥ ೨ ॥

---

೧ ಇ (೧೦) ಪ್ರತಿಯಿಂದ ಆರಿಸಿಕೊಂಡಿದೆ.
ವಿ. ಸೂ.—ಎ. ಓ. ಪ್ರತಿಗಳಲ್ಲಿ ವಿಕಾರ ಹೆಚ್ಚಿವೆ.

ಭಸುಮಾಸುರನಿಗೊಂದಸಮುದ ವರವಿತ್ತು ।
ತ್ರಿಶೂಲಧರನು ಓಡಿ ಬಳಲುತಿರೆ ॥
ಬಿಸಜಸಂಭವನಯ್ಯ ಭಸುಮಾಸುರನನು ।
ಭಸುಮವ ಮಾಡಿ ಭಕ್ತನ ಪಾಲಿಸಿದನಾಗಿ ॥ ೩ ॥

ಸುರಪನ ರಾಜ್ಯವ ಬಲಿಯಾಕ್ರಮಿಸಲು ।
ಹರಿಯೆ ದಾನವ ಬೇಡಿ ನೀನವನ ॥
ಧರೆಯ ಈರಡಿ ಮಾಡಿ ಪಾತಾಳಕೆ ಮೆಟ್ಟಿ ।
ಸುರಪಗೆ ರಾಜ್ಯವನಿತ್ತು ಸಲಹಿದನಾಗಿ ॥ ೪ ॥

ಸುರ-ಭೂಸುರರನು ಅಸುರ ಬಾಧಿಸುತಿರೆ ।
ಹರಿಯವತರಿಸಿ ನೀನಸುರರನು ॥
ಶಿರಗಳ ಚಂಡಾಡಿ ಸುರರ ಭೂಸುರರನು ॥
ಪೊರೆಯುತ್ತಲಿಪ್ಪ ನಮ್ಮ ಪುರಂದರವಿಠಲ ॥ ೫ ॥

## ೧೨೫

ರಾಗ—ಕಾಂಬೋಜಿ ತಾಳ—ಝಂಪೆ

೧ ಹರಿಯಧಿಕ ಹರನಧಿಕ ಎಂದು ಹೋರಾಡದಿರಿ ।
ಹರಿಹರರ ಭಕ್ತರೇ ಸಾಕ್ಷಿ ಲೋಕದೊಳು ॥ ಪ ॥

ಹರಿಯೆಂದು ಪ್ರಹ್ಲಾದ ಬಂದ ದುರಿತವ ಗೆಲಿದ ।
ಹರನೆಂದು ಅವನ ಪಿತ ತಾನೆ ಅಳಿದ ॥
ಹರಿಯೆಂದ ವಿಭೀಷಣನು ಸ್ಥಿರಪಟ್ಟವೈದಿದ ।
ಹರನೆಂದ ರಾವಣನು ಹತನಾದನಯ್ಯ ॥ ೧ ॥

ಹರಿಯೆಂದು ಭೀಮ ಪರಿಪೂರ್ಣಕಾಮನು ಆದ ।
ಹರನೆಂದ ಆ ಜರಾಸಂಧ ಹತನಾದ ॥

೧ ಅ (೮) ಷು (೧–೧೦) ಮು ಪ್ರತಿಗಳಿಂದ ಆರಿಸಿಕೊಂಡಿದೆ.

ಹರಿಯು ಬಾಗಿಲ ಕಾಯ್ದ ಬಲಿ ಭಾಗ್ಯವಂತನಾದ ।
ಹರನು ಬಾಗಿಲ ಕಾಯ್ದ ಬಾಣನಳಿದ ॥ ೨ ॥

ಹರನ ವರವನು ಪಡೆದ ಭಸ್ಮಾಸುರನು ಅವನ ।
ಶಿರದಲ್ಲಿ ತನ್ನ ಕರವಿಡಲು ಬರಲು ॥
ಹರಿ ನೀನೆ ಗತಿಯೆಂದು ತ್ರಿಪುರಾರಿ ಮೊರೆಯಿಡಲು ।
ವರದ ಪುರಂದರವಿಠಲ ಕಾಯ್ದುದರಿಯ ? ॥ ೩ ॥

## ೧೨೬

ರಾಗ—ಮುಖಾರಿ ತಾಳ—ಝಂಪೆ

೧ ಹರಿ-ಹರರು ಸರಿಯೆಂಬ ಅರಿಯದಜ್ಞಾನಿಗಳು ।
ಹರನ ಹೃದಯದೊಳಿರುವ ಹರಿಯ ತಾವರಿಯರು ॥ ಪ ॥

ಶರಧಿಮಥನದಲಂದು ಸಿಂಧುಸುತೆ ಬಂದಾಗ ।
ಹರಿ-ಹರ-ವಿರಿಂಚಿ ಮೊದಲಾದ ಸುರರ ॥
ನೆರೆ ಒರೆದು ನೋಡಿ ಶಂಕೆಯು ಬಿಟ್ಟು ಸಿರಿದೇವಿ ।
ಹರಿ ಸರ್ವಪರನೆಂದು ಮಾಲೆ ಹಾಕಿದಳು ॥ ೧ ॥

ಹರಿನಾಮ ಕ್ಷೀರವದು ಹರನಾಮ ನೀರು ಅದು ।
ಕ್ಷೀರ ನೀರೊಂದಾದುದಂತೆ ಇಹುದು ॥
ಒರೆದಾಡಿ ಪರತತ್ತ್ವವರಿಯದಾ ನರ ತಾನು ।
ಹರಿ-ಹರರು ಸರಿಯೆಂದು ನರಕಕೆಳಸುವನು ॥ ೨ ॥

ಕ್ಷೋಣಿಯೊಳು ಬಾಣನ—ತೋಳುಗಳ ಕಡಿವಾಗ ।
ಏಣಾಂಕಧರ ಬಾಗಿಲೊಳಗೆ ಇರಲು ॥
ಕಾಣರೇ ಜನರೆಲ್ಲ ಹರಿ ಪರನು ತಾನೆಂದು ।
ಪೂರ್ಣಗುಣ ಪುರಂದರವಿಠಲನೇ ಪರನು ॥ ೩ ॥

---

೧ ಅ (ಶ I) ಠ ೨ ಪ್ರತಿಗಳಿಂದ ಆರಿಸಿದೆ.

೧೨೭

ರಾಗ—ನಾಂಟಿ ತಾಳ—ಝಂಪೆ

೧ ಹರಿಯೆ ॥ ಪ ॥

ಹರಿ ನಿನ್ನ ಕೃಪೆಯೆನಗೆ ಚಂದ್ರ-ತಾರಾಬಲವು ।
ಹರಿ ನಿನ್ನ ಕರುಣವೇ ರವಿಯ ಬಲವು ॥
ಹರಿ ನಿನ್ನೊಲುಮೆಯೆನಗೆ ಗುರುಬಲವು ಭೃಗುಬಲವು ।
ಹರಿ ನಿನ್ನ ಮೋಹವೇ ಶನಿಯ ಬಲವು ॥ ೧ ॥

ಮಂಗಳಾತ್ಮಕ ನಿನ್ನ ಅಂಗದರುಶನವೆನಗೆ ।
ಮಂಗಳನ ಬಲವು ಎನ್ನಂಗಕೀಗ ॥
ರಂಗಯ್ಯ ನಿನ್ನ ಚರಣಾರವಿಂದವ ನೋಡೆ ।
ಹಿಂಗಿ ಪೋಪುದು ಅಘವು ಸೌಮ್ಯಬಲವು ॥ ೨ ॥

ಆದಿಪುರುಷನೆ ನಿನ್ನ ಅರಿಪುದೇ ಕೇತುಬಲ ।
ಆದಿಮೂಲನೆ ನಿನ್ನ ಗುಣಕಥನವ ॥
ಆದರಿಸಿ ಕೊಂಡಾಡುವುದೆ ಎನಗೆ ರಾಹುಬಲ ।
ಆದಿಮೂರುತಿ ಬ್ರಹ್ಮ ಪುರಂದರವಿಠಲ ॥ ೩ ॥

೧೨೮

ರಾಗ—ಶಂಕರಾಭರಣ ತಾಳ—ಆದಿ

೨ ಯಮನೆಲ್ಲೊ ಕಾಣೆನೆಂದು ಹೇಳಬೇಡ ।
ಯಮನೇ ಶ್ರೀರಾಮನು ಸಂದೇಹ ಬೇಡ ॥ ಪ ॥

೧ ಅ (೧) ಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.
ಸಿ. ಸೂ.— ಪಲ್ಲವಿ ಅಪೂರ್ಣವಾಗಿದೆಯೊ ಏನೊ ?

೨ ಅ (P) ಕ ಪ್ರತಿಗಳಿಂದ ಆಯ್ದುಕೊಂಡಿದೆ. ಉಳಿದ ಪ್ರತಿಗಳಲ್ಲಿ ಸಂಗ್ರಾಹಕರ ಕೈವಾಡ ಹೆಚ್ಚಿದೆ.

ನಂಬಿದ ವಿಭೀಷಣಗೆ ರಾಮನಾದ ।
ನಂಬದಿದ್ದ ರಾವಣಗೆ ಯಮನೇ ಆದ ॥ ೧ ॥

ನಂಬಿದ ಅರ್ಜುನನಿಗೆ ಬಂಟನಾದ ।
ನಂಬದಿದ್ದ ಕೌರವನಿಗೆ ಕಂಟಕನಾದ ॥ ೨ ॥

ನಂಬಿದ ಉಗ್ರಸೇನಗೆ ಮಿತ್ರನಾದ ।
ನಂಬದಿದ್ದ ಕಂಸನಿಗೆ ಶತ್ರುವಾದ ॥ ೩ ॥

ನಂಬಿದ ಪ್ರಹ್ಲಾದಗೆ ಹರಿಯಾದ ।
ನಂಬದಿದ್ದ ಹಿರಣ್ಯಕಗೆ ಅರಿಯಾದ ॥ ೪ ॥

ನಂಬಿದವರ ಸಲಹುವ ನಮ್ಮ ದೊರೆಯು ।
ಅಂಬುಜಾಕ್ಷ ಪುರಂದರವಿಠಲ ಹರಿಯು ॥ ೫ ॥

## ೧೨೯

### ಸುಳಾದಿ

### ಧ್ರುವತಾಳ

೧ ಮಣಿಮೌಳಿ ಮೊಲ್ಲೆ-ಮಲ್ಲಿಗೆಯ ದಂಡೆ ಪಿಂಛೆದೊಂಗಲ
ಉತ್ತಮಾಂಗ ।
ಮೆರೆವ ಕರ್ಣಕುಂಡಲ ಕೌಸ್ತುಭ ಕಮಲಮಾಲೆ ಕಂಬುಕಂಠ ।
ಸಿರಿಗಂಧ ಸಿರಿವತ್ಸ ಸಿರಿತುಲಸಿ ಸಿರಿವಕ್ಷಸ್ಥಳ ।
ಮರಕತಮಣಿಯ ಕಡಗ ಕಂಕಣ ಕಡೆಯ ತೊಡೆಯ ಸಮಚರಣ ।
ಹೇಮವಸನ ಶ್ಯಾಮಲಕೋಮಲಾಂಗ ।
ಅಹೋ ಗೋಪಿಯರ ಮೋಹಿಸುತಿದೆ
ಅಹೋ ಜಗಜ್ಜನರ ಪಾಲಿಸುತಿದೆ ।
ಅಹೋ ಪುರಂದರವಿಠಲನ ಬಾಲಲೀಲೆ ॥ ೧ ॥

೧ ಆ (VI) ಇ (೧೨) ಇ (ಮುದ್ರಿತ) ಪ್ರತಿಗಳಿಂದ ಆರಿಸಿಕೊಂಡಿದೆ.

### ಮಟ್ಟೆ ತಾಳ

ಪೊಂಬಟ್ಟೆಯ ಮೇಲೆ ಕಾಂಚೀದಾಮದ
ಒಲ್ಲಿಯ ಉಡಿಸುತ್ತಿ |
ಜಂಬು-ಚೂತಗಳ ಎಳದಳಿರ ಮುಕುಟದ ಮೇಲೆ
ಸುತ್ತಿಕೊಂಡು |
ಕೊಂಬು-ಕೊಳಲು-ತುತ್ತುರಿ-ವೌರಿಯಗಳು |
ಭಂವ್ ಭಂವ್ ಭಂವ್ ಝುಂ ಝುಂ ಝುಮ್ಮೆಂಬ |
ರಾಮಕೃಷ್ಣ ಗೋವಳರ ಸಂಭ್ರಮವು ಸುರರನೊಲಿಸಿತು |
ಜಂಭಭೇದಿ ಶಂಭು ಅಂಬುಜಸಂಭವನುತ |
ಕಂಬುಗ್ರೀವ ತಿರುವೆಂಗಳಪ್ಪ ಪುರಂದರವಿಠಲ || ೨ ||

### ತ್ರಿವುಡೆ ತಾಳ

ಜಯ ಜಯ ಶ್ರೀನರಸಿಂಹ ಮಹಾಭಯ ನಿವಾರಣ |
ಜಯ ಜಯ ಶ್ರೀದಿವ್ಯಸಿಂಹ ಘೋರದುರಿತನಿವಾರಣ |
ಪ್ರಹ್ಲಾದವರದ ಶ್ರೀಪುರಂದರವಿಟ್ಠಲರಾಯ || ೩ ||

### ಅಟತಾಳ

ಅಹಂಕಾರ ಮಮಕಾರವಳಿಯಡೆ ವಿಹಂಗಗಮನನು
ಸಿಲುಕುವನೆ ಮರುಳೆ |
ಕಾಮ-ಕ್ರೋಧವ ಬಿಡದನ್ನಕ್ಕ ಪರಬೊಮ್ಮನೊಲುಮೆ-
ಯೆತ್ತ ನೀನೆತ್ತ ಮರುಳೆ |
ಆ ಹರಿದಾಸರ ಚರಣಾಬ್ಜಕೆ ಎರಗದೆ ಪುರಂದರ
ವಿಠಲನು ಸುಲಭನೆ ಮರುಳೆ || ೪ ||

### ಆದಿತಾಳ

ವಾಮನ ವಾಸುದೇವ ಪದ್ಮನಾಭ ಹರಿ |
ದಾಮೋದರ ಪ್ರದ್ಯುಮ್ನ ಸಂಕರ್ಷಣ ವಾಸುದೇವ |
ಅನಿರುದ್ಧ ಪುರಂದರವಿಟ್ಠಲರಾಯ ಪುರುಷೋತ್ತಮ ಹರಿ ||೫||

ಜತೆ

ಮನೋವಚನಗಳಲ್ಲಿ ಕಾಯಕರ್ಮಗಳಲ್ಲಿ ।
ಕೊಲ್ಲೊ ಕಾಯೊ ನಂಬಿದೆ ಪುರಂದರವಿಠಲ ॥

೧೩೦

ಸುಳಾದಿ

ಧ್ರುವತಾಳ

೧ ಪರಿಪೂರ್ಣನು ನೀನು, ಬೊಮ್ಮಾಂಡಕೋಟಿಗಳಿಗೆ
ಎಂತೆಡೆಗೊಟ್ಟೆ ಹೇಳಾ ? ।
ಪರಿಪೂರ್ಣನು ನೀನು, ಲಕುಮಿದೇವಿಯರಿಗೆ
ಎಂತೆಡೆಗೊಟ್ಟೆ ಹೇಳಾ ? ।
ಪರಿಪೂರ್ಣನು ನೀನು, ಬೊಮ್ಮಾದಿ ಸುರರಿಗೆ
ಎಂತೆಡೆಗೊಟ್ಟೆ ಹೇಳಾ ।
ಪರಿಪೂರ್ಣನು ನೀನು, ಅನಂತವೇದಗಳಿಗೆ
ಎಂತೆಡೆಗೊಟ್ಟೆ ಹೇಳಾ ।
ಪರಿಪೂರ್ಣನು ನೀನು, ಅವ್ಯಾಕೃತಾಕಾಶಕ್ಕೆ
ಎಂತೆಡೆಗೊಟ್ಟೆ ಹೇಳಾ ।
ಪರಿಪೂರ್ಣನು ನೀನು, ಪುರಂದರವಿಠಲ
ಎಂತೆಡೆಗೊಟ್ಟೆ ಹೇಳಾ ॥ ೧ ॥

ಮಟ್ಟತಾಳ

ಅಣುವಿಂಗಣುವಿಂಗಣುವಿಂಗೆ
ಅಣುವಿಂಗಣುವಿಂಗಣುವು ಗಡಾ ।
ಮಹತ್ತು ಮಹತ್ತು ಮಹತ್ತು ಮಹತ್ತಿಗೆ
ಮಹತ್ತು ಮಹತ್ತು ಮಹತ್ತು ಗಡಾ ।

---

೧ ಇ (ಮುದ್ರಿತ) ಓ ಗ (x) ಮ ಪ್ರತಿಗಳಿಂದ ಆರಿಸಿದೆ.

ಮಹತ್ತಾದ ಅಪರಿಮಿತ ಗಡಾ ।
ಅಣೋರಣೀಯಾನ್ ಮಹತೋ ಮಹೀಯಾನ್ ।
ಗುಣಗಣಭರಿತ ಪುರಂದರವಿಠಲ ॥ ೨ ॥

ಅಟತಾಳ

ಕಾಣಾಚಿ ನಿನ್ನರವು ಲಕುಮಿದೇವಿಯರಿಗೆ ।
ಕಾಣಾಚಿ ನಿನ್ನ ಸರ್ವಾಂಗ ಭವೇಂದ್ರಾದಿಸುರರಿಗೆ ।
ಕಾಣಾಚಿ ನಿನ್ನ ಸರ್ವಾಂಗ ಎನಗೆ ಪುರಂದರವಿಠಲ ॥ ೩ ॥

ಝುಂಪೆತಾಳ

ಅಗ್ನಿಯೊಳಗಿದ್ದು ದಾಹಕಶಕುತಿಯನೀವೆ ।
ವಾಯುವಿನಲ್ಲಿದ್ದು ಶೋಷಕಶಕುತಿಯನೀವೆ ।
ವರುಣನಲ್ಲಿದ್ದು ಕ್ಲೇದಕಶಕುತಿಯನೀವೆ ।
ನಾನಾ ವಸ್ತುವಿನಲ್ಲಿದ್ದು ಇಂತು ನಾನಾ ಶಕುತಿಯನೀವೆ ।
ಆರು ನಿನ್ನಂತೆ ಘನಮಹಿಮರೊ ನೀನೆ ಘನ-
ಪುರಂದರವಿಠಲ ॥ ೪ ॥

ಏಕತಾಳ

ಕಂಡೆ ಕಂಡೆ ಕಮಲಾರಮಣನ ।
ಕಂಡೆ ಕಂಡೆ ಕಮಲಜನಯ್ಯನ ।
ಕಂಡೆ ಕಂಡೆ ಕೌಸ್ತುಭಧರನ ।
ಕಂಡೆ ಕಂಡೆ ವೈಜಯಂತೀಧರನ ।
ಕಂಡೆ ಕಂಡೆ ಚಕ್ರಪಾಣಿಯ ।
ಕಂಡೆ ಕಂಡೆ ಶಂಖಧಾರಿಯ ।
ಕಂಡೆ ಕಂಡೆ ಕರುಣಾಳು ಪುರಂದರವಿಟ್ಠಲನ ॥ ೫ ॥

ಜತೆ

ಇನಿತು ಕಾರಣಮನಿತು ನೀನೆ ।
ಜನಗೂ ಎನಗೂ ಪುರಂದರವಿಠಲ ॥

೧೩೧

ರಾಗ—ಕಲ್ಯಾಣಿ ತಾಳ—ಝಂಪೆ

೧ ನೀನೊಲಿದರೇನಾಹುದು—ಶ್ರೀಹರಿಯೆ- ।
ಮುನಿಯೆ ನೀನೆಂತಾಹುದು ॥ ಪ ॥

ವಾಲಿ ಬಲ್ಲಿದ ವಾನರರಿಗೆ—ಶ್ರೀಹರಿಯೆ
ನೀ ಮುನಿದು ಎಚ್ಚವನ ಕೊಂದೆ ।
ಮೇಲೆ ಕಿಷ್ಕಿಂಧೆಯ ಪುರದ ಸುಗ್ರೀವನ
ವಾಲಿಯ ಪದದಲ್ಲಿಟ್ಟೆ ॥ ೧ ॥

ಮೂರುಲೋಕವನಾಳುವ—ರಾವಣನ
ಊರ ಬೂದಿಯ ಮಾಡಿದೆ ।
ವಾರಿಧಿಯ ಒಳಗಿಪ್ಪ ಲಂಕೆಯ ವಿಭೀಷಣಗೆ
ಸ್ಥಿರಪಟ್ಟವನು ಕಟ್ಟಿದೆ ॥ ೨ ॥

ಪನ್ನಗವನುದ್ಧರಿಸಿದೆ—ಕೌರವರ-
ಹನ್ನೊಂದಕ್ಷೋಣಿ ಬಲವ ।
ಛಿನ್ನಛಿದ್ರವ ಮಾಡಿ ಅವರನ್ನು ಮಡುಹಿದೆ
ಪಾಂಡವರ ಪದವಿಯಲ್ಲಿಟ್ಟೆ ॥ ೩ ॥

ಹಿರಣ್ಯಕನು ಸುತನ ಕೊಲಲು—ಆಗ ನೀ
ಕರುಣದಿಂದೋಡಿ ಬಂದೆ ।
ಮರಣವೈದಿಸಿ ಪಿತನ ತರಳ ಪ್ರಹ್ಲಾದನನು
ಶರಣರೊಳು ಸರಿಮಾಡಿದೆ ॥ ೪ ॥

ಭಾಷೆ ಪಾಲಿಪನೆನುತಲಿ—ನಾ ಬಹಳ-
ಆಸೆ ಮಾಡುತಲಿ ಬಂದೆ ।
ಶೇಷಗಿರಿವಾಸ ಪುರಂದರವಿಠಲ ದಾರಿದ್ರ್ಯ
ನಾಶಮಾಡೆನ್ನ ಸಲಹೊ ॥ ೫ ॥

---

೧ ನ ಪ್ರತಿಯೊಂದರಲ್ಲಿಯೆ ಇದೆ.

## ೧೩೨

### ಸುಳಾದಿ

#### ಧ್ರುವತಾಳ

೧ ತ್ರಿಶೂಲ ಡಮರುಗ ಭಸಿತ ರುದ್ರಾಕ್ಷಿ
ಪಶುವಾಹನನಾದದ್ದೊಂದೆ ಮೂರುತಿ |
ಕುಶಲದ ಜಪಮಣಿಮಾಲೆ ಚತುರ್ಮುಖ
ವಸುಧೆಯ ಸೃಜಿಸುವುದೊಂದೇ ಮೂರುತಿ |
ನೊಸಲಲ್ಲಿ ಸಿರಿನಾಮ ಶಂಖ-ಚಕ್ರ-ಗದೆ
ಬಿಸಜವ ಪಿಡಿದದ್ದೊಂದೇ ಮೂರುತಿ |
ಎಸೆವ ವೇದಾನಂತಕೋಟಿಯು ಭೇದಿಸಿ ಸಂ-
ತಸದಿ ನೋಡುತಿಹುದೊಂದೇ ಮೂರುತಿ || ೧ ||

#### ಮಟ್ಟತಾಳ

ಸುಮ್ಮನಾದರೂ ಒಮ್ಮೆ ಸುಳಿವ ತೋರುತ
ಬ್ರಹ್ಮಾಂಡದೊಳಾಡುತಿಹುದೊಂದೇ ಮೂರುತಿ |
ನಮ್ಮ ದೇವ ನಿಮ್ಮ ದೇವ ತಮ್ಮ ದೇವ ಎಂತೆಂಬ
ಹಮ್ಮಿಂದಲಾಡುತಿಹುದೊಂದೇ ಮೂರುತಿ |
ಒಮ್ಮೊಮ್ಮೆ ನಾ ಕುರುಹ ಒಡಿವೆನೆಂದರೆ
ಅಮ್ಮದೆ ಪುರಂದರವಿಠಲನಾದದ್ದೊಂದೆ ಮೂರುತಿ ||೨||

#### ತ್ರಿವುಡೆ ತಾಳ

ಸತ್ತ್ವರಜಸ್ತಮೋಗುಣದ ಸಕಲ ಮೂರುತಿ |
ಭಕ್ತರಂಗಸಂಗದಲ್ಲಿ ನಲಿವ ಮೂರುತಿ |
ನಮ್ಮ ನಿನ್ನ ವರದ ಚೆನ್ನ ಮೂರುತಿ |
ಕರ್ತೃ ಪುರಂದರವಿಠಲನಾದದ್ದೊಂದೆ ಮೂರುತಿ || ೩ ||

---

೧ ಅ (ii) ಇ (ಮುದ್ರಿತ) ಎ ಪ್ರತಿಗಳಿಂದ ಆರಿಸಿಕೊಂಡಿದೆ.

ಅಟತಾಳ

ಸಾಸಿರನಾಮಕ್ಕೆ ಸಾಸಿರ ಮೂರುತಿ ।
ವಾಸುಕಿಶಯನನ ಅನಂತಮೂರುತಿ ।
ಸಾಸಿರದಳದಲ್ಲಿ ಒಪ್ಪುವ ಮೂರುತಿ ।
ಯಶೋದೆಯ ಮೊಲೆಯುಂಡ ಪುರಂದರವಿಠಲನ
ಮೂರುತಿ ॥ ೪ ॥

ಝಂಪೆತಾಳ

ಬೊಮ್ಮಗೆ ಸಿರಿರಂಗ ಮೂರುತಿ ।
ರುದ್ರಂಗೆ ನರಸಿಂಹ ಮೂರುತಿ ।
ಇಂದ್ರಂಗೆ ಉಪೇಂದ್ರ ಮೂರುತಿ ।
ಚಂದ್ರಗೆ ದಧಿವಾಮನ ಮೂರುತಿ ।
ಸೂರ್ಯಗೆ ನಾರಾಯಣ ಮೂರುತಿ ।
ಅಗ್ನಿಗೆ ಪರಶುರಾಮ ಮೂರುತಿ ।
ಈರೇಳು ಲೋಕಕ್ಕೆಲ್ಲ ಕಾಲಪುರುಷ ವಿಷ್ಣುಮೂರುತಿ ।
ಎನಗೆಂದೂ ಸಿರಿ ಬೊಮ್ಮ ಪರಿಪೂರ್ಣ ಪುರಂದರವಿಠಲನೆ
ಮೂರುತಿ ॥ ೫ ॥

ಏಕತಾಳ

ಅನಂತಕಿರೀಟ ಅನಂತಶಿರಸ ಅನಂತಕರಣ ಅನಂತಚಕ್ಷು
ಅನಂತನಾಶಿಕ ಅನಂತಜಿಹ್ವೆ ಅನಂತದಂತ ಅನಂತವದನ।
ಅನಂತಕಂಠ ಅನಂತಭುಜ ಅನಂತಹಸ್ತ ಅನಂತಬೆರಳ
ಅನಂತನಖಾದಿ ।
ಅನಂತಶ್ರೀಗಂಧ ಶ್ರೀತುಲಸಿ ವೈಜಯಂತಿಮಾಲೆ-
ಯಿಂದೊಪ್ಪುವ ।
ಅನಂತವಕ್ಷ ಅನಂತಕುಕ್ಷಿ ಅನಂತನಾಭಿ ।
ಅನಂತಕಟಿ ಅನಂತಜಾನುಜಂಘೆ ಅನಂತಚರಣ ।

ಅನಂತಪೆಂಡೆಯ ಅನಂತಜಗಂಗಳ ಒಳಗು ಹೊರಗು |
ನಮ್ಮ ಪುರಂದರವಿಠಲನೆ ಅನಂತ || ೬ ||

ರೂಪಕ ತಾಳ

ಅಣು ಮಹತ್ತಾಗಿ ತೋರುವ ಮೂರುತಿ |
ತೃಣಕಾಷ್ಠದಲ್ಲಿ ವ್ಯಾಪ್ತಮೂರುತಿ |
ಮನುಜೋತ್ತಮರೆಂಬ ಮನುಜೋತ್ತಮರಿಗೆ |
ಮಿನುಗುಮಿಂಚಿನಂತೆ ಥಳಥಳಿಸುವ ನಮ್ಮ
ಪುರಂದರವಿಠಲ || ೭ ||

ಜತೆ

ಅನಂತ ಮೂರುತಿ ಅನಂತ ಕೀರುತಿ |
ಅನಂತನಾಮ ಪುರಂದರವಿಠಲ ಮೂರುತಿ ||

೧೩೩

ಸುಳಾದಿ

ಧ್ರುವತಾಳ

೧ ಗಲಭೆ ಇದೇನೊ ಬೊಮ್ಮಾದಿಗಳ |
ಉಲುಹು ಇದೇನೊ ರುದ್ರಾದಿಗಳ |
ಸುಳಿಸದಿರೆಲೊ ಗರುಡಾದಿಗಳ |
ನಿಲಹೇಳೊ ಇಂದ್ರ-ಚಂದ್ರಾದಿಗಳ |
ಸುಳಿದರೆ ಹೊಯ್ಯೊ ಅಸುರಾದಿಗಳ |
ತೊಲಗ ಹೇಳಲೊ ಸನಕಾದಿಗಳ |
ನಳಿನಪತ್ರೇಕ್ಷಣನ ಓಲಗಶಾಲಿಗೆ |

೧ ೫ (II-VI) ೩ (ಸುಳಾದಿ ೩) [illegible]

ಸಲುವರೆ ಲಿಂಗಶರೀರಿಗಳು ? ।
ಕಾಲಕಾಲದಿ ಲಕ್ಷ್ಮಿಯವೆರಸಿ ।
ಸುಲಭನೊಪ್ಪಿದ ಪುರಂದರವಿಠಲ ॥ ೧ ॥

ಮಟ್ಟೆ ತಾಳ

ಮುಕುತವಿರಿಂಚಿ ವಿಹಂಗಪತಿಗಳ ಕೈಯ ।
ಉಕುತಿಗಳಿಂದಲಿ ನೀನುತಿಸಿಕೊಂಬುವುದೆತ್ತ ।
ಆಕಳ ಕಾಯ್ವ ಗೋಪ-ಗೊಲ್ಲತಿಯರ ಮಕ್ಕಳ ಕೈಯಿಂದ ।
ನೀ ಬೈಸಿಕೊಂಬುವುದೆತ್ತ ।
ಸಕಲ ಸುರರು ನಗರೆ ರಂಗಯ್ಯ ನಿನಗೆ? ।
ತಕ್ಕುದನೆ ಮಾಡೊ ಪುರಂದರವಿಠಲ ॥ ೨ ॥

ತ್ರಿವಿಡೆ ತಾಳ

ಬದಿಯ ಬಲಿದು ಕಡಹದ ಮರನೇರಿ ।
ಕಾಲಿಯ ಮಡುವ ಧುಮುಕಿ ಅವನ ಶಿರದಲ್ಲಿ।
ಧಿಮಿ ಧಿಮಿ ಧಿಮಿಕೆಂದು ಕುಣಿಯಲು ।
ಧಂಥಣ ಥಣ ಎಂದು ಬೊಮ್ಮ ಮದ್ದಲೆ ಬಡಿಯೆ ।
ತಂದನ್ನ ತಾ ಎಂದು ಹನುಮಂತ ಪಾಡೆ ।
ನಂದಿವಾಹನ ತಾಳವ ಪಿಡಿದು ತತ್ಥೈ ಎನ್ನೆ ।
ನಂದನ ಕಂದ ಆಡಿದ ಆನಂದವ ।
ಎಂದವಗೊಲಿವ ಪುರಂದರವಿಠಲ ॥ ೩ ॥

ಅಟತಾಳ

ಪಂಕಜಲೋಚನ ಪಂಕಜಾನನ ।
ಪಂಕಜಾಪತಿ ಪಂಕಜಾಮತಿ ।
ಪಂಕಜಭವ ವಂದಿತಾಂಘ್ರಿಪಂಕಜ ।
ಪಂಕಜಮಿತ್ರಾನಂತಕೋಟಿ ತೇಜ ।
ಪಂಕಜನಾಭ ಪುರಂದರವಿಠಲ ॥ ೪ ॥

ಆದಿತಾಳ

ಚತುರಮೂರುತಿ ಚತುರಕೀರುತಿ ।
ಚತುರಪಾಣಿ ಚತುರಾಯುಧ ।
ಚತುರವಿಧಮುಕುತಿದಾಯಕ ।
ಚತುರ್ದಶಭುವನೇಶ ಪುರಂದರವಿಠಲ ॥ ೫ ॥

ಜತೆ

ಹಾರಲೊದೆಯೊ ಸಂಚಿತಾಗಾಮಿಗಳನು ।
ತೋರೊ ನಿನ್ನ ಚರಣ ಪುರಂದರವಿಠಲ ॥

## ೧೩೪

ಸುಳಾದಿ

ಧ್ರುವತಾಳ

೧ ಗಂಗಾಜನಕನಿಗೆ ಹೊಂಗಲಶಗಳಿಂದ ।
ಮಂಗಳಮಜ್ಜನ ಮಾಡಿಸುವಳು ।
ಅಂಗನೆ ದ್ರೌಪದಿಗೆ ಅಕ್ಷಯಾಂಬರವಿತ್ತ ।
ರಂಗಗೆ ಪೊಂಬಟ್ಟೆಯ ಉಡಿಸುವಳು ।
ಅಂಗಜನಯ್ಯನ ಅನರ್ಘ್ಯ ರತ್ನಾಭರ- ।
ಣಂಗಳಿಂದಲಿ ಸಿಂಗರಿಪಳು ।
ಇಂಗಡಲೊಡೆಯಗೆ ಕೆನೆವಾಲ ನೈವೇದ್ಯ ।
ಸಂಗ್ರಾಮಭೀಮಗೆ ರಕ್ಷೆಬೊಟ್ಟು ಆ- ।
ಭೃಂಗ ಗೋರಂಟ್ಗೆಯು ಚೆನ್ನರಾಯು ಶಾ- ।
ರಙ್ಗಧರ ಪುರಂದರವಿಠಲರಾಯು ॥ ೧ ॥

೧ ಇ (ಮುದ್ರಿತ) ಪ್ರತಿಯೊಂದರಲ್ಲಿಯೇ ಸಿಕ್ಕುತ್ತದೆ.

### ಮಟ್ಟೆ ತಾಳ

ಬೊಮ್ಮಾಂಡಕೋಟಿಗಳ ಗೊಂಬೆಮನೆಯ ಮಾಡಿ ।
ಬೊಮ್ಮ-ಭವಾದಿಗಳ ಗೊಂಬೆಗಳ ಮಾಡಿ ।
ಒಮ್ಮೊಮ್ಮೆ ನಲಿಯುತ ಗೊಂಬೆಯಾಟವಾಡುವ ।
ನಮ್ಮ ಗೋರಂಟ್ಲಯ ಚೆನ್ನರಾಯ ಶಾ- ।
ರಜ್ಞಧರ ಪುರಂದರವಿಠಲ ॥ ೨ ॥

### ತ್ರಿವಿಡೆ ತಾಳ

ಈತ ವಿರಿಂಚಿಯು ಈತನು ಭವನು ।
ಈತ ಇಂದಿರನು ಈತ ಚೆಂದಿರನು ।
ಈತನ ನೋಡಲು ಈತನ ನುಡಿಸಲು ।
ಈತ ಗೋರಂಟ್ಲಯ ಚೆನ್ನರಾಯ ।
ಪುರಂದರವಿಠಲ ಈತನ ಮಹಿಮೆ ಎಂತುಟೊ ! ॥ ೩ ॥

### ಅಟತಾಳ

ಮಾನವರಿಗೆ ದೇವತೆಗಳು ಒಡೆಯರು ।
ದೇವತೆಗಳಿಗೆಲ್ಲ ದೇವೇಂದ್ರ ಒಡೆಯ ।
ದೇವೇಂದ್ರಗೊಡೆಯ ಮಹಾದೇವ, ಮಹಾ- ।
ದೇವಗೊಡೆಯ ಬೊಮ್ಮ, ಬೊಮ್ಮಗೊಡತಿ ಲಕ್ಷ್ಮಿ ।
ದೇವಿಗೊಡೆಯನು ಗೋರಂಟ್ಲ ಚೆನ್ನರಾಯ ।
ಪುರಂದರವಿಠಲ ॥ ೪ ॥

### ಏಕತಾಳ

ಉರುಮೂರುತಿ ಉರುಕೀರುತಿ ।
ಉರುಕರ್ಮ ಉರುಕಲ್ಯಾಣ ।
ಉರು ಮಹಾಮಹಿಮ ಗೋರಂಟ್ಲನಿಲಯ ।
ಚೆನ್ನರಾಯ ಪುರಂದರವಿಠ್ಠಲ ॥ ೫ ॥

ಜತೆ

ಇನ್ನು ಸರಿಯುಂಟೆ ಈ ಗೋರಂಟ್ಲಿಯ ।
ಚೆನ್ನರಾಯ ಪುರಂದರವಿಠಲಗೆ ॥

## ೧೩೫

### ಸುಳಾದಿ

ಧ್ರುವತಾಳ

೧ ಕ್ಷೀರಸಾಗರದಲಿ ಹಾವಿನ ಹಾಸಿಗೆ—ಓಜೆಯೊಳ್
ಒರಗಿಪ್ಪ ಎನ್ನೊಡೆಯ ।
ಹಾರ ಮುಕುಟ ಕುಂಡಲ ಪೀತಾಂಬರಧಾರಿಯಾಗಿಹ
ಎನ್ನೊಡೆಯ ।
ನಾರದ-ಗರುಡ-ಗಂಧರ್ವರ ಗಾನದಿ ಓರಂತೆ ಸುಖಿಸುವ
ಎನ್ನೊಡೆಯ ।
ಮಾರ ಚಾಮರಗಳ ಢಾಳಿಸುತಿರಲು ।
ಮಾರುತಿ ಕಂಬಿವಿಡಿದು ನಿಲ್ಲಲು ।
ನೀರಜಾಲಯೆ ತಾನಡಿಗಳನೊತ್ತಲು ಉ- ।
ದಾರ ದೇವರ ದೇವನೊಲುಮೆಯಿಂದ ।
ಕಾರುಣ್ಯಸುಧೆಯನು ಸುರಿಯೆ ಭಕ್ತರ ಮೇಲೆ ।
ಭೂರಮಣನೆ ಪುರಂದರವಿಠಲರಾಯ ॥ ೧ ॥

ಮಟ್ಟೆತಾಳ

ಇಂದ್ರನೀಲಾಚಲದಲಿ ಇಂದ್ರಚಾಪ ಮೂಡಿದಂತೆ ।
ಕುಂದಕುಸುಮಸಂಗದಲ್ಲಿ ಚಂದ್ರಕಾಂತಿಗಳೆಸೆಯೆ
ತುಲಸೀಮಾಲೆಗಳೆಸೆಯೆ ।

೧ ಇ (ಮುದ್ರಿತ) ಜ ೧, ಜ ೨ ಪ್ರತಿಗಳಿಂದ ಆರಿಸಿದೆ.

ಕುಂದಕುಸುಮನಂಗದಲ್ಲಿ.... .... ।
ಮಂದಗಮನ ಗರುವರೇಯ ಉಪೇಂದ್ರ
ಪುರಂದರವಿಠಲ ॥ ೨ ॥

ತ್ರಿವುಡೆತಾಳ

ನೀಲಮೇಘಶ್ಯಾಮ ನಿನ್ನ ಬಾಲಭಾಸ್ಕರ ವರ್ಣ ಉಡು- ।
ಪಾಲಯ ಕೋಟಿಪ್ರಕಾಶವೊ ದೇವಾ ।
ಕೇಳಬಲ್ಲೆ ಅನೇಕ ವರ್ಣದಿಂದ ಓಲಗಿಪ
ಪುರಂದರವಿಠಲದೇವ ಕೇಳಬಲ್ಲೆ ॥ ೩ ॥

ಅಟತಾಳ

ನಿಚ್ಚಮಂಗಳ ನಿಧಿ ನೀನೆಂದು ।
ಸಚ್ಚಿದಾನಂದ ಸ್ವರೂಪ ನೀನೆಂದು ।
ಅಚ್ಯುತಾನಂತ ಗೋವಿಂದ ನೀನೆಂದು ।
ಮೆಚ್ಚಿದೆ ನಾ ನಿನ್ನ ಚರಣವ ಇಂದು ।
ಅಚ್ಚ ಸಕಲ ಲೋಕಕ್ಕಧಿದೈವ ನೀನೆಂದು ।
ಲಚ್ಚುಮಿಾಪತಿ ಪುರಂದರವಿಠಲ ನೀನೆಂದು ॥ ೪ ॥

ರೂಪಕತಾಳ

ಲೋಕದ ಮಾನವರೆಲ್ಲ ನಿರಾಕಾರನೆಂದೆನಲು ನಮ- ।
ಗೇಕೋ ವಾದ ವಿವಾದ ಬರಿದೆ ಕಾಕರ ಕಣದೊಳಗೆ ।
ಸಾಕಾರನನರಿಯದ ಮೂಢಾಕಾರರ ಕೂಡೆ ನಮ- ।
ಗೇಕೊ ವಾದ ನಮಗಿದೇಕೊ ವಾದ ।
ಏಕೋವಿಷ್ಣುವೆಂಬ ಪುರಂದರವಿಠಲ ನೀನಿರಲು ॥ ೫ ॥
ನಮಗಿನ್ನೇಕೊ ವಾದ ... ....

ಆದಿತಾಳ

ಎನಗೊಬ್ಬ ಒಡೆಯ ದೊರಕಿದ ದೊರಕಿದ ।
ಸಿದ್ಧಾಯವನೀವ ಕಟ್ಟಳೆ-ಕಂದಾಯವನೀವ ।

ಬೇಡಿದ ಉಚಿತವ ನಮಗವನೀವ ।
ಎನಗೊಬ್ಬ ಒಡೆಯ ದೊರಕಿದ ।
ಕಷ್ಟ-ನಷ್ಟಗಳಿಲ್ಲ ಒದೆ-ಜಡಿತಗಳಿಲ್ಲ ।
ಎನ್ನ ಮನಬಂದಂತೆ ಓಲೈಸುವೆನು ।
ಎನ್ನ ಮನಬಂದಾಗ ಓಲೈಸಿಕೊಂಬ ।
ಕೇಡಿಲ್ಲದೊಡೆಯ ಪುರಂದರವಿಠಲ
ಎನಗೊಬ್ಬ ಒಡೆಯ ದೊರಕಿದ ॥ ೬ ॥

ಝಂಪೆತಾಳ

ದೇವ ದೇವಕಿನಂದ ದೇವೋತ್ತಮ ಗೋವಿಂದ ।
ಗೋವರ್ಧನಗಿರಿಧರ ಧರಣೀಧರ ।
ಜೀವಬಿಂಬ ಪುರಂದರವಿಟ್ಠಲ ಓವು ನನ್ನಯ್ಯ ದೇವ ॥ ೭ ॥

ಜತೆ (ಮೂರ್ಛನೆ)

ಮನವಚನ ಕಾಯಕದಿಂದ ನಿನ್ನನೆ ನೋಡಿ ।
ಅನುದಿನ ನೆನೆವೆ ನಾನು ಪುರಂದರವಿಠಲ ॥

೧೩೬

ಸುಳಾದಿ

ಧ್ರುವತಾಳ

೧ ಕ್ಷೀರಾಂಬುಧಿಯೊಳಿಹ ವಿಷ್ಣುವು ನೀನು ।
ದೇವಕೀಜಠರದೊಳಿಹುದೇನಾಶ್ಚರ್ಯ ।
ಅನಂತಾಸನದಲ್ಲಿ ಅನಂತನು ನೀನು ।
ದೇವಕೀಜಠರದೊಳಿಹುದೇನಾಶ್ಚರ್ಯ ।

೧ ಇ (ಮುದ್ರಿತ) ಪ್ರತಿಯೊಂದರಲ್ಲಿಯೆ ಈ ಸುಳಾದಿ ಇದೆ.
ಅಪೂರ್ಣವಿರುವಂತೆ ತೋರುತ್ತಿದೆ.

ವಿಶ್ವವ್ಯಾಪಕ ನೀನು ವಿಷ್ಣುವೆ ನೀನು ।
ಅಪ್ರಾಕೃತ ಅಪ್ರಮೇಯ ನಿರ್ವೀರ್ಯ ನೀನು ।
ಭಕ್ತರ ಪರಾಧೀನ ನೀನಾದೆಯಲ್ಲೊ ।
ಗೋರಂಟ್ಲ ಚೆನ್ನರಾಯ ಪುರಂದರವಿಠಲ ॥ ೧ ॥

ಮಟ್ಟೆ ತಾಳ

ಅರಸೆ, ಇದು ಅರಮನೆಯಂತೆ ನೋಡಾ ।
ಹರಿ ನೀ, ದೇವಕಿಯ ಜಠರದೊಳಿರ್ದೆಯೆಂದು ।
ದೇವಕಿಯ ಜಠರ ವೈಕುಂಠ ನೋಡಾ ।
ಗೋರಂಟ್ಲ ಚೆನ್ನರಾಯ ಪುರಂದರವಿಠಲ ॥ ೨ ॥

ತ್ರಿವುಡೆ ತಾಳ

ವಾಸುದೇವ, ಗರ್ಭವಾಸವ ಮಾಡಿದ ನೋಡಾ ।
ಹಾಸುಮಂಚ ಶೇಷ, ಶ್ರೀಸತಿಯು ತೊಡೆಯಲ್ಲಿ ।
ಈಶನಿಗೆ ಗುರುವಾದನೀತ ।
ವಾಸವಾದಿಗಳು ಆಳುಗಳಯ್ಯ ।
ವಾಸುದೇವ ಗರ್ಭವಾಸವ ಮಾಡಿದ ನೋಡಾ ।
ಲೇಸು ಧಣಿ ಧಣಿ ಗೋರಂಟ್ಲ ಚೆನ್ನರಾಯ ।
ಪುರಂದರವಿಠಲ ॥ ೩ ॥

ಅಟತಾಳ

ಬೊಮ್ಮಾದಿ ದೇವರುಗಳು ।
ಬೊಮ್ಮಾಂಡದಲಿ ಚರಾಚರರು ।
ಚಾರಿವರಿವುತ್ತಲಿರಲು ।
ಬೊಮ್ಮಾಂಡವೊಂದೆ ಬೊಮ್ಮಸ್ವರೂಪ ।
ಗೋರಂಟ್ಲ ಚೆನ್ನರಾಯ ಪುರಂದರವಿಠಲ ॥ ೪ ॥

ಆದಿತಾಳ

ಆನಂದವೆ ಅರ್ಧಾಂಗಿಯಾಗೆ ।
ಗೋರಂಟ್ಲ ಚೆನ್ನರಾಯ ಪುರಂದರವಿಠಲ ॥ ೫ ॥

ಜತೆ

ಗರ್ಭವಾಸಿ ಗೋರಂಟ್ಲ ಚಿನ್ನರಾಯ ।
ಪುರಂದರವಿಠಲ ನಮೋ ನಮೋ ॥

## ೧೩೭

### ಸುಳಾದಿ

ಧ್ರುವತಾಳ

೧ ಆ ಪಾದವಾನಂದ ಆ ನಖವಾನಂದ ।
ಆ ಜಾನು ಆ ಜಂಘೆ ಆನಂದಮಯವಯ್ಯ ।
ಆ ಊರು ಆನಂದ ಆ ಕಟಿ ಆನಂದ ।
ಆ ನಾಭಿ ಆ ಕುಕ್ಷಿ ಆನಂದಮಯವಯ್ಯ ।
ಆ ಉರ ಆನಂದ ಆ ಭುಜವಾನಂದ ।
ಆ ಕಂಬುಗ್ರೀವ—ಮುಖ ಆನಂದಮಯವಯ್ಯ ।
ಆ ಶಿರೋರುಹಗಳು ಆನಂದಮಯವಯ್ಯ ।
ಅಸಂಖ್ಯ ಆನಂದ ಪುರಂದರವಿಠಲ ॥ ೧ ॥

ಮಟ್ಟತಾಳ

ಪಾವಕ-ಕೋಟಿಸೂರ್ಯರ ಪ್ರಭೆಯ ಸೋಲಿಸುವ ।
ದೇವಸಂಗಕಾಂತಿ ಆನಂದಮಯವಯ್ಯ ।
ದೇವರಾಟ್ ಶ್ರೀಪುರಂದರವಿಠಲ ॥ ೨ ॥

ತ್ರಿವುಡೆತಾಳ

ದಶಮಾತುರಗಳು ಆನಂದಮಯವಯ್ಯ ।
ಹೃಷೀಕೇಶನ ಏಕಾದಶ ಹೃಷೀಕ ಆನಂದಮಯವಯ್ಯ ।

---

೧ ಅ (II) ಇ (ಮುದ್ರಿತ) ಪ್ರತಿಗಳಿಂದ ಆರಿಸಿಕೊಂಡಿದೆ.

ಹಾವಭಾವ ಭ್ರೂವಿಲಾಸ ದೇವನಂಗ ಕಾಂತಿ
ಆನಂದಮಯವಯ್ಯ ।
ದೇವರಾಟ್ ಸಿರಿಪುರಂದರವಿಠಲ ॥ ೩ ॥

ಅಟತಾಳ

ಬೊಮ್ಮ ಬೊಮ್ಮ ಬೊಮ್ಮ ಶ್ರೀಹರಿಯ ।
ಕರ್ಮವಾನಂದ ಕರಣಗಳಾನಂದ ।
ಹಮ್ಮು ಆನಂದ ಹಾಸ್ಯವಾನಂದ ।
ಕಂಗಳಾನಂದ ನಮ್ಮ ಪುರಂದರವಿಠ್ಠಲರಾಯನ ।
ದಿವ್ಯ ಕೋಪವಾನಂದ ॥ ೪ ॥

ಏಕತಾಳ

ಆನಂದವರ್ಧಾಂಗಿ ಆನಂದನ ಕುಮಾರ ।
ಆನಂದಮೂರುತಿಯ ಅಗಲದೆ ಇರಿರೊ ।
ಆನಂದ ಆನಂದ ಪರಮಾನಂದ ।
ಪರಮಾನಂದ ಪುರಂದರವಿಠಲ ॥ ೫ ॥

ಜತೆ

ಜ್ಞಾನ ವಿಜ್ಞಾನ ಸುಗಂಧ ಸುಖದೇಹ ।
ಆನಂದಮಯವಯ್ಯ ಪುರಂದರವಿಠಲನ ಅವಯವಗಳೆಲ್ಲ ॥

೧೩೮

ಗದ್ಯ

೧ ಅನಂತಕೋಟಿ ಬ್ರಹ್ಮಾಂಡನಾಯಕ,
ರಮಾಬ್ರಹ್ಮರುದ್ರೇಂದ್ರಾದಿ ವಂದ್ಯ,
ಭಕ್ತವತ್ಸಲ, ಭವರೋಗವೈದ್ಯ,

೧ ಶ್ರೀ ಪ್ರತಿಯಿಂದ ತೆಗೆದುಕೊಳ್ಳಲಾಗಿದೆ.

ಶರಣಾಗತವಜ್ರಪಂಜರ,
ಆಪತ್ಕಾಲಬಾಂಧವ, ಅನಾಥಬಂಧೋ,
ಅನಿಮಿತ್ತಬಂಧೋ, ದೀನಬಂಧೋ, ದಯಾಸಿಂಧೋ,
ಪತಿತಪಾವನ, ಮಹಾರೋಗನಿವಾರಣ,
ಮಹಾಭಯನಿವಾರಣ, ಮಹಾಬಂಧವಿಮೋಚನ,
ಮಹಾಪಾತಕನಾಶನ, ಅಷ್ಟದಾರಿದ್ರ್ಯಕಷ್ಟನಾಶನ,
ಅವ್ಯಾಹತ ಷಡ್ಗುಣೈಶ್ವರ್ಯಸಂಪನ್ನ,
ಅನಂತಾದಿಗುಣಪರಿಪೂರ್ಣ, ಅಶೇಷದೋಷಾಪಹರ್ತ,
ಅಘಟಿತಘಟನಾಸಮರ್ಥ, ಆದಿಮಧ್ಯಾಂತರಹಿತ,
ಅಕ್ಷರಾದ್ವಿತೀಯ, ಅನಘ, ಆದಿನಾರಾಯಣ,
ಅನಂತವೇದಪ್ರತಿಪಾದ್ಯ,
ಅನಂತಕೋಟಿಮನ್ಮಥಲಾವಣ್ಯ,
ಅಪ್ರಾಕೃತರಸಭೋಕ್ತ, ಅಷ್ಟೈಶ್ವರ್ಯಪ್ರದಾತ,
ಓಂಕಾರಶಬ್ದವಾಚ್ಯ, ಅಣುಮಹದ್ರೂಪ,
ಶಂಖ-ಚಕ್ರ-ಪೀತಾಂಬರಧರ, ಚಕ್ರಪಾಣಿ,
ವೈಜಯಂತೀ-ವನಮಾಲಾಶೋಭಿತ,
ಕೌಸ್ತುಭಾಭೂಷ, ನವರತ್ನಕುಂಡಲಧಾರಿ,
ಕಸ್ತೂರಿ-ಶ್ರೀಗಂಧಲೇಪನ,
ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ,
ಶೇಷಶಾಯಿ, ಕ್ಷೀರಾಬ್ಧಿಶಾಯಿ, ವಟಪತ್ರಶಾಯಿ,
ಖಗವಾಹನ, ದೇಶಕಾಲಗುಣಾತೀತ,
ಅನಂತಬಾಹು, ಅನಂತಕೀರ್ತಿ,
ಸರ್ವಾನಂತ, ಪರಮಪುರುಷೋತ್ತಮ,
ಅಕ್ರೂರವರದ, ಅಂಬರೀಷವರದ, ಪ್ರಹ್ಲಾದವರದ,
ಧ್ರುವವರದ, ವಿಭೀಷಣವರದ, ಮುಚಕುಂದವರದ,
ಗಜೇಂದ್ರವರದ, ಪರಾಶರವರದ, ಪುಂಡರೀಕವರದ,
ದ್ರೌಪದೀಅಭಿಮಾನರಕ್ಷಕ, ಅಹಲ್ಯಾಶಾಪವಿಮೋಚಕ,

ದುಷ್ಟಜನಮರ್ದನ, ವಿಶಿಷ್ಟಜನಪರಿಪಾಲ,
ಮುಕುಂದಾ, ಮುರಾರಿ, ಕಂಸಾರಿ, ಅಸುರಾರಿ,
ದೈತ್ಯಕುಲಸಂಹಾರಿ, ಕ್ಷಾತ್ರಕುಲಾಂತಕ,
ಸೋಮಕಅಸುರಾಂತಕ, ಹಿರಣಾಕ್ಷ-ಹಿರಣ್ಯಕಶಿಪುಸಂಹಾರಿ,
ರಾವಣ-ಕುಂಭಕರ್ಣವಿಮರ್ದನ,
ಶಿಶುಪಾಲ-ದಂತವಕ್ರಶಿರಚ್ಛೇದನ,
ರಘುಕುಲೋದ್ಭವ, ರಘುಕುಲತಿಲಕ,
ರಘುಕುಲೋತ್ಪನ್ನ, ಸಿಂಧುಬಂಧನ,
ಸೀತಾಪತೇ, ಶ್ರೀರಾಮಚಂದ್ರ,
ಯದುಕುಲೋದ್ಭವ, ಯದುಕುಲತಿಲಕ,
ಯದುಕುಲೋದ್ಧಾರಿ, ಯದುಕುಲೋತ್ಪನ್ನ,
ವಸುದೇವ-ದೇವಕೀನಂದನ,
ಯಶೋದಾ-ನಂದಗೋಪಕುಮಾರ,
ವೃಂದಾವನ-ಗೋಕುಲ-ದ್ವಾರಕಾವಾಸ,
ಗೋವರ್ಧನೋದ್ಧಾರ, ಕಾಲಿಯಮರ್ದನ,
ಪೂತನಾಪ್ರಾಣಾಪಹಾರಿ, ಶಕಟಾಸುರಮರ್ದನ,
ಪಾಂಡವಬಂಧೋ, ಪಾಂಡವ ಪ್ರತಿಪಾಲ,
ಪಾರ್ಥಸಾರಥಿ, ಪಾಪವಿದೂರ,
ಗಜಹನನಪ್ರಚಂಡ, ಚಾಣೂರಮಲ್ಲನಾಶ,
ಸುದಾಮಸಖ, ರುಕ್ಮಿಣೀವಲ್ಲಭ,
ಸತ್ಯಭಾಮಾಪ್ರಿಯ, ಗೋಪೀಜನಜಾರ,
ನವನೀತಚೋರ, ಗೋಪಾಲಕೃಷ್ಣ,
ಗಂಗಾಜನಕ, ಪ್ರಯಾಗಮಾಧವ,
ಕಾಶೀಬಿಂದುಮಾಧವ, ಪಂಪಾಪತಿಗುಲಗಂಜಿಮಾಧವ,
ರಾಮೇಶ್ವರ ಸೇತುಮಾಧವ, ಬದರೀನಾರಾಯಣ,
ಶ್ರೀರಂಗನಾಥ, ಒಡ್ಡಿಜಗನ್ನಾಥ,
ಉಡುಪಿಯ ಕೃಷ್ಣ, ಚೆಲ್ಲೆಪಿಲ್ಲೆರಾಯ,

ಬೇಲೂರ ಚೆನ್ನಿಗರಾಯ, ಪಾಂಡುರಂಗವಿಠಲ,
ಶ್ರೀಶೈಲ ಅರುಣಾಚಲ-ವೃಷಾಚಲನಿವಾಸ,
ಅನಂತಶಯನ, ದರ್ಭಶಯನ, ಕಪಿಲ, ಹಯಗ್ರೀವ,
ದತ್ತಾತ್ರೇಯ, ಹಂಸನಾಮಕ, ಧನ್ವಂತರಿ,
ವೃಷಭ, ಮಹೀದಾಸ, ಯಜ್ಞನಾಮಕ, ಮಮಸ್ವಾಮಿ,
ಸರ್ವಾಂತರ್ಯಾಮಿ, ಶ್ರೀಶ,
ವಾಣೀಶ, ದ್ವಿಜ-ಫಣಿಪ-ಮೃಡೇಶ, ಶ್ರೀರಮಣ,
ಭೂರಮಣ, ಲಕ್ಷ್ಮೀರಮಣ, ಅಲಮೇಲುಮಂಗರಮಣ,
ಇಂದಿರಾರಮಣ, ಲಕ್ಷ್ಮೀರಮಣ ಶ್ರೀವೆಂಕಟರಮಣ,
ಜಗದ್ರಕ್ಷಕ, ಜಗತ್ಪಾವನ, ಜಗದ್ಗುರುವೆ,
ಪುರಂದರವಿಠಲ, ಸಾಕ್ಷಾತ್ ಮನ್ಮಥಮನ್ಮಥ !

## ೧೩೯

### ನರಸಿಂಹ ಸುಳಾದಿ

#### ಧ್ರುವತಾಳ

೧ ಅಂಜುವೆ ನಾನೀ ಸಿಂಗದ ಮೊಗದವ
ಹುಂಕರಿಸುವೆ ಮೊರೆದೊಮ್ಮೊಮ್ಮೆ ।
ಅಂಜುವೆ ನಾನೀ ಕೋಪಾಟೋಪದವ
ಗುಡಿಗುಡಿಸುವೆ ಮೊರೆದೊಮ್ಮೊಮ್ಮೆ ।
ಅಂಜುವೆ ನಾನೀ ಕಿವಿಯ ಮೇಳವಿಸಿ
ಮೇಲ್ಕವಿದೆರಗುವೆ ಮೊರೆದೊಮ್ಮೊಮ್ಮೆ ।
ಅಂಜುವೆ ನಾನೀ ಕುಡುದಾಡೆಗಳ
ಕಿಡಿಕಿಡಿ ಕಿಡಿಗೆದರಿಸುವೆ ಮೊರೆದೊಮ್ಮೊಮ್ಮೆ ।

೧ ಅ (II) ಜ (೨) ಝ (ಮುದ್ರಿತ) ಓ (ಮುದ್ರಿತ) ಪ್ರತಿಗಳಿಂದ ಆರಿಸಿ ಕೊಂಡಿದೆ.

ಅಂಜುವೆ ನಾನೀ ತೆರವಾಯ ತೆರೆಯುತ
ಗಹಗಹಿಸುವೆ ಮೊರೆದೊರ್ಮ್ಮೊಮ್ಮೆ ।
ಅಂಜುವೆ ನಾನೀ ಸಿರಿಮುದ್ದು ನರಸಿಂಹ
ಪುರಂದರವಿಠಲ ನೀನು ಉರಿಮೋರೆದೈವವೆ ಅಂಜುವೆ ||೧||

**ಮಟ್ಟತಾಳ**

ಹಿರಣ್ಯಕಶಿಪುವಿನ ಉದರವ ಬಗಿದಬಳಿಕ
ಕರುಳುಮಾಲೆಯ ಕಿತ್ತು ಕೊರಳಲಿಕ್ಕಿದಬಳಿಕ ।
ಉರಿಯನುಗುಳಲೇತಕೆ ಸಿರಿಯ ಸುಡಿಸಲೇತಕೆ ।
ಹರ-ಬೊಮ್ಮಾದಿಗಳನ್ನು ಸರಕುಮಾಡಲೇತಕೆ ।
ಸಿರಿಮುದ್ದು ನರಸಿಂಹ ಪುರಂದರವಿಟ್ಠಲ
ಪ್ರಹ್ಲಾದದೇವ ಬಂದರೆ ಕರೆದು ಮುದ್ದಾಡಲೇತಕೆ ||೨||

**ತ್ರಿವುಡೆತಾಳ**

ಅಟ್ಟಹಾಸಕಬುಜಜಾಂಡಕಟ್ಟಾಹ ಪ್ರತಿಧ್ವನಿಗೊಡುತಲಿದೆ ।
ಮೆಟ್ಟದಿಳೆ ತಲೆ ಕೆಳಗಾಗುತಲಿದೆ ।
ಬೆಟ್ಟಗಳೈಸೂ ಉರುಳುರುಳಿ ಬೀಳುತಿವೆ ।
ದಿಟ್ಟ ಮುದ್ದು ನರಸಿಂಹ ಪುರಂದರವಿಟ್ಠಲನೆ
ಕಟ್ಟರಸು ಕಾಣಿರೊ || ೩ ||

**ಅಟತಾಳ**

ಉರಿಸಾಗರಗಳ ಸುರಿದು ನಾಲಗೆ ನೀಡೆ ।
ಚರಾಚರಂಗಳು ಚಾರಿವರಿವುತಲಿತ್ತು ।
ಬ್ರಹ್ಮಾಂಡವಂದೇ ಸಿಡಿದುಹೋಗುತಿತ್ತು ।
ಬ್ರಹ್ಮಪ್ರಳಯವಂದೇ ಆಗಿಹೋಗುತಿತ್ತು ।
ಸಿರಿಮುದ್ದು ನರಸಿಂಹ ಪುರಂದರವಿಟ್ಠಲ ।
ಪ್ರಹ್ಲಾದದೇವ ಬಂದು ನಿಲಿಸದಿದ್ದಡೆ ।
ಬ್ರಹ್ಮಾಂಡವಂದೇ ಸಿಡಿದುಹೋಗುತ್ತಿತ್ತು || ೪ ||

ಏಕತಾಳ

ಹಿರಣ್ಯಕಶಿಪುವಿನುದರವ ಬಗಿದುಗುರಲಿ ।
ಸರಸವಾಡಿದಿರಾ ಮೈಮುಟ್ಟಿ ಸರಸವಾಡಿದಿರಾ ।
ಸಿರಿಮುದ್ದು ನರಸಿಂಹ ಪುರಂದರವಿಟ್ಠಲ ।
ಸರಸವಾಡಿದಿರಾ? ॥ ೫ ॥

ಜತೆ (ಮೂರ್ಛನಾ)

ಸಿರಿಮುದ್ದು ನರಸಿಂಹ ಪುರಂದರವಿಟ್ಠಲ ।
ಶರಣ ಪ್ರಹ್ಲಾದಸಂರಕ್ಷಕ ಜಯಜಯ ॥

## ೧೪೦

## ಮಾಹಾತ್ಮ್ಯಸುಳಾದಿ

ಧ್ರುವತಾಳ

೧ ಅಣುವಾಗಬಲ್ಲ ಮಹತ್ತಾಗಬಲ್ಲ,
ಅಣುಮಹತ್ತೆರಡೊಂದಾಗಬಲ್ಲ ।
ರೂಪವಾಗಬಲ್ಲ ಅರೂಪವಾಗಬಲ್ಲ,
ರೂಪ-ಅರೂಪವೆರಡೊಂದಾಗಬಲ್ಲ ।
ವ್ಯಕ್ತನಾಗಬಲ್ಲ ಅವ್ಯಕ್ತನಾಗಬಲ್ಲ,
ವ್ಯಕ್ತ ಅವ್ಯಕ್ತ ಎರಡೊಂದಾಗಬಲ್ಲ ।
ಸಗುಣನಾಗಬಲ್ಲ ನಿರ್ಗುಣನಾಗಬಲ್ಲ,
ಸಗುಣ-ಸಿರ್ಗುಣ ಎರಡೊಂದಾಗಬಲ್ಲ ।
ಅಘಟಿತಘಟಿತ ಅಚಿಂತ್ಯಾದ್ಭುತಮಹಿಮ ।
ಸ್ವಗತಭೇದವಿವರ್ಜಿತ ಪುರಂದರವಿಠಲ ॥ ೧ ॥

---

೧ ಅ (II) ಇ (ಮುದ್ರಿತ) ಎ ಪ್ರತಿಗಳಿಂದ ಆರಿಸಿಕೊಂಡಿದೆ.

ಮಟ್ಟತಾಳ

ಕಣ್ಣಲಿ ಕೇಳ್ವ ಕಾಂಬ ಅರಿವ, ಆಘ್ರಾಣಿಸುವ ಆಸ್ವಾದಿಸುವ ।
ರಸನದಿ ಕೇಳ್ವ ಕಾಂಬ ಅರಿವ, ಆಘ್ರಾಣಿಸುವ ಆಸ್ವಾದಿಸುವ ।
ಸ್ಪರುಶದಿ ಕೇಳ್ವ ಕಾಂಬ ಅರಿವ, ಆಘ್ರಾಣಿಸುವ ಆಸ್ವಾದಿಸುವ।
ಶ್ರವಣದಿ ಕೇಳ್ವ ಕಾಂಬ ಅರಿವ, ಆಘ್ರಾಣಿಸುವ ಆಸ್ವಾದಿಸುವ।
ಘ್ರಾಣದಿ ಕೇಳ್ವ ಕಾಂಬ ಅರಿವ, ಆಘ್ರಾಣಿಸುವ ಆಸ್ವಾದಿಸುವ।
ಲೋಕವಿಲಕ್ಷಣ ದಿವ್ಯಕರಣ ಲೋಕಕೆ ಆಶ್ಚರ್ಯ
ಪುರಂದರವಿಠಲ ॥ ೨ ॥

ತ್ರಿವುಡೆತಾಳ

ಆವಾವ ಯುಗದಲ್ಲಿ ವಿಷ್ಣು ವ್ಯಾಪಕನಾಗಿ
ಆ ವಿಷ್ಣುವಿಂದಲೆ ವಿಷ್ಣುಲೋಕ ತಾನಿಪ್ಪುದಾಗಿ ।
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ
ಸಾರಿಷ್ಣ ಎಂಬುದು ವಿಷ್ಣುವಿನಲ್ಲಿಪ್ಪುದಾಗಿ ।
ನಮ್ಮ ಪುರಂದರವಿಟ್ಠಲ ಬೊಮ್ಮಭರಿತ
ಪಂಚವಿಧಮುಕುತಿದಾಯಕನು ॥ ೩ ॥

ಅಟತಾಳ

ಮೋದ ದಕ್ಷಿಣಪಕ್ಷ ಪ್ರಮೋದ ಉತ್ತರಪಕ್ಷ ।
ಆನಂದ ಆತುಮ ಆನಖ ಆಪಾದ ।
ಅಪ್ರಾಕೃತವಿಗ್ರಹ ನಮ್ಮ ಪುರಂದರವಿಠಲ ॥ ೪ ॥

ಏಕತಾಳ

ನಾರಾಯಣ ಪರಬ್ರಹ್ಮ ಶ್ವೇತತನೂರುಹ ಬಲಭದ್ರಗಡ ।
ಕೃಷ್ಣತನೂರುಹ ಕೃಷ್ಣಗಡ ।
ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ನಾರಾಯಣ
ಹರೇ ।
ಶ್ವೇತತನೂರುಹ ಪುರಂದರವಿಠಲ ॥ ೫ ॥

ಜತೆ

ನಮೋನಮೋ ವಾಗೀಶಾ ಈಶ ಸರ್ವೇಶ ।
ನಮೋನಮೋ ಪುರಂದರವಿಠಲ ಶೇಷಶಯ್ಯ ॥

೧೪೧

ಸುಳಾದಿ

ಧ್ರುವತಾಳ

೧ ಅಚ್ಯುತಾನಂತ ಗೋವಿಂದ ಮುಕುಂದ ।
ವಾಮನ ವಾಸುದೇವ ನಾರಾಯಣ ಹರಿ- ।
ಸಚ್ಚಿದಾನಂದಸ್ವರೂಪ ಗೋಪಾಲ ಪುರುಷೋತ್ತಮ ।
ಪರಂಧಾಮ ನಾರಾಯಣ ।
ಮತ್ಸ್ಯ ಕೂರ್ಮ ವರಾಹ ನಾರಸಿಂಹ ವಾಮನ ।
ಭಾರ್ಗವ ರಾಮ ಶ್ರೀಕೃಷ್ಣ ಬೌದ್ಧ ಕಲ್ಕಿ ।
ಅವತಾರ ಅನಂತಾವತಾರ ನಾರಾಯಣ ।
ಹರಿ ಅಚ್ಯುತಾನಂತ ಗೋವಿಂದ ।
ಅಪಾರಮಹಿಮ ಶ್ರೀನಾರಾಯಣ ಅಹೋ- ।
ಸರ್ಪಶಯನನೆ ನಾರಾಯಣ ।
ಶ್ರೀಪುರಂದರವಿಠಲ ವಿಭುವೆ ತಿರುವೆಂಗಳಪ್ಪ ।
ಎನ್ನಪ್ಪ ನೀ ನಾರಾಯಣ ॥ ೧ ॥

ಮಟ್ಟತಾಳ

ಮಂಗಳಾಂಗ ನಿನ್ನಂಗಪಟ್ಟದಲ್ಲಿ ಸಂಗಸುಖಿಸಿಪ್ಪಳವ್ವೆ ನಿ- ।
ನ್ನಂಗನೆಯು ಲಚುಮವ್ವೆ ಕೆಂಬರಳಾಗಿಪ್ಪಳವ್ವೆ ।

೧ ಜ (೧) ಪ್ರತಿಯಲ್ಲಿ ಲುಪ್ತವಾಗಿದೆ. ೨ (ಮುದ್ರಿತ) ದಲ್ಲಿ ಅಸಂಬದ್ಧವಾಗಿದೆ.

ಬಂಗಾರವಾಗಿಪ್ಪಳವ್ವೆ ಶೃಂಗಾರವಾಗಿಪ್ಪಳವ್ವೆ ।
ರಂಗ ಶ್ರೀಪುರಂದರವಿಠಲ ನಿನ್ನನೊಲಿದು ॥ ೨ ॥

ತ್ರಿವುಡೆ ತಾಳ

ಉಟ್ಟದಟ್ಟಿ ಕಟ್ಟಿದ ಕಠಾರಿ ತೊಟ್ಟಂಬು ತೋರಗದೆ ತೋಮರ।
ಮೆಟ್ಟಿದ ತಡಿಕೆರವಿನ ಹೆಜ್ಜೆ ಕಟ್ಟಿದ ಕಾಲುಗೆಜ್ಜೆ ಶ್ರೀವತ್ಸ ।
ಸೃಷ್ಟಿರಕ್ಷಕ ಪುರಂದರವಿಠಲ ಬೆಟ್ಟದ ತಿರುವೆಂಗಳಪ್ಪಗೆ
ನಮೋ ನಮೋ ॥ ೩ ॥

ಅಟತಾಳ

ಇದೆ ದನುಜಮರ್ದನ ಚಕ್ರಹಸ್ತ-ಮ- ।
ತ್ತಿದೆ ವೇದನುತ ಶಂಖಹಸ್ತ ।
ಇದೆ ಈರೇಳು ಜಗವನೊಲಿದಿಂಬಿಟ್ಟು ಮೆರೆವ ಹಸ್ತ ।
ಇದೆ ಇದೆ ವೈಕುಂಠವೆಂದು ತೋರುವ ಹಸ್ತ ।
ಇದೇ ಪುರಂದರವಿಠಲನಿದ್ದಿರವು ಮ- ।
ತ್ತಿದೇ ತಿರುವೆಂಗಳಪ್ಪನ ಮೂರುತಿ ಇದೆ ॥ ೪ ॥

ಆದಿತಾಳ

ಕಿರೀಟ-ಕುಂಡಲಧರನ ಕಂಡೆ ।
ಹಾರಮಣಿಭೂಷಣನ ಕಂಡೆ ।
ಸಿರಿಯಿಪ್ಪ ವಕ್ಷಸ್ಥಳವ ನಾ ಕಂಡೆ ।
ವರಾಂಬರನ ಕಂಡೆ ವರದೇಶನ ಕಂಡೆ ।
ತಿರುಮಲಗಿರಿಯಲಿ ಸಿರಿಪುರಂದರವಿಠಲನ ।
ಇರವ ನಾ ಕಂಡೆ ಚೆಲುವನ ನಾ ಕಂಡೆ ॥ ೫ ॥

ಜತೆ ( ಮೂರ್ಚ್ಛನೆ )

ತಿರುವೆಂಗಳಪ್ಪ ಪುರಂದರವಿಠಲ ।
ನೆರೆನಂಬಿದೆನೊ ನಿನ್ನ ಚರಣಕಮಲವ ॥

## ೧೪೨

ರಾಗ—ಮೋಹನ ತಾಳ—ಆದಿ

೧ ವೈದ್ಯ ಬಂದ ನೋಡಿ—ವೆಂಕಟನೆಂಬ ।
ವೈದ್ಯ ಬಂದ ನೋಡಿ ‖ ಪ ‖

ವೈದ್ಯ ಬಂದನು ವೇದವೇದ್ಯ ನೋಡೀಗಲೆ ।
ಶ್ರೀದೇವೀರಮಣನು ಶ್ರೀನಿವಾಸನೆಂಬ ‖ ಅ ಪ ‖

ಎಷ್ಟು ದಿನದ ರೋಗಗಳೆಂಬುದ ಬಲ್ಲ ।
ಗಟ್ಟಿಯಾಗಿ ಧಾತುರಸಗಳನು ಬಲ್ಲ ‖
ಕಷ್ಟಬಡಿಸದಲೆನ್ನ ಭವರೋಗ ಬಿಡಿಸುವ ।
ಶಿಷ್ಟವಾದ ದೇಹ ಕೊಟ್ಟು ಕಾಯುವನಿವ ‖ ೧ ‖

ಹೊನ್ನು-ಹಣಂಗಳ ಅನ್ನವ ಅನುಸರಿಸಿ ।
ತನ್ನ ದಾಸನೆಂಬ ನಿಜವ ನೋಡಿ ‖
ಚೆನ್ನಾಗಿ ಜಿಹ್ವೆಗೆ ಸ್ವಾದವಾಗಿರುವಂಥ ।
ತನ್ನ ನಾಮಾಮೃತ ದಿವ್ಯ ಔಷಧವೀವ ‖ ೨ ‖

ಈತ ದಿಟ್ಟಿಸಿ ನೋಡೆ ಎಳ್ಳಷ್ಟು ರೋಗವಿಲ್ಲ ।
ಈ ತನುವಿಗೆಂದೆಂದು ರೋಗಬರಲರಿಯದು ‖
ಈತ ಅನಂತರೂಪದಿ ಜೀವರಿಗೆ ಮುನ್ನ ।
ಪ್ರೀತಿಯಿಂದಲಿ ಭವರೋಗ ಬಿಡಿಸುವ ‖ ೩ ‖

ಧರ್ಮವೈದ್ಯನಿವ ಜಗಕೆಲ್ಲ ಒಬ್ಬನೆ ।
ಮರ್ಮ ಬಲ್ಲ ರೋಗಜೀವಂಗಳ ‖
ನಿರ್ಮಲವಾಗಿಹ ತನ್ನ ನಾಮಸ್ಮರಣೆ ।
ಒಮ್ಮೆ ಮಾಡಲು ಭವರೋಗ ಬಿಡಿಸುವ ‖ ೪ ‖

೧ ಶ್ರೀ: ಪ್ರತಿಯಲ್ಲಿ ಮಾತ್ರ ಸಿಕ್ಕುತ್ತದೆ.

ಅನ್ಯ ವೈದ್ಯನೇಕೆ ಅನ್ಯ ಔಷಧವೇಕೆ ? ।
ಅನ್ಯ ಮಂತ್ರ-ತಂತ್ರ-ಜಪವೇತಕೆ ? ॥
ಚೆನ್ನಪುರಂದರವಿಠಲನ್ನ ನೆನೆದರೆ ।
ಮನ್ನಿಸಿ ಸಲಹುವ ವೈದ್ಯ ಶಿರೋಮಣಿ ॥ ೫ ॥

## ೧೪೩

ರಾಗ—ಪಂತುವರಾಳಿ ತಾಳ—ಅಟ

( ನಮ್ಮಿಚಿ )

೧ ಹೊಯ್ಯೆಲೊ ಡಂಗುರವ—ಜಗ- ।
ದಯ್ಯನಯ್ಯ ಶ್ರೀಹರಿ ಅಲ್ಲದಿಲ್ಲವೆಂದು ॥ ಪ ॥

ಅಷ್ಟೈಶ್ವರ್ಯದ ಲಕುಮಿಯ ಅರಸೆಂದು ।
ಸೃಷ್ಟಿ-ಸ್ಥಿತಿ-ಲಯಕರ್ತನೆಂದು ॥
ಗಟ್ಟಿಯಾಗಿ ತಿಳಿದು ಹರಿ ಎನ್ನದವರೆಲ್ಲ ।
ಭ್ರಷ್ಟರಾದರು ಇಹ-ಪರಕೆ ಬಾಹ್ಯರು ಎಂದು ॥ ೧ ॥

೨ ಹರಿಯೆಂಬ ಬಾಲನ ಹರಹರ ಎನ್ನೆಂದು ।
ಕರುಣವಿಲ್ಲದೆ ಪಿತ ಬಾಧಿಸಲು ॥
ತರಳನ ಮೊರೆ ಕೇಳಿ ನರಮೃಗರೂಪದಿ ।
ಹರಿಯ ನಿಂದಕನ ಸಂಹರಿಸಿದ ಮಹಿಮೆಯ ॥ ೨ ॥

ಕರಿ ಆದಿಮೂಲನೆ ಕಾಯೆಂದು ಮೊರೆಯಿಡೆ ।
ಸುರರನು ಕರೆಯಲು ಒಲ್ಲದಿರೆ ॥

---

೧ ಅ (೧೧) ಆ (II) ಝ (೧–೧೦) ನ ಪ್ರತಿಗಳಿಂದ ಆರಿಸಿಕೊಂಡಿದೆ.
೨ ಹರಹರಯೆನ್ನದೆ ಹರಿಯೆಂದ ಬಾಲನ (ಅ II).

೩ ಗರುಡನನೇರದೆ ಬಂದು ಮಕರಿಯ ಸೀಳ್ದು |
ಕರಿರಾಜನ ಕಾಯ್ದ ಪರದೈವ ಹರಿಯೆಂದು ||೩||

ಸುರಪಗೊಲಿದು ಬಲಿಯ ಶಿರವನೊದ್ದಾಗಲೆ |
ಸುರಸವು ಉದಿಸೆ ಶ್ರೀಹರಿಪಾದದಿ ||
ಪರಮೇಷ್ಠಿ ತೊಳೆಯಲು ಪವಿತ್ರೋದಕವೆಂದು |
ಹರ ತನ್ನ ಶಿರದಲ್ಲಿ ಧರಿಸಿದ ಮಹಿಮೆಯ ||೪||

ಮಾನಸಲಿಂಗಪೂಜೆಗೆ ಮೆಚ್ಚಿ ಶಿವ ಬಂದು |
ಬಾಣನ ಬಾಗಿಲ ಕಾಯ್ದಿರಲು |
ದಾನವಾಂತಕ ಸಾಸಿರ ತೋಳ ಕಡಿವಾಗ |
ಮೌನದಿಂದೊಪ್ಪಿಸಿಕೊಟ್ಟ ಶಿವನು ಎಂದು ||೫||

ಭಕ್ತಗೊಲಿದು ಭಸ್ಮಾಸುರಗೆ ಶಿವ ವರವಿತ್ತು |
ಭಕ್ತನ ಭಯದಿಂದ ಓಡುತಿರೆ ||
ಯುಕ್ತಿಯಿಂದಸುರನ ಸುಟ್ಟು ಶಿವನ ಕಾಯ್ದ |
ಶಕ್ತನು ಶ್ರೀಹರಿ ಅಲ್ಲದಿಲ್ಲವೆಂದು ||೬||

ಗರಳಜ್ವಾಲೆಗೆ ಸಿರಿರಾಮ-ರಾಮನೆಂದು |
ಸ್ಮರಿಸುತಿರಲು ಉಮೆಯರಸನಾಗ ||
ಕೊರಳು ಶೀತಲವಾಗೆ ಸಿತಿಕಂಠ ತನ್ನಯ |
ಗಿರಿಜೆಗೆ ರಾಮಮಂತ್ರವ ಕೊಟ್ಟ ಮಹಿಮೆಯ ||೭||

ಹರಬ್ರಹ್ಮ ಮೊದಲಾದ ಸುರರನು ದಶಶಿರ |
ಸೆರೆಹಿಡಿದು ಸೇವೆಯ ಕೊಳುತಿರಲು ||
ಶರಧಿಯ ದಾಟಿ ರಾವಣನ ಸಂಹರಿಸಿದ |
ಸುರರ ಲಜ್ಜೆಯ ಕಾಯ್ದ ಪರದೈವ ಹರಿಯೆಂದು ||೮||

---

೩ ಸಿರಿಗೆ ಹೇಳದೆ ಬಂದು ಮಕರಿಯ ಸೀಳ್ದು (ಅ II)

ಜಗದುದ್ಧಾರನು ಜಗವ ಪೊರೆವನೀತ ।
ಜಗ ಬ್ರಹ್ಮಪ್ರಳಯದಿ ಮುಳುಗಲಾಗಿ ॥
ಮಗುವಾಗಿ ಜಗವನುದ್ಧರಿಸಿ ಪವಡಿಸಿ ಮತ್ತೆ ।
ಜಗದ ಜನಕ ಪುರಂದರವಿಟ್ಠಲನೆಂದು ॥ ೯ ॥

## ೧೪೪

### ಉಗಾಭೋಗ

೧ ಇದೇ ಮುನಿಗಳ ಮನದ ಕೊನೆಯ ಠಾವು ।
ಇದೇ ಬ್ರಹ್ಮಾದಿಗಳ ಹೃತ್ಕಮಲಪೀಠ ।
ಇದೇ ದ್ವಾರಕೆ ಇದೇ ಕ್ಷೀರಾಂಬುಧಿ ।
ಇದೇ ಅರಿದ ಸುಜ್ಞಾನಿಗೆ ವೈಕುಂಠ ।
ಇದೇ ಪುರಂದರವಿಠಲನ ಮಂದಿರ ॥

## ೧೪೫

೨ ಕಮಲಜನು ನಿನ್ನ ಪಾದಕಮಲವನು ತೊಳೆದಿಹನು ।
ಉಮಾಪತಿಯು ನಿನ್ನ ಪಾದಜಲವ ಪೊತ್ತಿಹನು ।
ಯಮಜಮಾಡುವ ರಾಜಸೂಯಯಾಗದಲ್ಲಿ ।
ಮಮಕರಿಸಿದೆ ಎಂತೊ ಕಾಲ ತೊಳೆವ ಊಳಿಗವ ? ।
ಮಮಪ್ರಾಣಾ ಹಿ ಪಾಂಡವಾಃ ಎಂಬ ಬಿರುದಿಗಾಗಿ ।
ನಮೋ ನಮೋ ಎಂಬೆ ಪುರಂದರವಿಠಲ ॥

---

೧ ಆ (VI) ಘ (೩) ಪ್ರತಿಗಳಿಂದ ತೆಗೆದುಕೊಂಡಿದೆ.
೨ ಹ ಪ್ರತಿಯಲ್ಲಿ ದೊರಕುತ್ತಿದೆ.

## ೧೪೬

೧ ಸ್ತ್ರೀಯರಿಗೆ ಪುರುಷರು ಮೋಹಿಸುವರಲ್ಲದೆ ।
ಪುರುಷರನು ಪುರುಷರು ಮೋಹಿಸುವುದುಂಟೆ ? ।
ಪುರುಷ ಬ್ರಹ್ಮಾದಿಗಳು ನಿನ್ನನು ಮೋಹಿಸುವರು ।
ತಿರುವೆಂಗಳಪ್ಪ ಶ್ರೀಪುರಂದರವಿಠಲ ॥

## ೧೪೭

೨ ಭಾರತಮಲ್ಲ ಭೀಮನೆಂತೆಂಬರು ।
ಭಾರತಮಲ್ಲ ಕರ್ಣನೆಂತೆಂಬರು ।
ಭಾರತಮಲ್ಲ ಅರ್ಜುನನೆಂತೆಂಬರು ।
ಭಾರತಮಲ್ಲರಲ್ಲ ಇವರೆಲ್ಲ ।
ಭಾರತಮಲ್ಲ ಪುರಂದರವಿಠಲನೊಬ್ಬ ಕಾಣಿರೊ ॥

## ೧೪೮

೩ ಶರಧಿ ಸಡ್ಡಿಯ ಮಾಡಿ ಧರೆಯ ಕೂರಿಗೆ ಮಾಡಿ ।
ಹರಬೊಮ್ಮರೆಂಬ ಎರಡೆತ್ತು ಹೂಡಿ ।
ನರಜೀವರಾಶಿಗಳೆಂಬ ಬೀಜವ ತಕ್ಕೊಂಡು ।
ಧರೆಯಲ್ಲಿ ಬಿತ್ತುವಾತ ಇಂದ್ರನು ಬೆಳಸುವಾತ ಚಂದ್ರನು ।
ಕಳೆಯ ಕೀಳುವನು ಯಮರಾಜನಯ್ಯ ।
ಬಿತ್ತಿದಾತನೆ ಬೆಳೆಯನು ಒಕ್ಕಿಕೊಂಡು ಹೋಗುವಾಗ ।
ದುಃಖವೇತಕೆ ಸಿರಿಪುರಂದರವಿಠಲ ॥

---

೧ ಅ (II) ತ ೧ ಝು ೧೦ ಪ್ರತಿಗಳಿಂದ ತೆಗೆದುಕೊಂಡಿದೆ.
೨ ಅ (II) ಪ್ರತಿಯಿಂದ ತೆಗೆದುಕೊಂಡಿದೆ.
೩ ಅ (II) ಪ್ರತಿಯಿಂದ ತೆಗೆದುಕೊಂಡಿದೆ.

# ೧೩ ಪ್ರಾರ್ಥನೆ

## ೧೪೯

**ರಾಗ—ತೋಡಿ** **ತಾಳ—ರೂಪಕ**

೧ ಎಂದಿಗಾದರು ನಿನ್ನ ನಂಬಿದೆ—ಚೆಲ್ವ-।
ಮಂದರಧರ ಮದನಜನಕ ।
ವೃಂದಾವನಪತಿ ಗೋವಿಂದ ॥ ಪ ॥

ತರುಣಿಯ ಮಾನವನು ಕಾಯ್ದೆ—ಅಂದು- ।
ದುರುಳ ತನ್ನ ಸುತನ ಕೊಲಲು ಒದಗಿ ಕಂಬದಿ ಬಂದೆ ॥
ಕರುಣದಿ ಶಿಲೆಯನುದ್ಧರಿಸಿದೆ—ತನ್ನ- ।
ಮರಣಕಾಲಕೆ ನಾರಗನೆಂದರೆ ಮುದದಿ ಮುಂದೆ ನಿಂದೆ
ಗೋವಿಂದ ॥ ೧ ॥

ಧ್ರುವ-ವಿಭೀಷಣ-ರುಕ್ಮಾಂಗದರು ನಿನ್ನ ವರಿಸಲು ।
ಆ ವ್ಯಾಸ ನಾರದ ಬಲಿಮುಖ್ಯ ಕಲಿಪಾರ್ಥನು ॥
ಪವನಸುತನು ಅಂಬರೀಷನು—ತ್ರೈ- ।
ಭುವನವರಿಯೆ ನಿನ್ನ ನೆನೆಯೆ ಪದವನಿತ್ತೆ ಗೋವಿಂದ ॥ ೨ ॥

ದುರಿತವಿನಾಶ ದೋಷದೂರನೆ—ಜಗದ್- ।
ಭರಿತ ದೈತ್ಯದಳಸಂಹಾರ ಶರಣು ಚಾರುಚರಿತ್ರ ॥
ಕರಿವರದ ಪುರಂದರವಿಠಲ ಕಾಯೊ ।
ಶರಣಹೃದಯ ಸರಸಿಜ ಪರಮಪಾವನ ಗೋವಿಂದ ॥ ೩ ॥

---

೧ ಅ (I) ಮತ್ತು ಅ (II b) ಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತಿದೆ.

## ೧೫೦

ರಾಗ—ಧನ್ಯಾಸಿ ತಾಳ—ಆದಿ

೧ ಎನ್ನ ಕಡೆಹಾಯಿಸುವುದು ನಿನ್ನ ಭಾರ ।
ನಿನ್ನ ಸ್ಮರಣೆ ಮಾಡುವುದು ಎನ್ನ ವ್ಯಾಪಾರ ॥ ಪ ॥

ಎನ್ನ ಸತಿಸುತರಿಗೆ ನೀನೆ ಗತಿ ।
ನಿನ್ನವರು ಎಂಬುದೇ ಎನ್ನ ನೀತಿ ॥ ೧ ॥

ಎನ್ನ ನಿತ್ಯ ಸಾಕುವುದು ನಿನ್ನ ಧರ್ಮ ।
ನಿನ್ನ ಮರೆತು ಬದುಕುವುದು ಎನ್ನ ಕರ್ಮ ॥ ೨ ॥

ಎನ್ನ ತಪ್ಪ ಎಣಿಸುವುದು ನಿನಗೆ ಸಲ್ಲ ।
ನಿನ್ನ ಮರೆತು ತಿರುಗುವುದು ಎನ್ನದಲ್ಲ ॥ ೩ ॥

ಎನಗೆ ಪಡಿಯಿಕ್ಕುವುದು ನಿನ್ನ ಮಾನ ।
ನಿನ್ನ ಮರೆತು ತಿರುಗುವುದು ಎನ್ನ ಅಪಮಾನ ॥ ೪ ॥

ನೀನಲ್ಲದೆ ಇನ್ನಾರಿಗೆ ಮೊರೆ ಇಡುವೆ ।
ಎನ್ನ ಪುರಂದರವಿಠಲ ನಿನಗೆ ಪೇಳುವೆ ॥ ೫ ॥

## ೧೫೧

ರಾಗ—ಸಾವೇರಿ ತಾಳ—ಛಾಪು

೨ ಪುಟ್ಟಿಸಬೇಡವೊ ದೇವ—ಎಂದಿಗು ಇಂಥ- ।
ಕಷ್ಟಪಟ್ಟು ತಿರುಗುವ ಪಾಪಿಜೀವನವ ॥ ಪ ॥

---

೧ ಬೀ ಪ್ರತಿಯಲ್ಲಿ ಸಿಕ್ಕುತ್ತದೆ.

ವಿ. ಸೂ.—ಎ. ಓ. ಜ ೨ ಝ (೮) ಸ ಪ್ರತಿಗಳಲ್ಲಿ ಇದನ್ನು ಉಗಾಭೋಗವೆಂದು ತಿಳಿದು ಬರೆದಿದ್ದಾರೆ.

೨ ಇ ಪ್ರತಿಯಿಂದ ತೆಗೆದುಕೊಂಡಿದೆ.

ನರರ ಸ್ತುತಿಸಿ ನಾಲಗೆ ಬರಡು ಮಾಡಿಕೊಂಡು- |
ದರ ಪೋಷಣೆಗಾಗಿ ಅವರಿವರೆನದೆ ||
ಧರೆಯೊಳು ಲಜ್ಜೆ-ಮಾನಗಳೆಲ್ಲವೀಡಾಡಿ |
ಪರರ ಪೀಡಿಸಿ ತಿಂಬ ಪಾಪೀ ಜೀವನವ || ೧ ||

ಎಂಟುಗೇಣು ಶರೀರವ ಒಂದು ಗೇಣು ಮಾಡಿಕೊಂಡು |
ಪಂಟಿಸುತ್ತ ಮೆಲ್ಲಮೆಲ್ಲನೆ ಪೋಗಿ ||
ಗಂಟಲಸೆರೆಗಳುಬ್ಬಿ ಕೇಳುವ ಸಂಕಟವ್ನೈ- |
ಕುಂಠಪತಿ ನೀನೆ ಬಲ್ಲೆ ಕಪಟನಾಟಕನೆ || ೨ ||

ಲೆಕ್ಕದಲ್ಲಿ ನೀ ಮೊದಲು ಮಾಡಿದಷ್ಟಲ್ಲದೆ |
ಸಖ್ಯಕೆ ವೆಗ್ಗಳ ಕೊಡುವರುಂಟೆ ||
ಕಕ್ಕುಲತೆ ಪಟ್ಟರಿಲ್ಲ ಕರುಣಾಳು ನಿನ್ನ ಮೊರೆ |
ಹೊಕ್ಕೆ ಎನ್ನನು ಕಾಯೊ ಪುರಂದರವಿಠಲ || ೩ ||

## ೧೫೨

ರಾಗ—ಪಂತುವರಾಳಿ ತಾಳ—ಅಟ

೧ ದಾರಿ ಏನಿದಕೆ ಮುರಾರಿ—ನೀ ಕೈಯ ಹಿಡಿಯದಿದ್ದರೆ- |
ದಾರಿ ಏನಿದಕೆ ಮುರಾರಿ ? || ಪ ||

ಕಷ್ಟ-ಕರ್ಮಂಗಳ ಎಷ್ಟಾದರು ಮಾಳ್ಪೆ |
ಎಷ್ಟಾದರೂ ನುಡಿದೆ ಗುರುಹಿರಿಯರ ||
ದುಷ್ಟರ ಸಂಗವ ಬಹಳ ಮಾಡಿದರಿಂದ |
ಶಿಷ್ಟರ ಸೇವೆಯೆಂದರಾಗದೆನಗೆ || ೧ ||

---

೧ ಅ (P) ಜ್ಞಾ. ಶೆ. ಶ್ರೀ ಪ್ರತಿಗಳಿಂದ ಆಯ್ದುಕೊಂಡಿದೆ.

ಪರರ ದೂಷಣೆ ಪರಪಾಪಂಗಳನೆಲ್ಲ ।
ಪರಿಪರಿಯಲ್ಲಿ ಆಡಿಕೊಂಬೆ ನಾನು ॥
ಹರಿನಾಮಾಮೃತವ ಹೇಳದೆ ಕೇಳದೆ ।
ಹರಟೆಯಲ್ಲಿ ಹೊತ್ತುಗಳೆದೆ ನಾ ಹರಿಯೆ ॥ ೨ ॥

ಪಾತಕಕರ್ಮಗಳ ಮಾಡಿದಜಾಮಿಳಗೆ ।
ಪ್ರೀತಿಯಿಂದಲಿ ಮುಕ್ತಿ ಕೊಡಲಿಲ್ಲವೆ? ॥
ನೂತನವೇಕಿನ್ನು ಸೂರ್ಯನ ಮಂಡಲ ।
ರೀತಿಯಾದನು ಸಿರಿಪುರಂದರವಿಠಲ ॥ ೩ ॥

## ೧೫೩

ರಾಗ—ನಾದನಾಮಕ್ರಿಯೆ ತಾಳ—ಅಟ

೧ ತಪ್ಪುಗಳನೆಲ್ಲ ನೀನೊಪ್ಪಿಕೊಳ್ಳೊ—ನ- ।
ಮ್ಮಪ್ಪ ಕಾಯಬೇಕು ತಿಮ್ಮಪ್ಪ ನೀನೆ ॥ ಪ ॥

ಸತಿ-ಸುತಸಂಸಾರಗಳಿಗೆ ।
ಮತಿಹೀನನಾದೆನು ವ್ಯರ್ಥ ॥
ಮಿತಿಗಾಣೆನಯ್ಯ ಎನ್ನ ಪಾಪಗಳಿಗೆ ।
ಗತಿಯದಾವುದು ಪೇಳೊ ಮುಂದೆನಗೆ ॥ ೧ ॥

ಬಿಸಿಲು ಬಿರುಮಳೆಗಾಳಿಯೊಳಗೆ—ಬಲು- ।
ದೆಸೆಗೆಟ್ಟು ದೇವ ತಿರುಗಿದೆ ॥
ಹಸಿವು-ತೃಷೆಗಳು ಬಹು ಬಾಧಿಸಲು ।
ಹುಸಿಯಾಡಿದೆನಯ್ಯ ಹುಟ್ಟಿನೊಡಲು ॥ ೨ ॥

೧ ಶ್ರೀ ಮತ್ತು ಓ ಪ್ರತಿಗಳಿಂದ ಆರಿಸಿಕೊಂಡಿದೆ.

ಸ್ನಾನ-ಸಂಧ್ಯಾವಂದನವರಿಯೆ—ನಾನಾ- ।
ದಾನ-ಧರ್ಮದ ಗುರುತುಗಳಿಯೆ ॥
ಹೀನಜನರ ಸಂಗವ ಮರೆಯೆ—ಸು- ।
ಜ್ಞಾನಿಗಳನು ಬಾಯೆಂದು ಕರೆಯೆ ॥ ೩ ॥

ಗಂಗೆಅಗ್ರೋದಕಗಳ ತಂದು—ನಾ- ।
ಮಂಗಳಮಜ್ಜನ ಮಾಡಲಿಲ್ಲವೆಂದೂ ॥
ಹೊಂಗೇದಗೆ ಪುಷ್ಪವನೊಂದು ಶ್ರೀ- ।
ರಂಗಗರ್ಪಿಸಲಿಲ್ಲ ಕಾಯೊ ಬಂದು ॥ ೪ ॥

ಪೀತಾಂಬರಾದಿ ವಸ್ತ್ರಗಳಿಂದ—ದಿವ್ಯ- ।
ನೂತನವಾದ ಆಭರಣದಿಂದ ॥
ಪ್ರೀತಿಪಡಿಸಲಿಲ್ಲಾದರದಿಂದ—ಹೇ- ।
ಸೀತಾಪತೆ ಕೃಷ್ಣ ಹರಿಮುಕುಂದ ॥ ೫ ॥

ಗಂಧಾಕ್ಷತೆ ಪುಷ್ಪಗಳಿಂದ—ಬರಿ- ।
ಒಂದು ದಳ ಶ್ರೀತುಳಸಿಯಿಂದ ॥
ಇಂದಿರೇಶನ ಅರ್ಚಿಸದರಿಂದ—ಬಹು- ।
ನೊಂದು ದೂರಾದೆ ಸದ್ಗತಿಯಿಂದ ॥ ೬ ॥

ಏಕಾರತಿ ಧೂಪಾರತಿಯ—ಎಂದು- ।
ಶ್ರೀಕಾಂತ ನಿನಗೆ ನಾ ಮಾಡಲಿಲ್ಲ ॥
ವ್ಯಾಕುಲದಲಿ ಹೋಯಿತು ಹೊತ್ತು—ಬಂದು- ।
ನೀ ಕರುಣಿಸು ಲಕ್ಷ್ಮೀರಮಣ ॥ ೭ ॥

ಪಾಯಸ ಪಂಚಭಕ್ಷ್ಯಗಳಿಂದ—ಬಲು- ।
ಆಯತವಾದ ಶಾಕಗಳಿಂದ ॥
ತೋಯೆ ಶಾಲ್ಯನ್ನ ಸದ್ಘೃತದಿಂದ—ಶ್ರೀ- ।
ಮಾಯಾಪತಿಗೆ ಅರ್ಪಿಸಲಿಲ್ಲ ॥ ೮ ॥

ಮಂಗಳಾರತಿಯ ನಾ ಮಾಡಲಿಲ್ಲ—ಜಯ- |
ಮಂಗಳವೆನ್ನುತ ಪಾಡಲಿಲ್ಲ ||
ಕಂಗಳ ನೋಟದಿ ನೋಡಲಿಲ್ಲ—ನರ- |
ಸಿಂಗ ನೀ ಬಾಯೆಂದು ಕರೆಯಲಿಲ್ಲ || ೯ ||

ಹರಿಯ ಪಾದಕೆ ಬಿದ್ದವನಲ್ಲ—ನರ- |
ಹರಿಗೆ ಪ್ರದಕ್ಷಿಣೆ ಮಾಡಲಿಲ್ಲ ||
ಹರಿದಿನದುಪವಾಸ ವ್ರತವು ಇಲ್ಲ—ಬಲು- |
ಹರಿಯ ದಾಸರ ಸಂಗ ಎನಗಿಲ್ಲ || ೧೦ ||

ಹೋಮಾರ್ಚನೆ ಔಪಾಸನವೆಲ್ಲ |
ನೇಮದಿಂದಲಿ ನಾ ಮಾಡಲಿಲ್ಲ ||
ಕಾಮಾತುರನಾಗಿ ಕಂಡಕಂಡ ಕಡೆ |
ಸ್ವಾಮಿಯ ಕಾಣದೆ ತಿರುಗಿದೆನೊ || ೧೧ ||

ಅತಿಥಿಗಳ್ ಬಂದರೆ ಮನೆಗೆ—ಅಂದೆ- |
ಗತಿಯಿಲ್ಲವಯ್ಯ ಕೊಡುವುದಕೆ ||
ಯತಿಯ ಕಂಡರೆ ನಿಂದಿಸಿದೆ—ಶ್ರೀ- |
ರತಿಪತಿ ಪಿತ ನೀ ದಯಮಾಡೊ || ೧೨ ||

ಎಷ್ಟು ಹೇಳಲಿ ಎನ್ನವಗುಣವ—ಅವು- |
ಅಷ್ಟು ಇಷ್ಟೆಂದು ಎಣಿಕೆಯಿಲ್ಲ ||
ದೃಷ್ಟಿಯಿಂದ ನೋಡಿ ದಯಮಾಡೊ—ಶ್ರೀ- |
ಬೆಟ್ಟದ ವೆಂಕಟ ಪುರಂದರವಿಠಲ || ೧೩ ||

## ೧೫೪

### ಸುಳಾದಿ

#### ಧ್ರುವತಾಳ

೧ ಎಂಬತ್ತುನಾಲ್ಕು ಲಕ್ಷ ಯೋನಿಮುಖಂಗಳಲ್ಲಿ ಪುಟ್ಟಿಪುಟ್ಟಿ ।
ಪೊಂದಿಪೊಂದಿ ಬಳಲಿದೆನಯ್ಯ ನಾನು ।
ಸುಕೃತ-ದುಷ್ಕೃತವೆಂಬ ಉಭಯಕರ್ಮಗಳಲ್ಲಿ ।
ತಾಪತ್ರಯದಲ್ಲಿ ಇರೆ ಉರೆ ಕಡುನೊಂದೆನಯ್ಯ ನಾನು ।
ಇಪ್ಪತ್ತೊಂದುಕೋಟಿ ನಾಯಕನರಕದಲ್ಲಿ ಕಾಲನವರಿಗೆ ಸಿಲುಕಿ ।
ಕಡುನೊಂದೆನಯ್ಯ ನಾನು ।
ಇನ್ನೇತಕೆ ಮಾನಿಸಜನ್ಮ ದೊರೆಕೊಂಬೆ ।
ಇನ್ನೇತಕೆ ನಿನ್ನವರಂಘ್ರಿ ದೊರೆಕೊಂಬೆ ।
ಇನ್ನು ನಿನ್ನ ಬಿಟ್ಟು ಬಾಳಲಾರೆನಯ್ಯ ನಾನು ।
ಮೊರೆಹೊಕ್ಕೆ ಪುರಂದರವಿಟ್ಠಲ ಕಾಯ್ದುಕೊ ದಮ್ಮಯ್ಯ ॥ ೧ ॥

#### ಮಟ್ಟೆತಾಳ

ಅನಂತಾನಂತ ಜನ್ಮವೈದಾವೆ ।
ಅನಂತಾನಂತ ಕರ್ಮವೈದಾವೆ ।
ಅನಂತಾನಂತ ಪರಿಯಲಿ ಆಡಿಸಿ ನೋಡಬಾರದೆ
ಅನಂತಾನಂತ ಪರಿಯಲಿ ।
ಎನ್ನನೊಬ್ಬನ ಸಂಸಾರಿಯ ಮಾಡದಿದ್ದರೆ ।
ಇನ್ನು ನಿನಗೆ ಕಡಮೆಯೆ ಪುರಂದರವಿಟ್ಠಲ? ॥ ೨ ॥

#### ಅಟತಾಳ

ಕಂಸಾರಿಗೆ ಮನಸೋತ ಮಾಧವಿಯರು ।
ಸಂಸಾರವ ಸಂತೈಸಿದರೆ ಹೇಳಿರಯ್ಯ ॥

---

೧ ಜ ೨ ಪ್ರತಿಯಿಂದ ಆರಿಸಿಕೊಂಡಿದೆ.

ಕಂಸಾರಿಗೆ ಮನಮೆಚ್ಚಾದ ಹೆಣ್ಣು |
ಸಂಸಾರವ ಸಂತವಿಟ್ಟಾಳೆ ಹೇಳಿರಯ್ಯ ||
ಹಂಸಮೂರುತಿ ಪುರಂದರವಿಠಲನಲ್ಲಿ |
ಹಂಸಿ ಹತ್ತಿದ ಬಳಿಕ ಅನ್ಯವನರಿವಳೇನಯ್ಯ || ೩ ||

ಝುಂಪೆತಾಳ

ಹರಿಭಕುತಿಯೆಂಬ ಸುಧೆಯ ಸಾಗರವಿರೆ |
ಅರಿವರೆ ವಿಷವೆಂಬ ಎಳೆ ಕೊಳಚೆಯ ನೀರ ? |
ಎಲೆ ಎಲೆ ಮನವೆ, ಜಲರುಹಾಕ್ಷನ ನೆನೆ |
ಎಲೆ ಎಲೆ ಮನವೆ, ಬಿಸರುಹಾಕ್ಷನ ನೆನೆ ಮರಳಿ ಮರಳಿ |
ಸಂಸಾರವನೈದುವರೆ ಪುರಂದರವಿಠಲ ವಿಶ್ವೇಶ್ವರನೆಂದು
ನೆನೆ ಎಲೆ ಎಲೆ ಮನವೆ || ೪ ||

ಏಕತಾಳ

ದುಷ್ಟದೈವವೆಂಬವು ಸಾವಿರವುಂದಿ ಚಿರವಾದಿಗಳ ಕಾಲಪಿಡಿ |
ಇದರಿಂದೆ ವಿಟ್ಠಲನೆಂಬವನು ಕಾಣ |
ಸೃಷ್ಟಿ-ಸ್ಥಿತಿ-ಲಯಕೆ ಪುರಂದರವಿಠಲನೊಬ್ಬನೆ ಕಾಣಿರೊ ||೫||

ಜತೆ

ಅಹಂಕಾರ ಮಮಕಾರಗಳಳಿದು |
ಧಿಂ ಧಿಧಿಂ ಧಿಧಿಂ ಧಿ ಪುರಂದರವಿಠಲ ||

೧೫೫

ರಾಗ—ಮುಖಾರಿ ತಾಳ—ಝಂಪೆ

೧ ಆರೇನ ಮಾಡುವರು ತಾ ಸಾಹಿಯಾದರೆ |
ಸಾರಸೋದ್ಭವ ಬರೆದ ಬರೆಹ ತಪ್ಪದು ಹರಿಯೆ ||ಪ||

---

೧ ಈ (P) ರಘು (೧-೧೦) ಜ್ಞಾ ಪ್ರತಿಗಳಿಂದ ಆರಿಸಿಕೊಂಡಿದೆ.

ಊರೆಲ್ಲ ನಂಟರು ಉಣಬಡಿಸುವವರಿಲ್ಲ ।
ಬಾರೆಂದು ಹತ್ತಿರಕೆ ಕರೆವರಿಲ್ಲ ॥
ಆರೈದು ಎನ್ನ ಸೋದರರೆಂದು ಹೋದರೆ ।
ದೂರದೊಳೆ ನಿಂತು ನೋಡುವರು ಶ್ರೀಹರಿಯೆ ॥ ೧ ॥

ಹಸಿದು ನಂಟರ ಮನೆಗೆ ಉಣಲೆಂದು ಹೋದರೆ ।
ಹಸಿವರಿತು ಉಣಬಡಿಸುವವರ ಕಾಣೆ ॥
ರಸದಾಳೆ ಕಬ್ಬೆಂದು ಮೆಲ್ಲಲಿಕೆ ಹೋದರೆ ।
ವಿಷವಾಗಿ ತೋರುತಿದೆ ಬಾಯ್ಗೆ ಹರಿಯೆ ॥ ೨ ॥

ಮನೆಯ ಮುಂದಿನ ಬಾಳೆ ಎನಗಾಗದೇ ಹೋಯ್ತು ।
ಏನ ಹೇಳಲಿ ಒಳಿತ ಎನ್ನ ವಿಧಿಯ ॥
ನಿನ್ನ ನಾ ಮೊರೆಹೊಕ್ಕೆ ಕಾಯಬೇಕೆಂದರೆ ।
ಎನ್ನ ನಡುನೀರೊಳಗೆ ಕೈಬಿಡುವೆ ಹರಿಯೆ ॥ ೩ ॥

ಮರದ ನೆರಳೆಂದು ನಾ ಮರದಡಿಗೆ ಹೋದರೆ ।
ಉರಿಯಿಂದ ಧಗೆ ಬಹಳವಾದುದೆನಗೆ ॥
ಹರಿವ ಜಲವೆಂದು ನಾ ಬಾಯಾರಿ ಹೋದರೆ ।
ಕೆರೆ-ಬಾವಿ ಬತ್ತಿ ಒಣಗಿದುವು ಶ್ರೀಹರಿಯೆ ॥ ೪ ॥

ಕೊಡಲು ಧನವಿಲ್ಲವೈ ನುಡಿವುದಕೆ ಉಸಿರಿಲ್ಲ ।
ಕಡುದೈನ್ಯದಿಂದೆನ್ನ ದನಿಗುಂದಿತು ॥
೧ ಬಡವರಾಧಾರಿ ಸಿರಿಪುರಂದರವಿಟ್ಠಲನೆ ।
ಬಿಡಲಾರೆ ನಿನ್ನ ಪಾದವನು ಶ್ರೀಹರಿಯೆ ॥ ೫ ॥

---

೧ ಬಡವನಾದೆನು ನಾನು ಸಿರಿಪುರಂದರವಿಟ್ಠಲನೆ (ಅ P).

## ೧೫೬

### ಸುಳಾದಿ

### ಧ್ರುವತಾಳ

೧ ಎನ್ನ ಹೃದಯದಲ್ಲಿ ಎಲ್ಲಿ ಅನುವನೀಯಲೊ ಹರಿಯೆ? ।
ಎನ್ನ ಭಾವದಲ್ಲಿ ಎಲ್ಲಿ ಅನುವನೀಯುಲೊ ಹರಿಯೆ ? ।
ಬರಿದೆ ಸುಕೃತ-ದುಷ್ಕೃತದಿ ಬನ್ನ ಬಡಿಸಿ ನೀ ನೋಡುತಿಹರೆ ! ।
ಎನ್ನ ಅವಗುಣಗಳೆಣಿಸುವರೆ ಕಡೆಯುಂಟೆ? ।
ನಿನ್ನ ಘನತೆಯ ನೋಡಿ ಪಾಲಿಸೆಲೊ ಹರಿಯೆ ।
ಎನಗನ್ಯಥಾ ಗತಿಯಿಲ್ಲ ಅನಾಥ ನಾನಯ್ಯ ।
ಅನಾಥ ಬಂಧು ಪುರಂದರವಿಠಲರಾಯ ।
ನಿನ್ನ ಡಿಂಗರಿಗನೆನಿಸೊ ಕೃಪಾಂಬುಧಿಯೆ ॥ ೧ ॥

### ಮಟ್ಟತಾಳ

ಮನವೇ ಕೇಳು ಮಾಮನೋಹರನ ।
ಮನಸಿಜಪಿತನ ನಾನನುದಿನದಲಿ ಅಗಲದಿಪ್ಪೆ ।
ಘನಮಹಿಮ ದೇವದೇವನನು ನೆನೆವುದೇನು
ನೇಹಮಾಡಿದವನ ।
ಮನವನೀಯೆ ತನ್ನನೀವನು ಆ- ।
ದನುಜ ಮನುಜ ದಿವಿಜರೊಡೆಯಗೆ ।
ತನುವ ಪ್ರಾಣವೊಪ್ಪಿಸುವನನು ।
ಅನುದಿನದಲಿ ಪೊರೆವನು ಪುರಂದರವಿಠಲ ।
ನೆನೆವುದೇನು ನೇಹಮಾಡಿದವನ ॥ ೨ ॥

### ತ್ರಿವುಡೆತಾಳ

ತಟ್ಟುವುದೆ ಕೌರವ ಅನಂತನನು ।
ಮುಟ್ಟುವುದೆ ಗೂಗೆ ಭಾನುಮಂಡಲವನು ।

೧ ೩ (ಸುಪ್ರತ) ಪ್ರತಿ [illegible].

ಸೃಷ್ಟಿಸಂಹಾರಕಾರಣಮೂರುತಿಗಳನು ।
ಮೆಟ್ಟಿ ಆಳುವವ ಕೇಶವನೆಂದರಿಯದೆ ।
ಸೃಷ್ಟಿಸಂಹಾರಕಾರಣಮೂರುತಿಯನು ।
ಕಟ್ಟಿದಳೊ ಗೋಪಿ ದಾಮದಲಿ ಪುರಂದರ ।
ವಿಟ್ಠಲರಾಯ ಯಮಳಾರ್ಜುನಭಂಜನ ॥ ೩ ॥

ಅಟತಾಳ

ಅಂತಿಂತೊಂದು ಕ್ಷಣ ಅನಂತನಿಲ್ಲದೆ ।
ಚಿಂತಿಸುತಿದೆ ಎನ್ನ ಮನ ಚಿಂತಿಸುತಿದೆ ।
ಕಂತುಪಿತನ ಬರವ ಬಯಸಿ ।
ಚಿಂತಿಸುತಿದೆ ಎನ್ನ ಮನ ಚಿಂತಿಸುತಿದೆ ।
ಸಂತತ ಪುರಂದರವಿಠಲನ ನೆನೆವ ಭಾಗ್ಯವು ।
ದೊರಕಬೇಕೆಂದು ಚಿಂತಿಸುತಿದೆ ಎನ್ನ ಮನ ॥ ೪ ॥

ಆದಿತಾಳ

ರಂಗ ನಮೋ ರಘುನಂದನ ನಮೋ ನಮೋ ।
ಕೃಷ್ಣ ನಮೋ ಕೃಪಾಳುವೆ ನಮೋ ನಮೋ ।
ದೇವ ನಮೋ ದೇವರಾಯ ನಮೋ ನಮೋ ।
ಈವ ಕಾವಕರುಣಾಕರ ನಮೋ ನಮೋ ।
ಪುಂಡರೀಕಮುನಃ ಪ್ರಿಯನೆ ನಮೋ ನಮೋ ।
ಪಂಢರಿರಾಯಾ ಪುರಂದರವಿಠಲದೇವ ನಮೋ ನಮೋ ॥ ೫ ॥

ಜತೆ

ಹರಿಯ ನೆನೆವೆ ನರಹರಿಯ ನೆನೆವೆ ಮುರ- ।
ಹರನ ನೆನೆವೆನೊ ಪುರಂದರವಿಠಲನ ॥

## ೧೫೭

ರಾಗ—ಬಿಲಹರಿ ತಾಳ—ಝಂಪೆ

[1] ಕಂಡುಕಂಡೆಂತು ಕೈಬಿಡುವೆ ಹರಿಯೆ |
ಪುಂಡರೀಕಾಕ್ಷ ನಿನ್ನ ನಂಬಿದಮೇಲೆ || ಪ ||

ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ |
ಬಣಗುದಾರಿದ್ರ್ಯದಲಿ ಬಲು ನೊಂದೆನಯ್ಯ ||
ಫಣಿಶಾಯಿ ಪ್ರಹ್ಲಾದವರದನೇ ನೀನೆನಗೆ |
ಹೊಣೆಯಾದ ಮೇಲಿನ್ನು ಮರುಳುಗೊಳಿಸುವರೆ? || ೧ ||

ಒಂದು ದಿನ ಅತಿಥಿಗಳನುಪಚರಿಸಿದವನಲ್ಲ |
ಬೆಂದೊಡಲ ಹೊರೆದು ಬೇಸತ್ತೆನಯ್ಯ ||
ಕುಂದು-ಕೊರತೆಯು ಏಕೆ? ನಿನ್ನ ನಂಬಿದೆ ದಯಾ- |
ಸಿಂಧು ಗೋವಿಂದನೇ ತಂದೆಯಾದ ಮೇಲೆ || ೨ ||

ಬಂಧು-ಬಳಗ ಮುನ್ನಿಲ್ಲ ಬದುಕಿನಲಿ ಸುಖವಿಲ್ಲ |
ನಿಂದ ನೆಲ ಮುನಿಯುತಿದೆ ನೀರಜಾಕ್ಷ ||
ತಂದೆ-ತಾಯಿಯು ನೀನೆ ಬಂಧುಬಳಗವು ನೀನೆ |
ಕುಂದದೇ ರಕ್ಷಿಸೈ ನಂದನಂದನನೆ || ೩ ||

ಆಶೆಯನು ಬಿಡಲಿಲ್ಲ ಅತಿ ಹರುಷವೆನಗಿಲ್ಲ |
ದೇಶದೇಶವ ತಿರುಗಿ ದೆಸೆಗೆಟ್ಟೆನಯ್ಯ ||
ಪಾಪಸಂಚಿತನಾದ ವೈಕುಂಠನಿಲಯ ಲ- |
ಕ್ಷ್ಮೀಶ ನೀಯೆನ್ನ ಕಣ್ಣಾರೆ ಕಂಡಮೇಲೆ || ೪ ||

---

೧ ಝು (—೧೦) ಪ್ರತಿಯಲ್ಲಿಯಷ್ಟೆ ಸಿಕ್ಕಿದೆ.

ಭಕುತವತ್ಸಲನೆಂಬ ಬಿರುದು ಹೊತ್ತಿಹ ಮೇಲೆ ।
ಭಕುತರಾಧೀನನಾಗಿರಬೇಡವೆ ॥
ಮುಕುತಿದಾಯಕನೆ ಬೇಲೂರುಪುರಾಧೀಶ್ವರ ।
ಸಕಲ ದೇವರದೇವ ಪುರಂದರವಿಠಲ ॥ ೫ ॥

೧೫೮

ಉಗಾಭೋಗ

೧ ಬೇಡುವ ಕಷ್ಟಕ್ಕಿಂತ ಸಾವುದೆ ಕರಲೇಸು ।
ಬೇಡುವರಿಗೆ ಒಬ್ಬರೊಡೆಯರುಂಟೆ ದೇವ ।
ಗೂಡ ಕಿರಿದು ಮಾಡಿ ಬಲಿಯ ದಾನವ ಬೇಡಿ ।
ನಾಡೊಳು ಸ್ಥೂಲ ಸೂಕ್ಷ್ಮರೂಪವಾದೆ ।
ಬೇಡುವ ಕಷ್ಟವನು ನೀನೆ ಬಲ್ಲೆಯೊ ಸ್ವಾಮಿ ।
ಎನ್ನ ಬೇಡದಂತೆ ಮಾಡಯ್ಯ ಪುರಂದರವಿಠಲ ॥

೧೫೯

೨ ಧರ್ಮಪಥವ ಮೆಟ್ಟಲು ಮನವೆರಗದು ।
ದುಷ್ಕರ್ಮಕಾದಡೆ ಚಿಗಿಚಿಗಿದಾಡುವುದು ।
ಯುಗಧರ್ಮವೊ ಹರಿ ಜೀವನಕರ್ಮವೊ ।
ದುರ್ಮಾಯಯುಕ್ತಿಯಿಂದ ಚರಿಸುವ ಜನರ ಮೈಯ ।
ಚರ್ಮವ ಸುಲಿಸದೆ ಬಿಡನೊ ಪುರಂದರವಿಠಲ ॥

---

೧ ಹ ಜ ಪ್ರತಿಗಳಿಂದ ಆರಿಸಿಕೊಂಡಿದೆ.
೨ ಅ (II) ಪ್ರತಿಯೊಂದರಲ್ಲಿಯಷ್ಟೆ ಇದೆ.

## ೧೬೦

೧ ಮುಟ್ಟದಿರಚ್ಯುತಗರ್ಪಿತವಲ್ಲದುದನು—ಕಂ- |
ಗೆಟ್ಟು ಸ್ತುತಿಸಬೇಡ ಹರಿಯಲ್ಲದನ್ಯತ್ರ |
ಕಷ್ಟ ಬೇಡ ಭೂಸುರರೊಳಗೆ ನೀನು |
ಕೊಟ್ಟಭಾಷೆ ತಪ್ಪಲು ಬೇಡ ಆರಿಗಾದರಾಗಲಿ |
ಶ್ರೀಪುರಂದರವಿಠಲನಂಘ್ರಿ ನೆನೆಯದೆ ಬಿಟ್ಟಿರಬೇಡ ||

## ೧೬೧

( ಮಾಯಾಮಾಳವಗೌಳ )

೨ ಕೆರೆಯ ನೀರನು ಕೆರೆಗೆ ಚೆಲ್ಲಿ |
ವರವ ಪಡೆದವರಂತೆ ಕಾಣಿರೊ |
ಹರಿಯ ಕರುಣದಲಾದ ಭಾಗ್ಯವ |
ಹರಿಸಮರ್ಪಣೆ ಮಾಡಿರೊ |
ಸಿರಿಪುರಂದರವಿಠಲರಾಯನ |
ಚರಣಕಮಲವ ನಂಬಿ ಬದುಕಿರೊ ||

## ೧೬೨

೩ ಎಲ್ಲಾ ಒಂದೇ ಎಂಬವರ ಎರಡು ದಾಡಿಯಲಿದ್ದ |
ಹಲ್ಲುದುರೆ ಬಡಿಯಬೇಕು ಹರಿಭಕ್ತರಾದವರು |
ಸಲ್ಲದು ಸಲ್ಲದು ಈ ಮಾತು ಇದಕೆ ಸಂಶಯ ಬೇಡ |
ಕಲ್ಲ ನಾರಿಯ ಮಾಡಿದ ಪುರಂದರವಿಠಲನ |
ಪಲ್ಲವಾಂಘ್ರಿಯ ನೆನೆದು ಪರಗತಿಯ ಪಡೆಯಿರೊ ||

---

೧ ಅ (VI) ಜ ಪ್ರತಿಗಳಿಂದ ತೆಗೆದುಕೊಂಡಿದೆ.

೨ ಅ (II) ಪ್ರತಿಯಿಂದ ಆರಿಸಿಕೊಂಡಿದೆ.

೩ ಅ (II VI) ಜ ಪ್ರತಿಗಳಿಂದ ತೆಗೆದುಕೊಂಡಿದೆ.

೧೬೩

೧ ಹೊಲಿಯ ಬಂದಾನೆಂದು ಒಳಗೆ ದೇವರಮಾಡಿ ।
ಗಣಗಣ ಗಂಟೆಯಬಾರಿಸುವುದೇತಕಯ್ಯ ।
ತನುವಿನ ಕೋಪ ಹೊಲೆಯಲ್ಲವೆ? ।
ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟುಕೊಂಡು ।
ಇದಕೇನು ಮದ್ದು ಶ್ರೀಪುರಂದರವಿಠಲ ॥

೧೬೪

೨ ನಾರದಮುನಿ ನಿಮ್ಮ ನೆನೆವನಲ್ಲದೆ ।
ನಾಡುಗಳೆಷ್ಟು ಕೊಟ್ಟನು ಹೇಳಯ್ಯ? ।
ಪ್ರಹ್ಲಾದನು ನಿನಗೆ ಏನು ಕೊಟ್ಟನು ಸ್ವಾಮಿ ? ।
ನಾನೇನು ಕೊಡದೆ ಹೋದೆನು ಹೇಳಯ್ಯ ? ।
ಅಂದಿನವರಿಗೆ ನೀನು ಏನಾದರೂ ಕೊಟ್ಟದ್ದು ।
ಇಂದೇನು ದೊರಕದೆ ಹೋಯಿತೆ ? ।
ಅಂದು ನೀ ಸಿರಿವಂತನೆ—ಇಂದು ನೀ ಬಡವನೆ ? ।
ಇದು ಏನು ವಿಚಿತ್ರ ಪುರಂದರವಿಠಲ ! ॥ ೧ ॥

೧೬೫

೩ ಕಾವ ದೈವವು ನೀನೆ ಕೊಲುವ ದೈವವು ನೀನೆ ।
ಕೈವಲ್ಯ ಫಲದಾತ ಕೇಶವನು ನೀನೆ ।
ಆವ ದೈವಕ್ಕೂ ಈ ವೈಭವವನ್ನು ಕಾಣೆ ।
ರಾವಣಾಂತಕ ಸ್ವಾಮಿ ಪುರಂದರವಿಠಲ ॥ ೧ ॥

---

೧ ಅ (VI) ಝು (೯).
೨ ಅ (೧೧) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.
೩ ಗ (x) ಪ್ರತಿಯಿಂದ ತೆಗೆದುಕೊಂಡಿದೆ.

# ೧೪ ಮಂಗಳಂ

## ೧೬೬

ರಾಗ—ಶ್ರೀ　　　　　　　　　　ತಾಳ—ಝಂಪೆ

[1] ಜಯಮಂಗಳಂ ನಿತ್ಯ ಶುಭಮಂಗಳಂ　　॥ ಪ ॥

ಕುರುರಾಯ ಸಭೆಯೊಳಗೆ ಕುಳಿತು ದ್ರೌಪದಿಯನೆಳ- ।
ತರಿಸಿ ಭೀಷ್ಮಾದಿಕರು ನೋಡುತಿರಲು ॥
ಸೆರಗನ್ನು ಹಿಡಿದು ಸೀರೆಯ ಸೆಳೆಯೆ ದ್ರೌಪದಿಯ ।
ಮೊರೆ ಕೇಳಿ ಕಾಯ್ದ ಶ್ರೀಮುರವೈರಿಗೆ　　॥ ೧ ॥

ಪಾಪಿ ದುರ್ಯೋಧನನು ಪಾಂಡುನಂದನರೊಡನೆ ।
ನೀ ಪಾಲು ಕೊಡುಯೆಂದು ಕೇಳಲಾಗಿ ॥
ಕೋಪದಲಿ ಕೊಡೆನೆನಲು ಇಳೆಯಲೊರಗಿಸಿ ವಿಶ್ವ- ।
ರೂಪವನು ತೋರಿಸಿದ ಗೋಪಾಲಗೆ　　॥ ೨ ॥

ವಸುಧೀಶ ಧರ್ಮಜನ ಓಲಗದಿ ತಾನಿರಲು ।
ಶಿಶುಪಾಲ ನಿಂದಿಸಲು ಶೀಘ್ರದಿಂದ ॥
ಅಪಮಾನ ಚಕ್ರದಲಿ ಅವನ ತಲೆ ಖಂಡಿಸಿದ ।
ವಸುದೇವ ದೇವಕೀ ವರಪುತ್ರಗೆ　　॥ ೩ ॥

ಗರುಡವಾಹನವೇರಿ ತೆರಳಿ ಶೋಣಿತಪುರಕೆ ।
ಹರಭಕ್ತ ಬಾಣಾಸುರನ ಕರಗಳ ॥
ತರಿದಿಟ್ಟು ಹರುಷದಲಿ ತನ್ನ ಮೊಮ್ಮನ ಕಾಯ್ದ ।
ಉರಗಾತ್ಮಭೂಷಕಲುಷರೊಡೆಯಗೆ　　॥ ೪ ॥

---

೧ ಶ್ರೀ ಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.

## ೧೬೩

೧ ಹೊಲೆಯ ಬಂದಾನೆಂದು ಒಳಗೆ ದೇವರಮಾಡಿ ।
ಗಣಗಣ ಗಂಟೆಯಬಾರಿಸುವುದೇತಕಯ್ಯ ।
ತನುವಿನ ಕೋಪ ಹೊಲೆಯಲ್ಲವೆ? ।
ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟುಕೊಂಡು ।
ಇದಕೇನು ಮದ್ದು ಶ್ರೀಪುರಂದರವಿಠಲ ॥

## ೧೬೪

೨ ನಾರದಮುನಿ ನಿಮ್ಮ ನೆನೆವನಲ್ಲದೆ ।
ನಾಡುಗಳೆಷ್ಟು ಕೊಟ್ಟನು ಹೇಳಯ್ಯ? ।
ಪ್ರಹ್ಲಾದನು ನಿನಗೆ ಏನು ಕೊಟ್ಟನು ಸ್ವಾಮಿ ? ।
ನಾನೇನು ಕೊಡದೆ ಹೋದೆನು ಹೇಳಯ್ಯ ? ।
ಅಂದಿನವರಿಗೆ ನೀನು ಏನಾದರೂ ಕೊಟ್ಟದ್ದು ।
ಇಂದೇನು ದೊರಕದೆ ಹೋಯಿತೆ ? ।
ಅಂದು ನೀ ಸಿರಿವಂತನೆ—ಇಂದು ನೀ ಬಡವನೆ ? ।
ಇದು ಏನು ವಿಚಿತ್ರ ಪುರಂದರವಿಠಲ ! ॥ ೧ ॥

## ೧೬೫

೩ ಕಾವ ದೈವವು ನೀನೆ ಕೊಲುವ ದೈವವು ನೀನೆ ।
ಕೈವಲ್ಯ ಫಲದಾತ ಕೇಶವನು ನೀನೆ ।
ಆವ ದೈವಕ್ಕೂ ಈ ವೈಭವವನ್ನು ಕಾಣೆ ।
ರಾವಣಾಂತಕ ಸ್ವಾಮಿ ಪುರಂದರವಿಠಲ ॥ ೧ ॥

---

೧ ಅ (VI) ಝು (೯).
೨ ಅ (೧೧) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.
೩ ಗ (x) ಪ್ರತಿಯಿಂದ ತೆಗೆದುಕೊಂಡಿದೆ.

# ೧೪ ಮಂಗಳಂ

## ೧೬೬

ರಾಗ—ಶ್ರೀ ತಾಳ—ಝಂಪೆ

೧ ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥

ಕುರುರಾಯ ಸಭೆಯೊಳಗೆ ಕುಳಿತು ದ್ರೌಪದಿಯನೆಳ- ।
ತರಿಸಿ ಭೀಷ್ಮಾದಿಕರು ನೋಡುತಿರಲು ॥
ಸೆರಗನ್ನು ಹಿಡಿದು ಸೀರೆಯ ಸೆಳೆಯೆ ದ್ರೌಪದಿಯ ।
ಮೊರೆ ಕೇಳಿ ಕಾಯ್ದ ಶ್ರೀಮುರವೈರಿಗೆ ॥ ೧ ॥

ಪಾಪಿ ದುರ್ಯೋಧನನು ಪಾಂಡುನಂದನರೊಡನೆ ।
ನೀ ಪಾಲು ಕೊಡುಯೆಂದು ಕೇಳಲಾಗಿ ॥
ಕೋಪದಲಿ ಕೊಡೆನೆನಲು ಇಳೆಯಲೊರಗಿಸಿ ವಿಶ್ವ- ।
ರೂಪವನು ತೋರಿಸಿದ ಗೋಪಾಲಗೆ ॥ ೨ ॥

ವಸುಧೀಶ ಧರ್ಮಜನ ಓಲಗದಿ ತಾನಿರಲು ।
ಶಿಶುಪಾಲ ನಿಂದಿಸಲು ಶೀಘ್ರದಿಂದ ॥
ಅಸಮಾನ ಚಕ್ರದಲಿ ಅವನ ತಲೆ ಖಂಡಿಸಿದ ।
ವಸುದೇವ ದೇವಕೀ ವರಪುತ್ರಗೆ ॥ ೩ ॥

ಗರುಡವಾಹನನೇರಿ ತೆರಳಿ ಶೋಣಿತಪುರಕೆ ।
ಹರಭಕ್ತ ಬಾಣಾಸುರನ ಕರಗಳ ॥
ತರಿದಿಟ್ಟು ಹರುಷದಲಿ ತನ್ನ ಮೊಮ್ಮನ ಕಾಯ್ದ ।
ಉರಗಾತ್ಮಭೂಸಕಲಸುರರೊಡೆಯಗೆ ॥ ೪ ॥

---

೧ ಶ್ರೀ: ಪ್ರತಿಯಲ್ಲಿ ಮಾತ್ರ ಸಿಕ್ಕುತ್ತದೆ.

ಸುರಗಿರಿಯ ಸುತ್ತುವಾ ತರಣಿನಂದನನ ಆ ।
ಉರಗಬಾಣಕೆ ತನ್ನ ಪಾಂಡುನಂದನನನು ॥
ಗುರಿಯಾಗದಂತೆ ಸತ್ಕರುಣದಲಿ ರಕ್ಷಿಸಿದ ।
ವರಮೂರ್ತಿ ಶ್ರೀಪುರಂದರವಿಠಲಗೆ ॥ ೫ ॥

೧೬೭

ರಾಗ—ಪಾಡಿ ತಾಳ—ಆದಿ

೧ ವಾಯುಕುಮಾರಗೆ ಮಂಗಳ—ರಘು- ।
ರಾಯಸೇವಕಗೆ ಮಂಗಳ ॥ ಪ ॥

ಅಂಜನಿಗರ್ಭಸಂಜಾತಗೆ ಮಂಗಳ ।
ರಂಜಿತ ದಿವ್ಯಮೂರ್ತಿಗೆ ಮಂಗಳ ॥
ಮಂಜುಳಕೀರ್ತಿಮಾಹಾತ್ಮ್ಯಗೆ ಮಂಗಳ ।
ಸಂಜೀವರಾಯಗೆ ಮಂಗಳ ॥ ೧ ॥

ದನುಜನಿಕರ ಸಂಹಾರಗೆ ಮಂಗಳ ।
ಜಾನಕಿಶೋಕವಿನಾಶಗೆ ಮಂಗಳ ॥
ವನಧಿವಿರೋಧಿಗೆ ಮಂಗಳ ಜಯ ।
ಹನುಮವಿಲಾಸಗೆ ಮಂಗಳ ॥ ೨ ॥

ಸೇತುವೆಗಟ್ಟಿದಾತಗೆ ಮಂಗಳ ।
ಸೀತೆಯ ತಂದ ಬಂಟಗೆ ಮಂಗಳ ॥
ಖ್ಯಾತ ಪುರಂದರವಿಠಲನ ಕರುಣೆಗೆ ।
ಪಾತ್ರನಾದ ಭಕುತಗೆ ಮಂಗಳ ॥ ೩ ॥

---

೧ ಆ (II) ಪ್ರತಿಯೊಂದರಲ್ಲಿಯೇ ಇದೆ.

# ಪರಿಶಿಷ್ಟ ೧

ಶಬ್ದಾರ್ಥಗಳು

ಸಂದರ್ಭಕಥೆ

ವಿವರಣೆಗಳು ( ಪ್ರಮೇಯಾತ್ಮಕ, ಭೌಗೋಲಿಕ,
ಐತಿಹಾಸಿಕವಿಷಯ ಸಹಿತ).

# ೧ ಭಕ್ತಿಮಾಹಾತ್ಮ್ಯೆ

## ೧ನೆಯ ಹಾಡು

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥
(ಭಾಗ ೭೫–೨೩)

ನಾರದರು ತಮ್ಮ ಭಕ್ತಿಸೂತ್ರದಲ್ಲಿ 'ಸಾತ್ವಸ್ಮಿನ್ ಪರಮಪ್ರೇಮರೂಪಾ' ಎಂದರೆ ಭಗವಂತನನ್ನು ಕುರಿತ ಆತ್ಯಂತಿಕವಾದ ಅನನ್ಯಪ್ರೀತಿಯೆ ಭಕ್ತಿಯು ಎಂದಿರುವರಲ್ಲದೆ 'ಅಮೃತ ಸ್ವರೂಪಾಚ' ಎಂದರೆ, ಭಕ್ತಿ ಅಮೃತದಂತೆ ರುಚಿ, ಆನಂದದಾಯಕವು, ಅಮರಪದವನ್ನು ಕೊಡುವಂತಹದು ಎಂದು ಹೇಳಿದ್ದಾರೆ. ಇನ್ನೊಬ್ಬ ಭಕ್ತಿಸೂತ್ರಕಾರರಾದ ಶ್ರೀಶಾಂಡಿಲ್ಯರು 'ಸಾಪರಾನುರಕ್ತಿರೀಶ್ವರೇ' ಎಂದರೆ 'ಭಗವಂತನನ್ನು ಕುರಿತ ಎಲ್ಲಕ್ಕೂ ಹೆಚ್ಚಿನ ಪ್ರೇಮವೇ ಭಕ್ತಿ' ಎಂದು ವ್ಯಾಖ್ಯೆ ಮಾಡಿದ್ದಾರಲ್ಲದೆ 'ತತ್‌ಸಂಸ್ಥಸ್ಯಾಮೃತತ್ವೋಪದೇಶಾತ್' ಎಂದರೆ ಭಗವಂತನಲ್ಲಿ ಸ್ಥಿರಮನನಾದ ಭಕ್ತನಿಗೆ ಅಮೃತತ್ವವು ಪ್ರಾಪ್ತವಾಗುವುದೆಂದು ಹೇಳಿದ್ದಾರೆ. ಶ್ರೀಮದ್ಭಾಗವತದಲ್ಲಿ ಭಗವದ್ಭಕ್ತಿಯ ಮಹಿಮೆಯನ್ನು ಅಖಂಡವಾಗಿ ಕೊಂಡಾಡಲಾಗಿದೆ; ಅಲ್ಲದೆ ಭಕ್ತಿಯ ಒಂಬತ್ತು ಬಗೆಗಳನ್ನೂ ಹೇಳಲಾಗಿದೆ. ಆ ಒಂಬತ್ತು ಬಗೆಗಳನ್ನೇ ದಾಸರು ಇಲ್ಲಿ ಅದರ ಮೇಲ್ಮೆಯೊಂದಿಗೆ ವಿವರಿಸಿದ್ದಾರೆ.

೧ **ಸಂಸೃತಿ**=ಸಂಸಾರ.
**ಅಂಗಡಿಯಿಟ್ಟು ತೋರು**=ಪ್ರದರ್ಶನ ಮಾಡು.
೨ **ಅರುವತ್ತು ಗಳಿಗೆ**=ಒಂದು ದಿವಸ.
**ಹೋಗಾಡ**=ಕಳೆಯಲಾರನು.
**ಪರಮಪದವಿ**=ಮುಕ್ತಿ.

**ಬಟ್ಟೆ**=ಹಾದಿ.
**ಆಡು**=ವ್ಯವಹರಿಸು.

೩ **ಚಿರಸ್ವಭಾವದಲಿ**=ನಿಶ್ಚಲಬುದ್ಧಿಯಲ್ಲಿ.
**ಕಣ್ಣೊರತೆ**=ಕಂಬನಿ (ಆನಂದಬಾಷ್ಪ).
**ಹರಿ**=ಸಿಂಹ.

೪ **ವಿಸ್ಮೃತಿ**=ಮರೆವು.
**ಕರೆ**=ಒದಗಿಸು.
**ಬಿಂಬ**=ಪರಮಾತ್ಮಸ್ವರೂಪ.

೫ **ವೊಲೆವಾಲು**=ಸಾಮಾನ್ಯ ಆಹಾರ.
**ಚರಣಾಬ್ಜ ....ವೊಲೆವಾಲನುಣ್ಣ**=ಪರಮಾತ್ಮನ ಭಕ್ತಿಯ ರಸವನ್ನು ಕುಡಿದ ಭಕ್ತ, ಬೇರೆ ಯಾವ ಭೌತಿಕ ಭೋಗಗಳಿಗೂ ಆಸ್ಪದ ಕೊಡನು.

೬ **ಹರಿಪುರ**=ವೈಕುಂಠ.
**ನಿರ್ವಾಣ**=ಮುಕ್ತಿ.

೭ **ಅಷ್ಟಾಂಗ**=(ನಮಸ್ಕಾರ).

ಜಾನುಭ್ಯಾಂಚ ತಥಾ ಪದ್ಭ್ಯಾಂ ಪಾಣಿಭ್ಯಾಮುರಸಾ ಧಿಯಾ ।
ಶಿರಸಾ ವಚಸಾ ದೃಷ್ಟ್ಯಾ ಪ್ರಣಾಮೋಽಷ್ಟಾಂಗ ಈರಿತಃ ॥ Apte 184

**ಪಾಪಾಟವಿ**=ಪಾಪವೆಂಬ ಅಡವಿ.
**ಸುರಲೋಕ**=ಸ್ವರ್ಗ.
**ನಿರಯ**=ನರಕ (ನಿರಯದರ್ಶ=ಯಮ).

೮ **ಹರಿನಾನೆಂಬುವ**=ಅದ್ವೈತವಾದಿ.
**ಬಾಕುಳಿಗವೃತ್ತಿ**=(ಬಾಕುಳಿ—ತ್ಸ—ವ್ಯಾಕುಲ) ಹರಿಯ ಸೇವೆಯಲ್ಲಿಯೆ ತೊಡಗಿದವ.
**ನಿರ್ಜರತರು**=ಕಲ್ಪವೃಕ್ಷ.

೯ **ಕರ್ಮತ್ರಯ** ಸಂಚಿತ, ಪ್ರಾರಬ್ಧ, ಆಗಾಮಿ.
**ನಿವಹ**=ಸಮೂಹ.

**ತಿರುಗಿಬರುವ**....ಬಟ್ಟೆ=ಪುನರ್ಜನ್ಮದ ದಾರಿ.
**ಲಿಂಗಾಂಗ**=ಲಿಂಗಶರೀರ.

೧೦ **ಉರಿ, ಜಲ, ಮಣ್ಣು, ಬಯಲು, ಗಾಳಿ**:—ತೇಜ, ಜಲ ಪೃಥ್ವಿ, ಆಕಾಶ, ವಾಯು ಇವುಗಳಿಂದ ಯಾವ ವಿಕಾರವನ್ನೂ ಹೊಂದಲಾರ.

**ಉನ್ಮಾಹ**=ಬಂಧನ.
**ಸುರಋಷಿ**=ನಾರದ.

೧೧ ಈ ನುಡಿಯಲ್ಲಿ ಭಕ್ತಿಯ ಒಂಬತ್ತು ಬಗೆಗಳನ್ನು ವರ್ಣಿಸಿದ್ದಾರೆ:

ಶ್ರೀಕೃಷ್ಣಶ್ರವಣೇ ಪರೀಕ್ಷಿತರಭೂತ್ವೈಯಾಸಕಿಃ ಕೀರ್ತನೇ।
ಪ್ರಹ್ಲಾದಃ ಸ್ಮರಣೇ ತದಂಘ್ರಿಭಜನೇ ಲಕ್ಷ್ಮೀಃ ಪ್ರಥುಃಪೂಜನೇ॥
ಅಕ್ರೂರಸ್ತ್ವಭಿವಂದನೇ ಕಪಿಪತಿರ್ದಾಸ್ಯೇಚ ಸಖ್ಯೇಽರ್ಜುನಃ।
ಸರ್ವಸ್ವಾತ್ಮನಿವೇದನಂ ಬಲಿರಭೂತ್ ಕೈವಲ್ಯಮೇಷಾಂ ಸಮಮ್ ॥ ೧ ॥

ವಿ. ಸೂ.—ಈ ಹಾಡು 'ಪರಸನ್ನವೆಂಕಟ' ಎಂಬ ಮುದ್ರಿಕೆಯಿಂದ ಹ್ಯವರ ಸಂಕಲನದಲ್ಲಿ ಪ್ರಸಿದ್ಧವಾಗಿದೆ; ಆದರೆ ನಮಗೆ ದೊರೆತ ಎಲ್ಲ ಪ್ರಾಚೀನ ಪ್ರತಿಗಳಲ್ಲಿಯೂ ಇದಕ್ಕೆ ಪುರಂದರದಾಸರ ಅಂಕಿತವಿದೆ.

## ೨ನೆಯ ಹಾಡು

ಈ ಹಾಡಿನಲ್ಲಿ ದಾಸರು ಹರಿಭಕ್ತನ ಶೀಲಗಳನ್ನು ವಿವರಿಸಿ ಅಂಥ ಶೀಲವಂತರಿಗೆ ಇಹಲೋಕವೇ ವೈಕುಂಠವಾಗಿ ಪರಿಣಮಿಸುವುದೆಂದು ಹೇಳಿದ್ದಾರೆ.

೧ **ನುಡಿ ಎರಡಾಗು**=ಕೊಟ್ಟ ಮಾತಿಗೆ ತಪ್ಪು; ಸುಳ್ಳಾಡು.
೨ **ಪಕ್ಷಪಾತ**=ಭೇದ.
೩ **ಅರವಟಿಗೆ**=ನೀರಿಲ್ಲದಲ್ಲಿ ದಾರಿಕಾರರಿಗೆ ನೀರು ಪೂರೈಸುವ ಸ್ಥಳ.
**ಸಾಲುಮರ**=ನೆರಳಿಗಾಗಿ ಮರ ನೆಡುವುದು.

## ೩ನೆಯ ಹಾಡು

ಪರಮಾತ್ಮನು ತನ್ನ ಭಕ್ತರ ಊಳಿಗದಾಳಾಗಿ ಸೇವೆಮಾಡುವನೆಂಬುದನ್ನು ಈ ಪದ್ಯದಲ್ಲಿ ದಾಸರು ದೃಢವಿಶ್ವಾಸದಿಂದ ಹೇಳಿದ್ದಾರೆ.

೧ **ಹೂವ ತರುವರ ಮನೆಗೆ ಹುಲ್ಲ ತರುವ**:—ದೇವರು ತನ್ನ ಭಕ್ತರ ಮನೆಯಲ್ಲಿ ಆಳಾಗಿ ದುಡಿಯುವನು.

**ಗರುವ**=ಅಹಂಕಾರ.

**ಶಿಂಧುಶಯನ**=ಕ್ಷೀರಸಾಗರಶಾಯಿ.

೨ **ಕರಿವರದ**=(ಸಂ. ೧ ಪು. ೨೫೮).

೩ **ಪರಿಪೂರ್ಣ**:—ಪೂರ್ಣಮದಃ ಪೂರ್ಣಮಿದಂ (ಈಶಾವಾಸ್ಯ).

**ಸಾರೂಪ್ಯ**=ತನ್ನಂತೆಯೆ ಸ್ವರೂಪವಿರುವ ಮುಕ್ತಿ.

**ಮರುತನಂತರ್ಗತ**:—ವಾಯುದೇವರಲ್ಲಿ ಅಂತರ್ಯಾಮಿಯಾಗಿರುವವ.

೩ **ತೊಂಡ**=ಭಕ್ತ, ಸೇವಕ.

**ಅಂಡಜಾಸನ**=ಗರುಡವಾಹನ.

**ಗಂಡ**=ಮಿಕ್ಕಿದವ.

## ೪ನೆಯ ಹಾಡು

ಈ ಹಾಡಿನಲ್ಲಿ ದಾಸರು ಭಕ್ತಿಯನ್ನು ಸೌಭಾಗ್ಯವೆಂದು ಕಲ್ಪಿಸಿ, ಅಂತಹ ಸೌಭಾಗ್ಯವುಳ್ಳ ಮುತ್ತೈದೆಯನ್ನಾಗಿ ಭಕ್ತನನ್ನು ರೂಪಿಸಿದ್ದಾರೆ.

ವಿ. ಸೂ.— ಪತಿ-ಪತ್ನೀ ಭಾವದ ಭಕ್ತಿಯನ್ನು ಇಲ್ಲಿ ನೋಡಬಹುದು.

೧ **ಹತ್ತುನೂರು ನಾಮ**=ಸಹಸ್ರನಾಮ.

**ಮಾಂಗಲ್ಯ**=ಮಂಗಳಸೂತ್ರ.

**ಕಟ್ಟಾಣಿ**=ಬಂಗಾರದ ಗಟ್ಟಿಗುಂಡುಗಳ ಸರ.

೨ **ಪಟ್ಟೆವಾಳಿ**=ರೇಶ್ಮೆಯ ಸೀರೆ.

**ಕೊಡುವ ಧರ್ಮ**=ದಾನಗುಣ.

## ೫ನೆಯ ಹಾಡು

ಭಗವದ್ಭಕ್ತಿಯ ಅನುಭವಾನಂದದಲ್ಲಿ ತಲ್ಲೀನರಾದ ದಾಸರು, ಈ ಆನಂದವು ಜನ್ಮಜನ್ಮಾಂತರದಲ್ಲಿಯೂ ಇರಲಿ—ಎಂದು ಹಾರೈಸಿದ್ದುದನ್ನು ಈ ಹಾಡಿನಲ್ಲಿ ನೋಡಬಹುದು.

೧ **ಹಲಕಾಲ**=ಜನ್ಮಜನ್ಮಾಂತರ.
**ಮಂದಜ**=ಕಮಲ.
**ಮಂದಜಾಸನ**=ಬ್ರಹ್ಮ.

೨ **ಅಹಿ**=ಶೇಷ.
**ಗರುಡಾಹಿರುದ್ರರು ಅಣ್ಣನ ಮಕ್ಕಳು**=ಹರಿಕಥಾಮೃತಸಾರ ಅ. ೧. ಪ. ೩ ನೋಡಿರಿ. (ವಿಷ್ಣು ರಹಸ್ಯ).
**ಸುರರು.... ಬಾಂಧವರು**:—ಇವರು ಪರಮವಿಷ್ಣುಭಕ್ತರಾದುದರಿಂದ ನನಗೆ ಆಪ್ತರು.

## ೬ನೆಯ ಹಾಡು

ಮಾನವನ ಜೀವನಸಿದ್ಧಿ ದಾನಗುಣದಿಂದಲೆ ಎಂಬುದನ್ನು ಉಪನಿಷತ್ತುಗಳು ಹೇಳುವುವಾದರೂ ಭಗವದ್ಧ್ಯಾನವು ಎಲ್ಲ ದಾನಫಲಗಳನ್ನೂ ಮೀರಿಸುವಂತಹದೆಂದು ದಾಸರು ಇಲ್ಲಿ ಮನವರಿಕೆಯಿಂದ ಹೇಳಿದ್ದಾರೆ.

೪ **ಕಾಶಿ**=(ಸಂ. ೧ ಪು. ೨೯೨).

೫ **ಧಾರಣಿ**=ಉಪವಾಸ (ನಿರಾಹಾರ).
**ಪಾರಣಿ**=ಉಪವಾಸ ಮುರಿಯುವುದು.

ವಿ. ಸೂ.—ಈ ವ್ರತವನ್ನು (ಎಂದರೆ ಒಂದು ದಿನ ಉಪವಾಸ ಮರುದಿನ ಪಾರಣಿ) ಚಾತುರ್ಮಾಸ್ಯದಲ್ಲಿ ಮಾಡುವ ಸಂಪ್ರದಾಯವಿದೆ. (ಆಷಾಢ ಶು. ದ್ವಾದಶಿಯಿಂದ ಕಾರ್ತಿಕ ಶು. ದ್ವಾದಶಿಯ ವರೆಗಿನ ನಾಲ್ಕು ತಿಂಗಳು).

**ಭೀಷ್ಮಪಂಚಕ**:—ಕಾರ್ತಿಕ ಶುದ್ಧ ಏಕಾದಶಿಯಿಂದ ಪೌರ್ಣಿಮೆಯ ವರೆಗೆ ಉಪವಾಸವಿದ್ದು ಮಾಡುವ ವ್ರತ.
**ವಿಷ್ಣುಪಂಚಕ**:—ಪ್ರತಿ ತಿಂಗಳಲ್ಲಿಯೂ ಶುದ್ಧ ಮತ್ತು ವದ್ಯ ಏಕಾದಶಿ, ಹುಣ್ಣಿವೆ, ಅಮಾವಾಸ್ಯೆ ಮತ್ತು ಶ್ರವಣಾ ನಕ್ಷತ್ರಗಳಂದು ಉಪವಾಸ ಮಾಡುವ ಒಂದು ವೈಷ್ಣವವ್ರತ.
**ಚಾಂದ್ರಾಯಣ**:—ಚಾತುರ್ಮಾಸ್ಯದ ಒಂದು ತಿಂಗಳಲ್ಲಿ ಪ್ರತಿಪದೆಯಿಂದ ಪೌರ್ಣಿಮೆಯ ವರೆಗೆ ದಿನಾಲು ಒಂದೊಂದು ತುತ್ತಿನಂತೆ ಏರಿಸುತ್ತ ವದ್ಯ ಪ್ರತಿಪದೆಯಿಂದ ಅಮಾವಾಸ್ಯೆಯ ವರೆಗೆ

ದಿನಾಲು ಒಂದೊಂದು ತುತ್ತಿನಂತೆ ಇಳಿಸುತ್ತ ಬರುವ ಒಂದು ವ್ರತ. ಇದು ಚಂದ್ರನ ಕಲೆಗಳನ್ನು ಅವಲಂಬಿಸಿದ ವ್ರತವಾದುದರಿಂದ, ಇದಕ್ಕೆ ಚಾಂದ್ರಾಯಣ ವ್ರತವೆಂಬ ಹೆಸರು.

ವಿ. ಸೂ.—ಈ ಹಾಡಿನಲ್ಲಿ ದಾಸರು ಕೆಳಗೆ ಹೇಳಿದ ದಾನಗಳನ್ನು ನಿರ್ದೇಶಿಸಿದ್ದಾರೆ.

೧. ಗೋದಾನ, ೨. ಉದಕದಾನ, ೩. ಭೂದಾನ, ೪. ವಸ್ತ್ರದಾನ, ೫. ರತ್ನದಾನ, ೬. ವಿದ್ಯಾದಾನ, ೭. ಕನ್ಯಾದಾನ, ೮. ಸುವರ್ಣದಾನ, ೯. ಅನ್ನದಾನ.

## ೭ನೆಯ ಹಾಡು

ಇದರಲ್ಲಿಯೂ ಶ್ರೀ ಹರಿಧ್ಯಾನದ ಮಹತ್ತ್ವವನ್ನು ದಾಸರು ವಿವರಿಸಿದ್ದಾರೆ.

೧ **ಮರೆದು**=ಗೊತ್ತಿಲ್ಲದೆ

**ವಜ್ರ**=ಇಂದ್ರನ ಆಯುಧ....ಪರ್ವತಗಳಿಗೆ ಮೊದಲು ರೆಕ್ಕೆಗಳಿದ್ದುವೆಂದೂ ಅವು ಹಾರಿಹಾರಿ ಲೋಕಕ್ಕೆ ತೊಂದರೆ ಕೊಡತೊಡಗಿದಾಗ ಇಂದ್ರನು ತನ್ನ ವಜ್ರಾಯುಧದಿಂದ ಅವುಗಳ ರೆಕ್ಕೆಗಳನ್ನು ಕಡಿದುಹಾಕಿದನೆಂತಲೂ ಪುರಾಣದ ಕಥೆಗಳು ಹೇಳುತ್ತಿವೆ. ರೆಕ್ಕೆಗಳು ಹೋದಮೇಲೆ ಪರ್ವತಗಳು ಅಚಲವಾದುವು.

**ಮೇರು**=ಭೂಮಿಯ ಕೇಂದ್ರಸ್ಥಾನದಲ್ಲಿರುವ ಪೌರಾಣಿಕ ಪರ್ವತ. ಇದು ಸುವರ್ಣಮಯವಾಗಿರುವುದೆಂದೂ ಇದರ ಸುತ್ತಲು ಎಲ್ಲ ಗ್ರಹಗಳು ತಿರುಗುತ್ತವೆಂದೂ ನಂಬಿಕೆ.

೩ **ಕಾಳಿಂದಿ**=ಯಮುನೆ.

## ೮ನೆಯ ಹಾಡು

ಶ್ರೀಹರಿಯ ಧ್ಯಾನದ ಮಾಹಾತ್ಮ್ಯವನ್ನರಿತ ದಾಸರು, ಈ ಪದ್ಯದಲ್ಲಿ, ತಮ್ಮ ಮನಸ್ಸಿಗೆ ಶ್ರೀಹರಿಯ ಸ್ಮರಣೆಯನ್ನು ಎಂದೂ ಮರೆಯಬೇಡವೆಂದು ಎಚ್ಚರಿಕೆ ಕೊಡುತ್ತಾರೆ.

೧ **ಚರಣ**=ಚರಣಸ್ಮರಣೆ.

**ಯಾಗ**=ಅಶ್ವಮೇಧಾದಿ ಮಹಾಯಜ್ಞಗಳು.

**ಯಜ್ಞ**=ಗೃಹಸ್ಥನು ನಿತ್ಯವೂ ಮಾಡಬೇಕಾದ ಪಂಚಮಹಾ ಯಜ್ಞಗಳು ೧. ಭೂತಯಜ್ಞ, ೨. ಮನುಷ್ಯಯಜ್ಞ, ೩. ಪಿತೃ ಯಜ್ಞ, ೪. ದೇವಯಜ್ಞ, ೫. ಬ್ರಹ್ಮಯಜ್ಞ.

**ಯೋಗಿ**=ಪಾತಂಜಲ ಯೋಗಶಾಸ್ತ್ರದಂತೆ ಅಧ್ಯಾತ್ಮಸಾಧನೆ ಮಾಡಿಕೊಂಡವ.

**ಯತಿ**=ಸಂನ್ಯಾಸಿ.

**ನಾರದ**=(ಸಂ. ೧ ಪು. ೨೫೭).

೨ **ಗತಿಯು ತಪ್ಪ**=ಸಾವುಬರು.

೩ **ಪರದ ಪದವಿ**=ಮುಕ್ತಿ.

## ೯ನೆಯ ಹಾಡು

ಹರಿಸ್ಮರಣೆಯ ಸೌಲಭ್ಯವನ್ನು ದಾಸರು ಈ ಪದ್ಯದಲ್ಲಿ ಹೇಳಿದ್ದಾರೆ.

೧ **ಮದಗಜಗಮನೆ**=ಹೆಂಡತಿ.

೨ **ನೆರೆ**=ಕಠಿಣವಾದ, ಹೆಚ್ಚಾದ.

**ಜರ್ಜರಿತನಾಗು**=ಹಣ್ಣಾಗು.

## ೧೦ನೆಯ ಹಾಡು

ಹರಿನಾಮಮಂತ್ರವು ಕೇವಲ ಭಕ್ತಿಯೊಂದರಿಂದಲೆ ಸಾಧಿಸುವಂತಹದು. ಇದರ ಆದರ್ಶ ಪರಮಾತ್ಮನ ಸಾಕ್ಷಾತ್ಕಾರ. ಸಾಮಾನ್ಯವಾಗಿ ಈ ನಾಮಮಂತ್ರ ವೊಂದನ್ನು ಬಿಟ್ಟರೆ, ಮಂತ್ರಸಿದ್ಧಿಯನ್ನು ಬಯಸುವವರು ಯಾವುದಾದರೊಂದು ಭೌತಿಕ ಕಾಮನೆಗಾಗಿ ಅದನ್ನು ಬಳಸುವರು. ಯಾವ ಕಾಮನೆಯೂ ಭಕ್ತನಿಗಿಲ್ಲ ವೆಂಬ ಮಾತನ್ನು ದಾಸರು ಇಲ್ಲಿ ಹೇಳಿದ್ದಾರೆ.

೧ **ಯಂತ್ರವಾಹಕ**=ಜಗತ್ ಸೂತ್ರಧಾರಿ.

## ೧೧ನೆಯ ಹಾಡು

ಶ್ರೀಹರಿಯ ಒಂದು ನಾಮವು ಎಲ್ಲ ಮಂತ್ರಗಳನ್ನೂ ಮೀರಿಸುವಂತಹದೆಂಬ ಮಾತನ್ನು ಇಲ್ಲಿ ದಾಸರು ವಿವರಿಸುತ್ತ, ಅಂತಹ ಮಂತ್ರವನ್ನು ಜಪಿಸುವುವಕ್ಕೆ ಜನ ರನ್ನು ಕುರಿತು ಉಪದೇಶಿಸಿದ್ದಾರೆ.

೨ **ದ್ರೌಪದಿ**=(ಸಂ. ೧ ಪು. ೨೧೫) ಮತ್ತು (ಸಂ. ಪು. ೧೯೧).
**ಸಾಕ್ಷೀಭೂತ**=ಅನುಭವದಿಂದ ಕಂಡುಕೊಂಡದ್ದು.
೩ **ರೇಣು**=ಅತಿ ಚಿಕ್ಕದಾದ ಕಣ.
**ಸಂಜೀವ**=ಹೊಸ ಜೀವವನ್ನು ಕೊಡುವಂಥ (ಉದ್ಧರಿಸುವ).

## ೧೨ನೆಯ ಹಾಡು

ಶ್ರೀಹರಿಯ ಅನಂತನಾಮಗಳಲ್ಲಿ ನರಸಿಂಹನಾಮದ ಮಹಿಮೆಯನ್ನು ಈ ಹಾಡಿನಲ್ಲಿ ಹೇಳಲಾಗಿದೆ.

೧ **ಪ್ರಹ್ಲಾದ**=(ಸಂ. ೧ ಪು. ೨೬೨).
**ತಲೆಗಾಯು**=ಸಂರಕ್ಷಿಸು.
**ಅಸುರ**=ಹಿರಣ್ಯಕಶಿಪು
**ಪಶುಪತಿ**=ಶಿವ (ಸಂ. ೧ ಪು. ೧೯೫).
**ಮೂಲಮಂತ್ರ**:—ಓಂ ನಮೋ ವಾಸುದೇವಾಯ.
೨ **ಧ್ರುವ**=(ಸಂ. ೧ ಪು. ೨೬೧).
**ವಿಭೀಷಣ**=(ಸಂ. ೧ ಪು. ೨೧೨).
**ಅಜಾಮಿಳ**=(ಸಂ. ೧ ಪು. ೨೬೪).

೩ ನರಸಿಂಹಮಂತ್ರವು ಭೂತೋಚ್ಚಾಟನೆ ಮಾಡುವುದೆಂಬ ಪರಂಪರೆ ನಮ್ಮಲ್ಲಿದೆ.

## ೧೩ನೆಯ ಹಾಡು

ದಾಸರು ಈ ಹಾಡಿನಲ್ಲಿ, ಭಕ್ತರು ಯಾವಾಗಲೂ ಶ್ರೀಹರಿಯನ್ನು ಧ್ಯಾನಿಸುತ್ತಿರಬೇಕೆಂದು ತಿಳಿಸಿದ್ದಾರೆ.

೧ **ತ್ರುಟಿ**=ಕ್ಷಣದ ೧/೪ ಭಾಗ { ೨ ತ್ರುಟಿ=೧ ಲವ. ೨ ಲವ=೧ ಕ್ಷಣ.
**ಘಟಿ**=ಗಳಿಗೆ (೨೪ ಮಿನಿಟು).
**ಜಠರದಿ ಹಿರಿಯ**=ಸರ್ವಲೋಕಗಳನ್ನು ತನ್ನಲ್ಲಿ ಇರಿಸಿಕೊಂಡವ.

**ಹಿರಣ್ಯಾಕ್ಷ**:

ಕಶ್ಯಪ ಮತ್ತು ದಿತಿ ಇವರ ಮಗ. ಇವನ ತಮ್ಮ ಹಿರಣ್ಯಕಶಿಪು. ಸನಕಾದಿಗಳ ಶಾಪದಿಂದ ಜಯ ವಿಜಯರೆಂಬ ವೈಕುಂಠದ ದ್ವಾರಪಾಲಕರು

ಮೂರು ಜನ್ಮದಲ್ಲಿ ದಾನವರಾಗಿ ಹುಟ್ಟಿ, ವಿಷ್ಣುವಿನಿಂದ ಹತರಾಗಿ ಮೋಕ್ಷಹೊಂದಿದರು.

ಹಿರಣ್ಯಾಕ್ಷನು ವಿಷ್ಣುವಿನ ಸಂಗಡ ಯುದ್ಧಮಾಡಿದನು. ಈ ಯುದ್ಧದಲ್ಲಿ ವಿಷ್ಣು ಸೋತು ಕೊಲ್ಲಲ್ಪಡುವನೆಂಬ ಅಂಜಿಕೆ ಹುಟ್ಟಿತು; ಆದರೆ ಮುಂದೆ ವಿಷ್ಣು ಗೆಲ್ಲತೊಡಗಲು, ಹಿರಣ್ಯಾಕ್ಷನು ಭೂಮಂಡಲವನ್ನು ತೆಗೆದುಕೊಂಡು ಓಡತೊಡಗಿದನು. ವಿಷ್ಣು ವರಾಹರೂಪ ತಾಳಿ ಇವನನ್ನು ಕೊಂದನು. (ಭಾಗ ೩–೨೮)

**ಕಂಸ**=(ಸಂ. ೧ ಪು. ೨೫೧).

೨ **ಕ್ವಣಿತ**=ಕಣಕಣ ಸಪ್ಪಳಮಾಡುವ.

**ಗೋವರ್ಧನಧಾರಿ**=(ಸಂ. ೧ ಪು. ೨೮೯).

೩ **ತಸ್ಕರ**=ಕಳ್ಳ.

**ಮುರಿಯು**=ಮುರಿಯಲಿ.

೫ **ಹೋಗ**=ಹೋಗನು.

**ಭಾರತೀಪತಿ**=ವಾಯುದೇವರು.

**ಕೊರೆಯು**=ಕೊರೆಯನು (ಶಿಕ್ಷಿಸುವುದಿಲ್ಲ).

# ೨ ಭಕ್ತಮಾಹಾತ್ಮ್ಯ

ಇದುವರೆಗಿನ ಹಾಡುಗಳಲ್ಲಿ ಭಕ್ತಿಯ ಮಹಿಮೆಯನ್ನು ಹೇಳಲಾಗಿದೆ; ಇನ್ನು ಭಕ್ತರ ಮಾಹಾತ್ಮ್ಯವನ್ನು ಈ ಭಾಗದಲ್ಲಿ ಕ್ರಮವಾಗಿ ಹೇಳಲಾಗುವುದು.

## ೧೪ನೆಯ ಹಾಡು

ಭಕ್ತನ ಅಂಗಾಂಗಗಳೂ ಒಂದೊಂದು ಪುಣ್ಯಕ್ಷೇತ್ರಕ್ಕೆ ಸಮಾನವಾಗಿರುವುವೆಂದು ದಾಸರು ವಿವರಿಸಿದ್ದಾರೆ.

೧ **ಕುರುಕ್ಷೇತ್ರ**=(ದಿಲ್ಲಿಯ ಹತ್ತಿರ ೫೦ ಚಚ್ಚೌಕು ಮೈಲು ವಿಸ್ತಾರದ ಪುಣ್ಯಕ್ಷೇತ್ರ. ವೇದಕಾಲದಿಂದಲೂ ಹೆಸರು ಪಡೆದು ಅನೇಕ

ಸರೋವರಗಳನ್ನೊಳಗೊಂಡಿದೆ. ಪಾಂಡವ-ಕೌರವರ ಯುದ್ಧವು ಇದೇ ಸ್ಥಳದಲ್ಲಿ ಆಯಿತು.

**ಕಾಶೀಪುರ**=(ಸಂ. ೧ ಪು. ೪೯೨).

**ಮಧುವೈರಿ**=ಮಧುಸೂದನ=ಕೃಷ್ಣ (ಸಂ. ೧ ಪು. ೩೦೪).

**ಮಣಿಕರ್ಣಿಕೆ**=(ಸಂ. ೩ ಹಾಡು ೪೪).

**ಅಯೋಧ್ಯಾಪುರ**=(ಸಂ. ೧ ಪು. ೨೨೨).

೨ **ದ್ವಾರಾವತಿ**=(ಸಂ. ೧ ಪು. ೨೪೪).

**ಮಥುರೆ**=(ಸಂ. ೧ ಪು. ೨೪೪).

**ಕೇದಾರ** :—

ಹೃಷಿಕೇಶದಿಂದ ರುದ್ರಪ್ರಯಾಗ ದಾಟಿ ಕೇದಾರಕ್ಕೆ ಹೋಗುವ ದಾರಿ ಇದೆ. ಇದೊಂದು ಶೈವಕ್ಷೇತ್ರ. ಇಲ್ಲಿಯ ಶಿವಲಿಂಗವು ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾಗಿದೆ.

**ಬದರಿ**=(ಸಂ. ೧ ಪು. ೨೩೭).

೩ **ಮಾಯಾವತಿ**=ಹರಿದ್ವಾರ ಅಥವಾ ಗಂಗಾದ್ವಾರ :—ಇದು ಪೌರಾಣಿಕ ಸಪ್ತಪುರಿಗಳಲ್ಲಿ ಒಂದಾಗಿದೆ. (ಉ. ಪ್ರ.)

**ಹರಿದ್ವಾರ**:—

ಇದೊಂದು ಪ್ರಸಿದ್ಧ ಕ್ಷೇತ್ರ ಮತ್ತು ರೇಲ್ವೆ ನಿಲ್ದಾಣ. ಕಲಕತ್ತಾ, ಪಂಜಾಬ ಮತ್ತು ದಿಲ್ಲಿ ಪಟ್ಟಣಗಳಿಂದ ಇಲ್ಲಿಗೆ ಹೋಗಲು ಬರುತ್ತದೆ. ದಿಲ್ಲಿ, ದೇಹರಾದೂನ್ ಪಟ್ಟಣಗಳಿಂದ ಹೆದ್ದಾರಿ ಇಲ್ಲಿಯವರೆಗೆ ಬಂದಿದೆ.

**ಕಂಚಿ**=(ಸಂ. ೧ ಪು. ೨೩೮).

## ೧೫ನೆಯ ಹಾಡು

ಗುಣಾಕರ ಹೊನ್ನತಿಯನ್ನು ದಾಸರು, ಈ ಹಾಡಿನಲ್ಲಿ ಹೇಳಿದ್ದಾರೆ.

೧ **ನರಹರಿ**=ನರಸಿಂಹ.

**ಮಾರಿ**=ಮೃತ್ಯುದೇವತೆ.

**ಮಸಣಿ**=ಪಿಶಾಚ. (ಸ್ಮಶಾನಾಧಿಪನಾದ ದೇವರು).

**ಮೃತ್ಯು**=ಮೃತ್ಯುದೇವತೆ.
**ಜಂಗುಳಿ**=ದನದ ಹಿಂಡು.
೨ **ಬೊಮ್ಮ**=ಭರಮಪ್ಪ.
**ಬೀರ**=ಕುರುಬರ ದೇವತೆ.
**ಬೇತಾಳ**=ಪಿಶಾಚ (ತ್ಸ—ವೇತಾಲ).
**ಜಟ್ಟಿಗ**=ಹಳ್ಳಿಯ ದೇವರು.
**ಕರ್ಮ**=ಈ ದೇವತೆಗಳ ಪೂಜೆಪುರಸ್ಕಾರ ಮುಂ.
೩ **ಜಕ್ಕಣಿ**=(ತ್ಸ—ಯಕ್ಷಿಣಿ) ಉತ್ತರಕರ್ನಾಟಕದಲ್ಲಿ ಬಹಳ ಮನೆಗಳಲ್ಲಿ ಶುಭಪ್ರಸಂಗಗಳಲ್ಲಿ ಜಕ್ಕಣಿಯ ಪೂಜೆ ನಡೆಯುತ್ತದೆ. ಇದೊಂದು ದೇಶಾಚಾರ.
**ಜಲದೇವರು**=ಹೆಣ್ಣುಮಕ್ಕಳು ಬಸಿರಿದ್ದಾಗ ಅಥವಾ ಹಡೆದ ಮೇಲೆ ಈ ಜಲದೇವರ ಪೂಜೆ ನಡೆಯುತ್ತದೆ.
**ಭಿಕ್ಕಾರಿ**=(ತ್ಸ—ವಿಕಾರಿ) ಕಿರುಕುಳ ದೇವತೆಗಳು.
**ಸಾಕಾರ**=ಪ್ರತ್ಯಕ್ಷ ಮೂರ್ತಿಗಳು.

## ೧೬ನೆಯ ಹಾಡು

ಹಿಂದಿನ ಹಾಡಿನ ವಿಷಯವೇ ಇಲ್ಲಿ ಮುಂದುವರೆದಿದೆ.

೧ **ಪಾವನನವ**=ಪಾವನನು+ಅವ.
**ಸಿರಿಮುದ್ರೆ** = ವೈಷ್ಣವರು ಧರ್ಮಾದಿಕಾರ್ಯಕ್ಕಾಗಿ ದೇಹಕ್ಕೆ ಹಚ್ಚಿಕೊಳ್ಳುವ ಐದು ಮುದ್ರೆಗಳ (ಶಂಖ, ಚಕ್ರ, ಗದಾ, ಪದ್ಮ, ನಾರಾಯಣ) ಸಮೂಹ.
**ಉರದಿ ನಾಭಿಗೆ ನಾಮ**=(ಸಂ. ೧ ಪು. ೨೫೦).
**ನಳಿನಾಕ್ಷಮಣಿ**=ಕಮಲಾಕ್ಷಮಣಿಮಾಲೆ.
೨ **ದಲ**=ತುಲಸಿಯ ದಳ.
**ಸ್ಥಲದ**=ತುಲಸಿ ಇರುವ ಸ್ಥಳ: ವೃಂದಾವನ.
**ಬಳಲಿದ**=ಬಾಡಿದ ತುಳಸಿಯ ಗಿಡ.

೩ **ಜಾಗರ**=ರಾತ್ರಿಯಲ್ಲಿ ಎಚ್ಚರವಿದ್ದು ಹರಿನಾಮಸ್ಮರಣೆ ಮಾಡುವುದು.

**ಕಾಕು**=ಕೀಳುಮಾತು, ನಿಂದೆ.

೪ **ಕೃತಿರಮಣ**=ಪ್ರದ್ಯುಮ್ನ, (ಶ್ರೀಹರಿಯ ಚತುರ್ವ್ಯೂಹ ಮೂರ್ತಿಗಳಲ್ಲಿ ಒಂದು).

**ಶತವೃಂದಾರಕರ ನೆಲೆಯ ತಲೆ ಪಾವನ**=ದೇವತೆಗಳ ಗುಡಿಗಳಿಗೆ ನಮಸ್ಕರಿಸಿದಂತಹ ತಲೆ ಪಾವನ (ಶ್ರೇಷ್ಠತಸ್ಥರು).

**ಮತಿಬೇಡಿದ**:—ಸೃಷ್ಟಿಯ ಪೂರ್ವದಲ್ಲಿ ಬ್ರಹ್ಮನು ನಾರಾಯಣನಿಗೆ ಮಾಡಿದ ಬಿನ್ನಹ (ಭಾಗ ೨–೯).

**ಅಜ**=ಬ್ರಹ್ಮ.

೫ **ಭೂಮಿಪತಿ**=ಭೂದೇವೀರಮಣ : ವಿಷ್ಣು.

**ನಾಮಧಾರಿ**=ಹರಿದಾಸ ದೀಕ್ಷೆಹೊಂದಿದವ.

## ೧೭ನೆಯ ಹಾಡು

ಹರಿದಾಸರ ಮಹಿಮೆಯನ್ನು ಹೇಳಿ ಶ್ರೀಪುರಂದರದಾಸರು ಈ ಹಾಡಿನಲ್ಲಿ ಅವರನ್ನು ನಿಂದಿಸದಿರುವಂತೆ ಲೋಕಕ್ಕೆ ಬೋಧಿಸುತ್ತಾರೆ.

೧ **ಗಾಢ**=ದೃಢವಾಗಿ.

**ರಾಮ** :—

ಅಯೋಧ್ಯೆಯ ಅರಸು ದಶರಥನ ಮಗ. ಈತನ ತಾಯಿ ಕೌಸಲ್ಯೆ. ಶ್ರೀಹರಿಯ ಏಳನೆಯ ಅವತಾರ. ತಂದೆಯ ವಚನ ಪಾಲಿಸಲು ೧೪ ವರ್ಷ ವನವಾಸ ಮಾಡಿದನು. ಸೀತೆಯನ್ನು ಒಯ್ದ ರಾವಣಾದಿ ರಾಕ್ಷಸರನ್ನು ಸಂಹರಿಸಿ ಬಂದು ಅಯೋಧ್ಯೆಯಲ್ಲಿ ಪಟ್ಟಗಟ್ಟಿಕೊಂಡು ಆಳಿದನು.

**ರಾವಣ**=(ಸಂ. ೧ ಪು. ೨೩೩).

**ತಮ್ಮ**=ವಿಭೀಷಣ.

**ಕೌರವ**=(ಸಂ. ೨ ಪು. ೨೦೧).

**ಧರ್ಮ**=(ಸಂ. ೨ ಪು. [illegible]೨).

೨ **ಸನಕಾದಿ**=(ಸಂ. ೧ ಪು. ೨೫೮).

೩ **ಕನಕ** :—

ಪುರಂದರದಾಸರ ಸಮಕಾಲಿಕರಾದ ಹರಿದಾಸರು. ಹಿರೆಕೆರೂರ ತಾಲೂಕಿನ ಕಾಗಿನೆಲೆ ಇವರ ಹುಟ್ಟಿದೂರು. ಬಂಕಾಪುರ ತಾಲೂಕು ಬಾಡದಿಂದ ಆದಿಕೇಶವನ ಮೂರ್ತಿಯನ್ನು ತಂದು ಕಾಗಿನೆಲೆಯಲ್ಲಿ ಸ್ಥಾಪಿಸಿದರು. 'ಆದಿಕೇಶವ' 'ಕಾಗಿನೆಲೆಯಾದಿಕೇಶವ' 'ಬಾಡದಾದಿಕೇಶವ' ಇವು ಇವರ ಮುದ್ರಿಕೆಗಳು. ಇವರು ಅನೇಕ ಕೀರ್ತನೆಗಳನ್ನು ರಚಿಸಿರುವರಲ್ಲದೆ ಹರಿಭಕ್ತಿಸಾರ, ಮೋಹನತರಂಗಿಣಿ, ನಳಚರಿತ್ರೆ, ರಾಘವಧಾನ್ಯಚರಿತೆ (ಅಚ್ಚಾಗಿಲ್ಲ) ಎಂಬ ಕಾವ್ಯಗಳನ್ನು ಬರೆದಿದ್ದಾರೆ.

**ಕಬ್ಬಲಿಗ**=ಕರ್ನಾಟಕದಲ್ಲಿಯ ಒಂದು ಜಾತಿ. (ಇದರಲ್ಲಿ ಅಂಬಿಗ, ಸುಣ್ಣಗಾರ, ಮೀನಗಾರ ಜಾತಿಗಳಿವೆ.)

**ತುಂಬುರು**=(ಸಂ. ೧ ಪು. ೨೭೨).

೪ **ಜನಕಜಾ**=ಸೀತೆ.

**ಪಡೆಕೊಳ್ಳಣ್ಣ**=ಜ್ಞಾನಪಡೆದುಕೊಳ್ಳಣ್ಣ.

೫ **ದೇವಕಿ**=(ಸಂ. ೧ ಪು. ೨೫೯).

**ಭಾವಜ**=ಕಾಮ.

ವಿ. ಸೂ.—ಕನಕದಾಸರನ್ನು ಬೆಯ್ಯುವುದನ್ನು ಕಿವಿಯಾರೆ ಕೇಳಿ ದಾಸರು ಆ ನಿಂದಕರಿಗೆ ಆಡಿದ ಮಾತುಗಳು ಈ ಹಾಡಿನಲ್ಲಿ ಇದ್ದಂತೆ ಕಾಣುತ್ತವೆ.

## ೧೮ನೆಯ ಹಾಡು

ದಾಸರು ಈ ಸುಳಾದಿಯಲ್ಲಿ ಹರಿದಾಸರ ಮಾಹಾತ್ಮ್ಯವನ್ನು ಪೌರಾಣಿಕ ಉದಾಹರಣೆಗಳೊಂದಿಗೆ ವಿವರಿಸಿದ್ದಾರೆ.

೧ **ಮರ್ಯಾದೆ**=ಸಂಪ್ರದಾಯ.

**ಸುರಗಂಗೆ**=ಗಂಗಾನದಿ.

**ಜಗದೇಕನಾಥ**=ಶ್ರೀಹರಿ.

(ಸಾಮಾನ್ಯವಾಗಿ ಎಲ್ಲ ಹರಿದಾಸರಿಗೂ ಈ ಮಾತುಗಳು ಅನ್ವಯಿಸುವವು. ಆದರೂ ಪಾಂಡವರೈವರನ್ನು ಕುರಿತು ಆಡಿದ ಮಾತುಗಳಿವು ಎಂಬ ತಿಳಿವಳಿಕೆಯಿಂದ ಅವರು ಎಂಬಲ್ಲಿ ಐವರು ಎಂಬ ಪಾಠಾಂತರವನ್ನು ಕೊಟ್ಟಿದ್ದಾರೆ.)

### ೨ ಹಸ್ತಿನಾಪಟ್ಟಣವ ನೇಗಿಲಲೆತ್ತಿದನೊಬ್ಬ=( ಹಸ್ತಿನಾಪುರ– ಸಂ. ೧ ಪು. ೨೪೫).

ಒಮ್ಮೆ ದುರ್ಯೋಧನನಾಡಿದ ಮಾತಿನಿಂದ ಸಿಟ್ಟಿಗೆದ್ದ ಬಲರಾಮನು (ಭಕ್ತ-ಶ್ರೇಷ್ಠಶೇಷನ ಅವತಾರ) ತನ್ನ ನೇಗಿಲಿನಿಂದ ಹಸ್ತಿನಾವತಿಯನ್ನು ಎತ್ತಿ ಗಂಗೆಯಲ್ಲಿ ಹಾಕಲಿಕ್ಕೆ ಹವಣಿಸಿದನು. (ಭಾಗ ೧೦–೬೮–೪೧) ಇದಲ್ಲದೆ ಹಸ್ತಿನಾಪುರದ ತಳಹದಿಯನ್ನೇ ಬದಲಿಸಿದನು. (ವಿಷ್ಣು ೫–೩೫).

### ಅಸ್ತಮಿಸಿದ ಇನಮಂಡಲಕ್ಕೆ ಉದಯವಿತ್ತನೊಬ್ಬ :—

ಅಭಿಮನ್ಯುವಿನ ವಧೆಯಾದ ಬಳಿಕ ಜಯದ್ರಥನನ್ನು ಸೂರ್ಯಾಸ್ತದೊಳಗಾಗಿ ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ ಅರ್ಜುನನಿಗಾಗಿ ಶ್ರೀಕೃಷ್ಣನು, ಕೃತ್ರಿಮವಾದ ಸೂರ್ಯಾಸ್ತವನ್ನು ಸೃಷ್ಟಿಸಿ, ತನ್ನ ಆ ಭಕ್ತನಿಗಾಗಿ ಪುನಃ ಉದಯವನ್ನು ತೋರಿಸಿದನು. (ಭಾರ. ದ್ರೋ. ಪ. ೧೪೬).

### ಪೃಥ್ವಿಯ ಅಂಬಿನಲಿ ಹರಗಿದನೊಬ್ಬ:—

ಕುರುರಾಜನು ತನ್ನ ಶರೀರವನ್ನೇ ಅಂಬನ್ನಾಗಿ ಮಾಡಿ ಭೂಮಿಯನ್ನು ಹರಗಿದನು. (ಬ್ರಹ್ಮವೈವರ್ತ ೨–೧೬).

### ೩ ಐವತ್ತು ಸಾವಿರ ಯೋಜನವೆತ್ತ ಸಂಜೀವಿನಿಯೆತ್ತ.... ತಾಹೋದೆತ್ತ:—

ಕಪಿಸೇನೆಗೆ ಸೋಲುಂಟಾಗಿ ಲಕ್ಷ್ಮಣನು ಮೂರ್ಛಿತನಾಗಿ ಬಿದ್ದಾಗ, ಜಾಂಬವಂತನ ಹೇಳಿಕೆಯ ಮೇರೆಗೆ ಹನುಮಂತನು ಐವತ್ತು ಸಾವಿರ ಯೋಜನ ದೂರದಿಂದ ಸಂಜೀವಿನಿ ಪರ್ವತವನ್ನು (ದ್ರೋಣಗಿರಿ) ಕಿತ್ತಿ ಎತ್ತಿಕೊಂಡು ತಂದನು. ಸೈನ್ಯವೆಲ್ಲ ಚೇತರಿಸಿದ ಮೇಲೆ ರಣಭೂಮಿಯಿಂದಲೆ ಆ ಪರ್ವತವನ್ನು ತೂರಿ ಮೂಲಸ್ಥಳದಲ್ಲಿ ನಿಲ್ಲಿಸಿದನು. (ರಾಮಾ. ಯುದ್ಧ. ೫೦)

### ೪ ಸ್ವರ್ಗದ ಮುಕ್ತಿಯ ಅಂಬಿಲಿ ಇಸುವರು:—(?) ಮಾರ್ಗಣದಿಂದ.... ಎರೆವರು:—

ಭೀಷ್ಮಾಚಾರ್ಯರು ಶರಪಂಜರದ ಮೇಲೆ ಮಲಗಿದಾಗ, ಅರ್ಜುನನು ತನ್ನ ಮಂತ್ರಿಸಿದ ಪಾತಾಳದ ಉದಕವನ್ನು ಮೇಲೆ ತಂದು, ಭೀಷ್ಮಾಚಾರ್ಯರ ಬಾಯಾರಿಕೆಯನ್ನು ತಣಿಸಿದನು. (ಭಾರ. ಭೀಷ್ಮ. [illegible]).

**ನೀರ್ಗೆಯ್ಸಿ ಭೂಮಿಯ ಮೇಲಿಟ್ಟು ಮೆರೆವರು=?**

**೫ ಭಾಗೀರಥಿಯನೀಂಟಿದರುಂಟೆ**:—

ಭಗೀರಥನ ತಪಸ್ಸಿಗೆ ಮೆಚ್ಚಿ ಭಾಗೀರಥಿ ಶಿವನ ತಲೆಯಿಂದಿಳಿದು ರಭಸದಿಂದ ಮುಂದುವರಿದಾಗ, ದಾರಿಯಲ್ಲಿಯ ಜಹ್ನುಮುನಿಯ ಯಜ್ಞಶಾಲೆಯನ್ನು ಹೊಕ್ಕಳು. ಸಿಟ್ಟಿಗೆದ್ದು ಜಹ್ನು ಭಾಗೀರಥಿಯನ್ನು ಕುಡಿದನು. ಭಗೀರಥನು ಪ್ರಾರ್ಥನೆ ಮಾಡಲು ಭಾಗೀರಥಿ ತನ್ನ ಮಗಳೆಂದು ಒಪ್ಪಿಕೊಂಡರೆ ಹೊರಬಿಡುವೆನೆಂದು ಜಹ್ನು ಮುನಿ ತಿಳಿಸಿದನು. ಅದರಂತೆ ಒಪ್ಪಿಕೊಳ್ಳಲು ಜಹ್ನು ತನ್ನ ಕಿವಿಯಿಂದ ಭಾಗೀರಥಿಯನ್ನು ಹೊರಕ್ಕೆ ಕಳಿಸಿದನು. (ರಾಮಾ. ಬಾಲ. ೪೩) ಭಾರ. ಶಾಂತಿ ೪೯).

**ಸಾಗರವ ಆಪೋಶನಕೊಂಡವರುಂಟೆ**:—

ಕಾಲಕೇಯರೆಂಬ ರಾಕ್ಷಸರು ಸಮುದ್ರದಲ್ಲಿ ಅಡಗಿಕೊಂಡು ಲೋಕಕಂಟಕರಾಗಿದ್ದರು. ಆಗ ದೇವತೆಗಳು ಬ್ರಹ್ಮನ ಬಳಿಗೆ ಹೋದರು. ಬ್ರಹ್ಮನು ಅವರನ್ನು ಅಗಸ್ತ್ಯಮುನಿಯ ಬಳಿಗೆ ಕಳಿಸಿದನು. ಅಗಸ್ತ್ಯನು ಸಮುದ್ರವನ್ನು ಶೋಷಣ ಮಾಡಲಾಗಿ ಕಾಲಕೇಯರು ಹೊರಬಿದ್ದರು. ಆಗ ದೇವತೆಗಳು ಅವರನ್ನು ಕೊಂದರು. (ಭಾರ. ವ. ಪ. ೯೯).

**ನಾಗಾಭರಣವ ಮಾಡಿದರುಂಟೆ**:—(ಭಾ. ಅನು. ೨೦೭).

ಭಾಗವತೋತ್ತಮನಾದ ಶಿವನು ನಾಗಾಭರಣ ಮಾಡಿಕೊಂಡನು.

## ೧೯ನೆಯ ಹಾಡು

ಪರಮಾತ್ಮನ ಕರುಣಾಕರತೆಯ ಸ್ವಭಾವವು ಸತ್ಯವಾಗಿ ಪರಿಣಮಿಸುವುದು ಭಕ್ತಿಸಾಧನಸಿದ್ಧರಾದ ಭಕ್ತರಲ್ಲಿ—ಎಂಬುದನ್ನು ತಿಳಿಸುವುದಕ್ಕಾಗಿ, ದಾಸರು ಈ ಕೀರ್ತನೆಯನ್ನು ರಚಿಸಿದ್ದಾರೆ.

೧ **ಹಯವದನ**=(ಸಂ. ೨ ಪು. ೨೧೧).
**ಮದಕರಿ**=ಗಜೇಂದ್ರ (ಸಂ. ೧ ಪು. ೨೫೮).
**ಪದುಮೇಶ**=ಪದುಮಾ+ಈಶ=ಲಕ್ಷ್ಮೀಪತಿ
೨ **ಅಂತ್ಯಜಳು**=ಚಂಡಾಲ ಸ್ತ್ರೀ.
**ವಿಪ್ರವರ**=ಅಜಾಮಿಳ.
**ಚಿಂತಾಯುತ**=ಚಿಂತಿಸಿದಷ್ಟೂ ವ್ಯಾಪಕವಾಗಿ ತೋರುವವ (ಅಚಿಂತ್ಯ).

## ೨೦ನೆಯ ಹಾಡು

ಪರಮ ಭಗವದ್ಭಕ್ತನಾದ ವಿದುರನ ಮಹಿಮೆ ಎಂತಹದೆಂಬುದನ್ನು ದಾಸರು ಈ ಹಾಡಿನಲ್ಲಿ ವಿಸ್ತರಿಸಿ ಹೇಳಿದ್ದಾರೆ.

೧ **ಪದುಮಜಾಂಡ**=ಬ್ರಹ್ಮಾಂಡ.

**ವಿದುರ**=(ಸಂ. ೧ ಪು. ೨೭೩. ಮತ್ತು ಸಂ. ೨ ಪು. ೨೨೩).

**ಕುರುರಾಯ**=ದುರ್ಯೋಧನ (ಸಂ. ೨ ಪು. ೨೦೧).

**ಖಳನ ಅನುಜ**=ದುಃಶಾಸನ (ಸಂ. ೨ ಪು. ೧೯೧).

**ರವಿಜ**=ಕರ್ಣ:—

ಕುಂತೀದೇವಿಯಲ್ಲಿ ಸೂರ್ಯನ ವರದಿಂದ ಹುಟ್ಟಿದ. ಚಿಕ್ಕತನದಲ್ಲಿಯೆ ತಾಯಿಯನ್ನು ಅಗಲಿದ ಕರ್ಣ ಸೂತನೊಬ್ಬನ ಮನೆಯಲ್ಲಿ ಅವನ ಹೆಂಡತಿಯಾದ ರಾಧೆಯ ಆರೈಕೆಯಲ್ಲಿ ಬೆಳೆದ. ಇವನ ಶೂರತನವನ್ನು ಕಂಡ ಕೌರವನು ಇವನಿಗೆ ತನ್ನಲ್ಲಿ ಆಶ್ರಯಕೊಟ್ಟ.

**ಗುರು**=ದ್ರೋಣಾಚಾರ್ಯರು.

ತಂದೆಯ ಹೆಸರು ಭರದ್ವಾಜ. ಇವರು ದ್ರೋಣಕಲಶದಲ್ಲಿ ಹುಟ್ಟಿದುದರಿಂದ ದ್ರೋಣನೆಂದು ಹೆಸರಾಯಿತು. ಧನುರ್ವಿದ್ಯೆಯನ್ನು ಕಕ್ಕನಾದ ಅಗ್ನಿವೇಶನೆಂಬ ಋಷಿಯಲ್ಲಿ ಕಲಿತರು. ಇವರು ಕೌರವರಿಗೂ, ಪಾಂಡವರಿಗೂ ಶಸ್ತ್ರಾಸ್ತ್ರ ಗುರುಗಳಾಗಿದ್ದರು. ಕುರುಕ್ಷೇತ್ರದ ಯುದ್ಧದಲ್ಲಿ ಎರಡನೆಯ ಸೇನಾಪತಿಗಳಾಗಿ ದ್ರುಪದ-ರಾಜನ ಮಗ ಧೃಷ್ಟದ್ಯುಮ್ನನಿಂದ ಮರಣಹೊಂದಿದರು.

**ಗಾಂಗೇಯ**=ಭೀಷ್ಮಾಚಾರ್ಯರು.

ಕುರುವಂಶದ ಶಂತನುರಾಜನಿಂದ ಗಂಗಾದೇವಿಯಲ್ಲಿ ಹುಟ್ಟಿದರು. ಅಷ್ಟ-ವಸುಗಳಲ್ಲಿ ಒಬ್ಬರಾದ ಇವರು, ವಸಿಷ್ಠರ ಶಾಪದಿಂದ ಭೂಮಿಯಲ್ಲಿ ಅವತರಿಸಿದರು. ಇವರಿಗೆ ಕುರುಕುಲ ಪಿತಾಮಹರೆಂಬ ಹೆಸರಿದೆ. ಇವರ ಮೊದಲಿನ ಹೆಸರು ದೇವ-ವ್ರತ. ಅಜನ್ಮ ಬ್ರಹ್ಮಚರ್ಯವ್ರತ ತೊಟ್ಟಿದ್ದರಿಂದ, ಭೀಷ್ಮನೆಂಬ ಹೆಸರುಂಟಾಯಿತು. ಪಾಂಡವ-ಕೌರವರಲ್ಲಿ ಸಂಧಾನಮಾಡಲು ಮಾಡಿದ ಪ್ರಯತ್ನ ಹಾಳಾಗಿ, ಕೊನೆಗೆ ಕುರುಕ್ಷೇತ್ರದಲ್ಲಿ ಇವರು ಅರ್ಜುನನ ಬಾಣದಿಂದ ಶರಪಂಜರದ ಮೇಲೆ ಮಲ-ಗಿದರು. ಇವರು ಇಚ್ಛಾಮರಣಿಗಳು.

೨ **ಮುರವೈರಿ**=(ಸಂ. ೧ ಪು. ೨೬೫).
**ವಾರಿಧಾರೆ**=ಕಣ್ಣೀರು.

೩ **ನೀಟಾದವರು**=ಸಿರಿವಂತರು.
**ಕುಟೀರ**=ಗುಡಿಸಿಲು.

೪ ಭಕ್ತನ ಉತ್ಕಟತೆಯ ಅನುಭಾವಗಳು—ಉತ್ಸಾಹ, ಗದ್ಗದ, ರೋಮಾಂಚ ಮುಂ.

೬ **ನೀಡು**=ಚಾಚು.

೭ **ಕರಸಂಪುಟ**=ಬೊಗಸೆ.
**ಆರೋಗಣಿಸು**=ಸೇವಿಸು.

೮ **ಕುಡಿತೆ**=ಸೇರೆ.

೯ **ಆಯುತದಿ**=ಸಹಜವಾಗಿ; ಸುಲಭವಾಗಿ.

ವಿ. ಸೂ.—ಇದರಲ್ಲಿ ವಿದುರನನ್ನು ಪ್ರತ್ಯಕ್ಷವಾಗಿ ಬಣ್ಣಿಸುತ್ತ ಪರ್ಯಾಯವಾಗಿ ಹರಿಭಕ್ತರ ಮಹಿಮೆಯನ್ನು ಹೇಳಲಾಗಿದೆ.

## ೨೧ನೆಯ ಹಾಡು

ಈ ಹಾಡಿನಲ್ಲಿ ಭಾಗವತೋತ್ತಮನಾದ ಶಿವನನ್ನು ನಿಂದಾಸ್ತುತಿಯ ರೀತಿಯಲ್ಲಿ ದಾಸರು ಬಣ್ಣಿಸಿದ್ದಾರೆ:

೧ **ಗಿರಿರಾಜ**=ಹಿಮವಂತರಾಜ.

ಇವನಿಗೆ ಪರ್ವತರಾಜನೆಂಬ ಹೆಸರೂ ಇದೆ. ಇವನ ಹೆಂಡತಿ ಮೇನಾ. ಇವರ ಮಗಳು ಪಾರ್ವತಿ. ಪೂರ್ವಜನ್ಮದ ದಾಕ್ಷಾಯಿಣಿ ಇಲ್ಲಿ ಪಾರ್ವತಿಯಾಗಿ ಹುಟ್ಟಿ ಬಂದು ಶಿವನನ್ನು ಕುರಿತು ತಪಸ್ಸು ಮಾಡಿ, ಅವನನ್ನು ವರಿಸಿದ ಕಥೆ ಹರಿವಂಶ ೧–೧೮ರಲ್ಲಿ ಬಂದಿದೆ.

**ಕಂತುಹರ**=ಕಾಮನನ್ನು ಸಂಹರಿಸಿದವ (ಶಿವ).
(ಸಂ. ೧ ಪು. ೧೯೪).

**ಗಜಚರ್ಮಾಂಬರ**=ಗಜಚರ್ಮವನ್ನು ಹೊತ್ತವ.

ಗಜಾಸುರನು ಮಹಿಷಾಸುರನ ಮಗ. ಶಿವನನ್ನು ಕುರಿತು ತಪಸ್ಸು ಮಾಡಿ ವರಗಳನ್ನು ಪಡೆದು ದೇವತೆಗಳನ್ನು ಪೀಡಿಸತೊಡಗಿದನು. ಕೊನೆಗೆ ಶಂಕರನು

ತ್ರಿಶೂಲದಿಂದ ಅವನನ್ನು ಕೊಂದು, ಅವನ ಬೇಡಿಕೆಯಂತೆ ಅವನ ಚರ್ಮವನ್ನು ತಾನು ಹೊದ್ದುಕೊಂಡನು. (ಮ. ಪು. ೧೫೨).

ಕಪ್ಪರ=ಕಮಂಡಲು : ಬ್ರಹ್ಮನ ಐದನೆಯ ತಲೆಯ ಪರಟಿ. (ಸಂ. ೧ ಪು. ೧೯೫).

೨ **ವಿಪರೀತ**=ವಿರುದ್ಧ, ವಿಚಿತ್ರ.

**ರುಂಡಮಾಲೆ**=(ಭಾರತ ಅನು. ೨೦೭).

೩ **ಈತನ ನಾಮವು....ಮಂಗಳ**=ಶಂಕರ (ಶಂಕರೋತಿ ಶುಭಂ ಕರೋತಿ ಇತಿ) ಕಲ್ಯಾಣ ಮಾಡುವವ (ಸಂ. ೧ ಪು. ೧೯೫). (ಭಾಗ ೮–೭).

**ನಿರ್ಗುಣ**=ಗುಣಾತೀತ.

## ೨೨ನೆಯ ಹಾಡು

ಭಕ್ತನ ಅಗಲಿಕೆಯನ್ನು ಪ್ರಿಯನ ಅಗಲಿಕೆಯ ವಿರಹಿಣಿಯ ಭಾವದಲ್ಲಿ ಈ ಹಾಡಿನಲ್ಲಿ ಪರ್ಯಾಯದಿಂದ ಹೇಳಲಾಗಿದೆ.

೧–೨ ವಿರಹಿಣಿಯ ಪ್ರತೀಕ್ಷಾವಸ್ಥೆಯ ವಿವಿಧ ಭಾವಭಂಗಿಗಳನ್ನು ಈ ನುಡಿಯಲ್ಲಿ ವರ್ಣಿಸಿದೆ.

**ಬೆಂಬಿಡದೆ**=ಬೆನ್ನುಹತ್ತಿ.

**ಮುಡಿಗೆ**=ಶಿರೋಭೂಷಣ.

**ಬಿಂಬ**=ಮೂರ್ತಿ.

೩ **ಇನಿತರೊಳೇನಹುದು**=ನೀ ಹೇಳಿದುದು ಅಷ್ಟೇ ಅಲ್ಲ.

## ೨೩ನೆಯ ಹಾಡು

ಶ್ರೀಹರಿಯ ಪ್ರತಿಯೊಂದು ಕಾರ್ಯವೂ ಆತನ ಭಕ್ತರ ಕಲ್ಯಾಣಕ್ಕಾಗಿಯೇ ಇದೆ ಎಂಬುದನ್ನು ಈ ಸುಳಾದಿಯಲ್ಲಿ ದಾಸರು ವಿವರಿಸಿದ್ದಾರೆ. ಶ್ರೀಹರಿಗೆ ಭಕ್ತರೇ ಸರ್ವಸ್ವ.

೧ **ಸಕಲೇಶ್ವರ**=ವಿಶ್ವೇಶ್ವರ.

**ಮುಕುತೇಶ್ವರ**=ಮುಕ್ತರೊಡೆಯ

**ನಿನಗೊಂದು ಕಥನವಿಲ್ಲ**:—ಭಕ್ತರ ಹಿತದ ಮಾತುಗಳಲ್ಲದೆ ನಿನಗೆ ಬೇರೆ ಮಾತುಗಳೆ ಇಲ್ಲ.

೨ ಎಲ್ಲ ದೇವತೆಗಳನ್ನು ಸೃಷ್ಟಿಸಿ, ಅವರನ್ನು ಅವವರವರ ಪದದಲ್ಲಿ ನಿಲ್ಲಿಸಿ ಅವರಿಂದ ಕಾರ್ಯ ಮಾಡತೊಡಗಿಸಿದುದೂ ಭಕ್ತರ ಹಿತಕ್ಕಾಗಿಯೆ.

೩ **ಗಾಳಿಬೀಸಲು ಪೊಂದದಂತೆ**=ವಾಯುವೇಗವನ್ನು ಮಿಕ್ಕಿ.
**ಶೀಲ**=ಪರಿಶುದ್ಧವಾದ.
**ಶೀಲಚಕ್ರವಟ್ಟಿ ಕಾಯ್ದೆ**:—ಅಂಬರೀಷ (ಸಂ. ೧ ಪು. ೨೭೨).
**ಅಸಿಚಕ್ರ**=ಹದನಾದ ಚಕ್ರ (ಅಂಬರೀಷ).

೪ **ತೀಯು**=ಸವೆಯಿಸು.
**ಅವಸರ**=ಆಪತ್ಕಾಲ.

೫ **ಮೇರು**=(ಸಂ. ೩ ಹಾಡು ೭).
**ಮಂದಾರ**=ಮಂದರಪರ್ವತ.

ಮೇರುಪರ್ವತಕ್ಕೆ ಪೂರ್ವಭಾಗದಲ್ಲಿ ಭೂಮಿಯನ್ನು ನಿಲ್ಲಿಸಿರುವ ಒಂದು ಬೆಟ್ಟ. ಸಮುದ್ರಮಥನಕಾಲದಲ್ಲಿ ದೇವದಾನವರು ಇದನ್ನು ಕಡೆಗೋಲಾಗಿ ಮಾಡಿಕೊಂಡಿದ್ದರು. ಆಗ ಅದು ಭಾರವಾಗಿ ಸಮುದ್ರದಲ್ಲಿ ಮುಳುಗತೊಡಗಲು, ಶ್ರೀಹರಿ ಕೂರ್ಮಾವತಾರ ತಾಳಿ ಅದನ್ನು ಎತ್ತಿಹಿಡಿದನು. (ಭಾರ. ಆದಿ ೧೮).

**ಸಪುತಾಂಬುಧಿ**=ಏಳು ಸಮುದ್ರಗಳು.

೧. ಲವಣೋದಧಿ, ೨. ಇಕ್ಷುಸಾರೋದಧಿ, ೩. ಸುರೋದಧಿ, ೪. ಘೃತೋದಧಿ, ೫. ದಧ್ಯುದಧಿ, ೬. ಕ್ಷೀರೋದಧಿ, ೭. ಸ್ವಾದೂದಧಿ.

**ಸಪುತದ್ವೀಪ**=ಏಳುದ್ವೀಪಗಳು.

೧. ಜಂಬುದ್ವೀಪ, ೨. ಪ್ಲಕ್ಷದೀಪ, ೩. ಕುಶದ್ವೀಪ, ೪ ಕ್ರೌಂಚ ದ್ವೀಪ, ೫. ಶಾಕದ್ವೀಪ, ೬. ಶಾಲ್ಮಲೀದ್ವೀಪ, ೭. ಪುಷ್ಕರ ದ್ವೀಪ.

**ನಿನ್ನಲಲನೆಯೆಂತೊ**=ನೀನು ಭಕುತರ ಇಷ್ಟದಂತೆ ನಡೆಯುವೆ, ನಿನ್ನ ಹೆಂಡತಿಯ ಗತಿ ಏನು?

೬ ಪರಮಾತ್ಮನ ಭಕ್ತವಾತ್ಸಲ್ಯವನ್ನು ಭಕ್ತರ ಚರಿತ್ರೆಯಿಂದಲೆ ತಾವು ಅರಿತುಕೊಂಡುದನ್ನು ದಾಸರು ಇಲ್ಲಿ ಹೇಳಿದ್ದಾರೆ.

೭ **ಬದಿಗ**=**ಜತೆಗಾರ**=ಪರಿವಾರದವ.

**ಬಂಡಿಯ ಬೋವ**=(ಅರ್ಜುನನ) ಸಾರಥಿ.

## ೨೪ನೆಯ ಹಾಡು

ಈ ಸುಳಾದಿಯಲ್ಲಿ ಭಕ್ತನ ಪರಮಾತ್ಮವಿಷಯಕವಾದ ಉತ್ಕಟಭಕ್ತಿಯನ್ನೂ ಆತನ ಆತ್ಮೋದ್ಧಾರದ ನಂಬುಗೆಯನ್ನೂ ಹೇಳಲಾಗಿದೆ.

೧ ಕಲ್ಪನಾತೀತ ಕಷ್ಟಗಳು ಬಂದೊದಗಿದರೂ ಭಕ್ತನನ್ನು ದೇವರು ಸಂರಕ್ಷಿಸುತ್ತಾನೆಂಬ ದೃಢವಿಶ್ವಾಸ ಈ ನುಡಿಯಲ್ಲಿ ಹೇಳಿದೆ.

೨ ಇಂತಹ ಕಷ್ಟಗಳನ್ನೆದುರಿಸುವ ಒಂದೇ ಉಪಾಯವೆಂದರೆ ಹರಿನಾಮಸ್ಮರಣೆ.

೩ ಅಜಮಿಳನ (ಸಂ. ೧ ಪು. ೨೬೪) ಕತೆಯನ್ನು ಉದಾಹರಿಸಿ ಮರಣಕಾಲದಲ್ಲಿ ಬಂದ ಯಮದೂತರನ್ನು ವಿಷ್ಣುದೂತರು ಓಡಿಸಿ ಅವನನ್ನು ಉದ್ಧರಿಸಿದ ಕತೆ ಬಂದಿದೆ.

೪ ಆಪತ್ತಿನಲ್ಲಿ ಭಕ್ತರ ನೆರವಿಗೆ ಪರಮಾತ್ಮನು ಒದಗುವನೆಂಬುದನ್ನು ಇಲ್ಲಿ (ಸಂ. ೧ ಪು. ೨೧೫) ವಸ್ತ್ರಾಪಹರಣದ ಕತೆಯಿಂದ ಸಿದ್ಧಮಾಡಿದೆ.

೫ ಭಕ್ತನು ಕರೆದಲ್ಲಿಗೆ ದೇವರು ಬರುವನೆಂಬ ವಿಚಾರವನ್ನು ತುಂಬ ವಿಶ್ವಾಸದಿಂದ ಹೇಳಿದ್ದಾರೆ.

**ಡಿಂಗರಿಗ**=ಭಕ್ತ.

**ಸನ್ನದ್ಧ**=ಸಿದ್ಧ.

## ೨೫ನೆಯ ಹಾಡು

ಪರಮಾತ್ಮನು ಭಕ್ತರ ಸೇವಕನೆಂಬ ಶ್ರದ್ಧೆ ದಾಸರಿಗೆ ಸಾಕಷ್ಟು ಇದ್ದರೂ, ತಾವು ಪರಮಾತ್ಮನ ಊಳಿಗದಾಳೆಂಬುದನ್ನು ಇಲ್ಲಿ ಹೇಳಿದ್ದಾರೆ.

೧ **ಹಾವುಗೆ**=ಪಾದುಕೆ, ಆವುಗೆ.

**ಕಟ್ಟಿಗೆಯವ**=ವೇತ್ರಧಾರಿ, ಕೋಲುಕಾರ.

**ಪಡಿಗ**=ಪಾತ್ರೆ.

**ಕಾಳಂಜಿ**=ಉಗುಳುವ ಪಾತ್ರೆ. (ಪೀಕ್‌ದಾನ್).

**ಕನ್ನಡಿ**=ಕಂಚಿನ ಕನ್ನಡಿ.

**ಉಗುರು ಬಿದ್ದಲ್ಲಿ**=ಹೆಜ್ಜೆ ಇಟ್ಟಲ್ಲಿ.

೨ ಹರಿಭಕ್ತನಾಗುವುದು ಸಾಮಾನ್ಯವಾದ ಮಾತಲ್ಲ. ಹರಿಯು ಪ್ರೀತನಾಗುವಂತೆ ಸೇವೆಯನ್ನು ಸಲ್ಲಿಸುತ್ತಿರಬೇಕು. ಇದಕ್ಕೆ ಆದರ್ಶವಾದ ಉದಾಹರಣೆ ಹನುಮಂತ.

**ರಾವಣ :**

ವಿಶ್ರವಸ್ ಮತ್ತು ಕೈಕಸಿಯರ ಮಕ್ಕಳಲ್ಲಿ ಹಿರಿಯ. ಇವನ ಹೆಂಡತಿ ಮಂಡೋದರಿ. ಇವನು ಲಂಕೆಯ ಅರಸು. ರಾಮಚಂದ್ರನು ವನವಾಸದಲ್ಲಿದ್ದಾಗ ಸೀತಾದೇವಿಯನ್ನು ಕದ್ದೊಯ್ದುದರಿಂದ ಯುದ್ಧವಾಗಿ ಕಪಿಗಳ ಸಹಾಯದಿಂದ ಶ್ರೀರಾಮನು ರಾವಣನನ್ನು ಕೊಂದನು.

೩ ದೇವಾಧಿದೇವದಾದ ಶ್ರೀಹರಿಯು ಪ್ರತಿಯೊಬ್ಬ ದೇವತೆಗೂ ಒಂದೊಂದು ಕೆಲಸವನ್ನು ನೇಮಿಸಿಕೊಟ್ಟು ಅದನ್ನು ಅವನು ಮಾಡಿಯೇತೀರುವಂತೆ ಕಟ್ಟಳೆ ಮಾಡಿದುದನ್ನೂ ಈ ನುಡಿಯಲ್ಲಿ ಹೇಳಿದೆ.

**ಕಟ್ವಾಳು**=(ಕಡಿದಾದ ಆಳು) ನಿಷ್ಠುರ ಸ್ವಭಾವದವ.

೪ **ಬಿಜಾವಂತ**=? ವಾದನಕಾರರು ಇರಬಹುದೆ?

**ಸೂತ**=ಸಾರಥಿ.

**ಮಾಗಧ**=ಹೊಗಳುಭಟ್ಟರು, ವಂದಿಗಳು.

**ಭಟ್ಟರು**=ವಂದಿಗಳು.

೫ **ತಿರೆ**=ಭೂಮಿ (ತ್ಸ—ಸ್ಥಿರಾ).

**ಸರಿತು**=ಹೊಳೆ.

**ಸಚರಾಚರ**=ಜಂಗಮ ಮತ್ತು ಸ್ಥಾವರ.

**ಘನ**=ಶ್ರೇಷ್ಠ.

## ೨೬ನೆಯ ಹಾಡು

ಮಧುಕರವೃತ್ತಿ ಇದು ಹರಿದಾಸರಿಗೆ ಜೀವನಸಾಧನ. ಮಧುಕರವೃತ್ತಿಯೆಂಬುದು ಒಂದು ಲಾಕ್ಷಣಿಕಪದ. ನಿತ್ಯವೂ ಮನೆಮನೆಗೆ ಹೋಗಿ ಒಪ್ಪತ್ತಿಗೆ

ಸಾಲುವಷ್ಟು ಮಾತ್ರ ಶುಕ್ಲಧಾನ್ಯಭಿಕ್ಷೆಬೇಡುವುದಕ್ಕೆ ಮಧುಕರವೃತ್ತಿಯೆಂಬ ಹೆಸರು. ಜೇನುಹುಳುವು ಹೂಹೂ ತಿರುಗಿ ಹನಿಹನಿ ರಸವನ್ನು ಕೂಡಿಸಿ ಸಂಗ್ರಹಿಸುವ ರೀತಿಯಿಂದ ಈ ಶಬ್ದವು ಬಂದಿದೆ. ದಾಸರು ಈ ಮಧುಕರವೃತ್ತಿಯನ್ನು ಇನ್ನೂ ಒಂದು ರೀತಿಗೆ ಹೋಲಿಸಿದ್ದಾರೆ. ಬೇರೆಬೇರೆ ಭಕ್ತರಲ್ಲಿಯ ಸದ್ಗುಣಗಳನ್ನು ಸಂಗ್ರಹಿಸಿ, ತನ್ನನ್ನು ಪರಿಪೂರ್ಣಗೊಳಿಸುವ ರೀತಿ ಮಧುಕರವೃತ್ತಿ.

ಗುರುಗಳ ಆಶ್ರಮದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಬ್ರಹ್ಮಚಾರಿಗಳು ಇದೇ ವೃತ್ತಿಯಿಂದ ಜೀವಿಸುತ್ತಿದ್ದರು. ಈಗಲೂ ಬ್ರಾಹ್ಮಣವಿದ್ಯಾರ್ಥಿಗಳು ಈ ರೀತಿಯಿಂದ ಜೀವಿಸಿ ವಿದ್ಯೆ ಗಳಿಸುತ್ತಾರೆ.

೧ **ಮಧುಪ**=ಜೇನುನೊಣ.
**ನೀಲವರ್ಣ**=ಘನಶ್ಯಾಮ (ವಿಷ್ಣು).
**ಆಲಾಪಿಸುತ**=ಕೊಂಡಾಡುತ್ತ.
**ಓಲಗ**=ಸಾಮೂಹಿಕ ಸಂಗೀತಸೇವೆ.

## ೨೭ನೆಯ ಹಾಡು

ಇದರಲ್ಲಿ ಭಕ್ತರ ಘನತೆಯನ್ನು ದಾಸರು ಅನೇಕ ರೀತಿಯಲ್ಲಿ ವಿವರಿಸಿದ್ದಾರೆ.

೧ ಗರಭವಾಸ ಗಿರಭವಾಸ, ಜನನ ಗಿನನ ಮುಂ. ಮಾತುಗಳು ತಿರಸ್ಕಾರ ಸೂಚಕವಾಗಿವೆ.

೨ **ಅಭಿಮುಖ**=ಭಕ್ತ, ಸೇವಕ.
**ಅನಭಿಮುಖ**=ವಿರೋಧಿ.
**ಪ್ರತಿ**=ಸರಿಸಮ.
**ಸುರತರು**=ಕಲ್ಪತರು.
**ಎಲವ**=ಬೂರಲಮರ.

೩ **ಅಲರು**=ಹೂವು.
**ಅಲಗು**=ಕತ್ತಿ.
**ಜಲರುಹಾಕ್ಷ**=ವಿಷ್ಣು.
**ಛಲಿಸು**=ಹಟಹಿಡಿ.
**ಹಾವಿಗೆಯಾಳು**=ಪಾದಸೇವಕ.

**ತಲೆಗೆ ಸಲ್ಲು**=ಪಾಲಿಗೆ ಬರು.

೪ **ಕವಿಲೆ (ಕಪಿಲೆ)**=ಆಕಳು.

೫ **ಅರ**=ಚಕ್ರ.

**ಅರಳುವ**=ಶೋಭಿಸುವ.

ವಿ. ಸೂ.—ಈ ನುಡಿಯ ಅರ್ಥ ಸ್ಪಷ್ಟವಾಗುವುದಿಲ್ಲ. ಬೇರೆ ಪಾಠಾಂತರಗಳೂ ದೊರೆತಿಲ್ಲ.

## ೨೮ನೆಯ ಹಾಡು

೧ **ಬೋಳಿ**=ತಲೆಗೂದಲಿಲ್ಲದವಳು. (ಬೋಳ).

**ಜಾಳಿಗೆದಂಡೆ**=ಜಾಳಿಗೆಯಂತೆ ಹೆಣೆದ ಹೂವಿನ ದಂಡೆ.

**ಡೊಂಬ**=ಸಂಚಾರಿಜನಾಂಗ, ಇವರಿಗೆ ಮನೆಯ ಆಗತ್ಯವಿರುವುದಿಲ್ಲ.

## ೨೯ನೆಯ ಹಾಡು

೧ ಇದರಲ್ಲಿ ದೇವರ ಭಕ್ತರ ಮಹಿಮೆಯನ್ನು ಅಲಂಕಾರರೂಪದಲ್ಲಿ ಹೇಳಿದ್ದಾರೆ.

## ೩೦ನೆಯ ಹಾಡು

೧ **ಜವ**=ಪ್ರೀತಿಸುವ.

**ಕಾವ**=ರಕ್ಷಿಸುವ.

## ೩೧ನೆಯ ಹಾಡು

ಈ ಉಗಾಭೋಗವು ಗದುಗಿನ ವೀರನಾರಾಯಣನ ವಿಶೇಷಣವಾಗಿರುವುದರಿಂದ, ಇದನ್ನು ಗದುಗಿನಲ್ಲಿದ್ದಾಗ ದಾಸರು ರಚಿಸಿದಂತೆ ಕಾಣುತ್ತಿದೆ.

೧ **ಗದುಗಿನ ವೀರನಾರಾಯಣ**=(ಸಂ. ೧ ಪು. ೨೮೬).

## ೩೨ನೆಯ ಹಾಡು

೧ (ಸಂ. ೧ ಪು. ೨೦೮) (ಭಾರತ ತಾತ್ಪರ್ಯನಿರ್ಣಯ ೮—೯೫)

### ೩೩ನೆಯ ಹಾಡು

ಮನುಷ್ಯನ ಬಡತನ-ಸಿರಿತನಗಳು ಪರಮಾತ್ಮನ ಸಂಕಲ್ಪವನ್ನು ಅನುಸರಿಸಿ ಇರುತ್ತಿವೆ ಎಂಬುದನ್ನು ಭಕ್ತನು ತಿಳಿದುಕೊಂಡಾಗ, ಅವನಿಗೆ ಸಮಾಧಾನ ಮತ್ತು ಶಾಂತಿ.

### ೩೪ನೆಯ ಹಾಡು

ಪರಮಾತ್ಮನ ಸೂತ್ರದಿಂದಲೆ ಎಲ್ಲವೂ ನಡೆಯುವುದೆಂದು ಮನವರಿಕೆ ಮಾಡಿಕೊಂಡ ಭಕ್ತ, ಎಂತಹ ಸಂಕಟವನ್ನೂ ಎದುರಿಸಲು ಸಿದ್ಧನಾಗುವನು.

## ೩ ಮತಮಾಹಾತ್ಮ್ಯ

### ೩೫ನೆಯ ಹಾಡು

ದಾಸರು ಶ್ರೀವ್ಯಾಸರಾಯರಿಂದ ದ್ವೈತಮತದ ದೀಕ್ಷೆಯನ್ನು ಪಡೆದರು. ದ್ವೈತಪ್ರಮೇಯಗಳೆಲ್ಲ ದಾಸರ ಶ್ರದ್ಧೆಗೆ ಪಾತ್ರವಾಗಿದ್ದು, ಅವುಗಳ ಮಹಿಮೆಯನ್ನು ದಾಸರು ಇಲ್ಲಿಯ ಹಾಡುಗಳಲ್ಲಿ ಕೊಂಡಾಡಿದ್ದಾರೆ.

೧ **ಹರಿಸರ್ವೋತ್ತಮ ಮತ್ತು ತಾರತಮ್ಯ**=(ಸಂ.೧ ಪು. ೧೮೨-೨೮೫).

೨ **ಮುರಾರಿ**=(ಸಂ. ೧ ಪು. ೨೬-೫).

೩ **ಭಾರತೀಶ**=ವಾಯುದೇವರು.

**ಅಂತರ್ಗತ**=ಒಳಗೊಂಡ.

### ೩೬ನೆಯ ಹಾಡು

ಈ ಹಾಡಿನಲ್ಲಿ, ಮಧ್ವಮತಕ್ಕೆ ಸಮಾನವಾದ ಮತಧರ್ಮ ಇನ್ನಾವುದೂ ಇಲ್ಲವೆಂದು ದಾಸರು ಸಾರುತ್ತಾರೆ.

೧ **ಗರುಡಪಕ್ಷಿ**=ವಿಷ್ಣುವಿನ ವಾಹನ.

೨ **ಚಂದ್ರಶೇಖರ**=ಶಿವ (ಭಾಗವತೋತ್ತಮ)

೩ **ಪ್ರಥಮಯುಗ**=ತ್ರೇತಾಯುಗ.
**ದ್ವಿತಿಯ**=ದ್ವಾಪರ.
**ತ್ರಿತಿಯ**=ಕಲಿ.
**ಸತುಶಾಸ್ತ್ರ**=ದ್ವೈತಶಾಸ್ತ್ರ.
**ರತಿಪತಿ**=ಕಾಮ.

## ೩೭ನೆಯ ಹಾಡು

**ರಘುಪತಿ ಪೂಜಾವಿಧಾನಕೆ** :—

ಮೂಲರಾಮದೇವರ ಪೂಜಾವಿಧಾನವನ್ನು ಇದು ಹೇಳುವುದರಿಂದ ಪವಿತ್ರವಾದದ್ದು.

**ನಾರಾಯಣನ ನಾಮ ನಂಬಿದ ಮತ ವೇದಪಾರಾಯಣಕೆ ಅನುಕೂಲಮತವು** :

ವೈದಿಕತತ್ತ್ವಕ್ಕೆ ಅನುಸಾರಿಯಾದ ಹರಿಭಕ್ತಿಯನ್ನು ಹೇಳುವಂತಹದು.

**ಧಾರಿಣೀಸುರರು**=ಬ್ರಾಹ್ಮಣರು.

ವಿ. ಸೂ.—ಶ್ರುತಿಗಳಲ್ಲೆಲ್ಲ ದ್ವೈತಮತದ ತಾರತಮ್ಯವಾದವನ್ನೇ ಹೇಳಲಾಗಿದೆ ಎಂಬುದನ್ನು ಮಧ್ವಾಚಾರ್ಯರು ಹೇಳಿದ್ದಾರೆ.

೨ **ವಜ್ರಾಂಕಿತ**=ಅಚಲ, ದೃಢ.
**ಅಕುಟಿಲ**=ಸತ್ಯಮಾರ್ಗವನ್ನನುಸರಿಸುವ.
**ಶುಕ**=(ಸಂ. ೧ ಪು. ೨೬೨).
**ಸನಕ**=(ಸಂ. ೧ ಪು. ೨೫೮).
**ಪದವಿ**=ಅಧಿಕಾರಸ್ಥಾನ.

# ೪ ದೀಕ್ಷಾಗುರುಮಾಹಾತ್ಮ್ಯ

## ೩೮ನೆಯ ಹಾಡು

ಪ್ರತಿಯೊಬ್ಬ ಸಾಧಕನಿಗೂ ಗುರುವಿನ ಪ್ರೀತಿಯು ದೀಕ್ಷೆ ಇಲ್ಲದೆ, ಅವನ ಸಾಧನೆ ಪರಿಪೂರ್ಣವಾಗದು--ಪರಮಾತ್ಮನ ಸಾಕ್ಷಾತ್ಕಾರವೂ ಆಗದು ಎಂಬುದನ್ನು ದಾಸರು ಇಲ್ಲಿ ಹೇಳಿದ್ದಾರೆ.

೧ **ಒಲುಮೆ**=ಪ್ರೀತಿ, ಪ್ರಸಾದ.

**ಆರುಶಾಸ್ತ್ರ**=ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವ-ಮೀಮಾಂಸಾ, ಉತ್ತರಮೀಮಾಂಸಾ ಶಾಸ್ತ್ರಗಳೆಂಬ ಷಟು-ಶಾಸ್ತ್ರಗಳು.

**ಮೂರಾರು**=ಹದಿನೆಂಟು (ಮೂಲ ಹದಿನೆಂಟು ಪುರಾಣಗಳು) ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯ, ಬ್ರಹ್ಮವೈವರ್ತ, ಲೈಂಗ್ಯ, ವಾರಾಹ, ಸ್ಕಾಂದ, ವಾಮನ, ಕೌರ್ಮ, ಮಾತ್ಸ್ಯ, ಗಾರುಡ, ಬ್ರಹ್ಮಾಂಡ.

೨ **ಮರುಳ್**=ಪಿಶಾಚಿ.

## ೩೯ನೆಯ ಹಾಡು

ವಿಜಯೀಂದ್ರರ ಗುರುಗಳಾದ ಸುರೇಂದ್ರತೀರ್ಥರು ಮಾಡಿದ ದೇವರಪೂಜೆಯನ್ನು ನೋಡಿ ಹಾಡಿದ ಹಾಡಿದು.

೧ **ಸುರೇಂದ್ರತೀರ್ಥ** (ಸಂ. ೧ ಪು. [illegible]).

**ವಿಧಾತ**=ಬ್ರಹ್ಮ.

**ತನ್ನ ಭವನ**=ಸತ್ಯಲೋಕ.

**ಇಕ್ಷ್ವಾಕು**:—

ವೈವಸ್ವತಮನುವಿನ ಹಿರಿಯ ಮಗ. ಸೂರ್ಯವಂಶದ ಮೂಲಪುರುಷ. ಅಯೋಧ್ಯೆ ಇವನ ರಾಜಧಾನಿ. ಈತನ ವಂಶದಲ್ಲಿಯೇ ಮುಂದೆ ಶ್ರೀರಾಮಚಂದ್ರನು ಹುಟ್ಟಿದನು.

**ಅನ್ವಯ**=ವಂಶ.
**ವೇದಗರ್ಭ**=ಬ್ರಹ್ಮ.

ವಿ. ಸೂ:— ಶ್ರೀಮದಾನಂದತೀರ್ಥರಿಂದ ಪೂಜೆಗೊಂಡ ಮೂಲರಾಮ, ಸೀತಾ ಮತ್ತು ಲಕ್ಷ್ಮಣ ಈ ಮೂರ್ತಿಗಳ ಪೌರಾಣಿಕ ಕಥೆ ಹೀಗಿದೆ:—

ಬ್ರಹ್ಮದೇವರು ಈ ಮೂರ್ತಿಗಳನ್ನು ಅನೇಕ ಕಾಲ ಸತ್ಯಲೋಕದಲ್ಲಿ ಪೂಜಿಸಿ ಸೂರ್ಯವಂಶದ ಇಕ್ಷ್ವಾಕುರಾಜನಿಗೆ ಕೊಟ್ಟರು. ಮುಂದೆ ಆತನ ವಂಶದ ರಾಜರೆಲ್ಲರೂ ಪೂಜೆಮಾಡುತ್ತ ಬಂದು, ಶ್ರೀರಾಮಚಂದ್ರನು ಅ ಮೂರ್ತಿಗಳನ್ನು ಮರಳಿ ಬ್ರಹ್ಮನಿಗೆ ಕೊಟ್ಟನು.

೨ **ಗಜಪತಿ**=ಕಳಿಂಗ (ಒರಿಸಾ) ದೇಶದ ಅರಸರು.
**ಅಜ**=ಬ್ರಹ್ಮ.
**ಭೂಮಿಜಾ**=ಸೀತಾದೇವಿ, (ಜನಕರಾಜನು ಯಜ್ಞಕ್ಕಾಗಿ ನೆಲವನ್ನು ರಂಟೆಯಿಂದ ಹರಗುವಾಗ ದೊರೆತಳು).
**ನರಹರಿಮುನಿ**=(೧೨೪೧—೧೩೩೩).

ಇವರು ಕಲಿಂಗದೇಶದಲ್ಲಿ ಮಂತ್ರಿಯಾಗಿದ್ದು, ಅಲ್ಲಿಂದ ಬರುವಾಗ ಧಾತು-ನಿರ್ಮಿತವಾದ ರಾಮ-ಸೀತೆ-ಲಕ್ಷ್ಮಣರ ಮೂರ್ತಿಗಳನ್ನು ಕಲಿಂಗದೇಶದ ಬೊಕ್ಕಸದಿಂದ ತಂದು, ಆನಂದತೀರ್ಥರಿಗೆ ಅರ್ಚನೆಗಾಗಿ ಕೊಟ್ಟರು. ಇವರು ಪದ್ಮನಾಭತೀರ್ಥರ ಬಳಿಕ ಮಠದ ಪೀಠವೇರಿದರು. (೧೩೨೪).

**ರಜನಿ**=ರಾತ್ರಿ.
**ವೃಂದಾರಕ**=ದೇವತೆಗಳು.
**ಪವನನಂದನ**=ಹನುಮಂತ (ವಾಯುಪುತ್ರನಾದ ಹನುಮಂತನ ಅವತಾರವೆಂದೆನಿಸುವ).
**ಅನ್ವಯ**=ವಂಶ.

## ೪೦ನೆಯ ಹಾಡು

ದಾಸರು ವಿರಹಿಣಿಯಾಗಿ ತಮ್ಮ ಗುರುವನ್ನೇ ಪತಿಯೆಂದು ಭಾವಿಸಿ ಅವನನ್ನು ತೋರಿಸೆಂದು ತನ್ನ ಸಖಿಗೆ ಬಿನ್ನವಿಸಿಕೊಂಡಂತೆ ಈ ಹಾಡು ಇದೆ.

೧ **ವನಿತೆ**=(ಸ್ತ್ರೀ) ಸಖಿಯೆ.

**ಉದಧಿ ಹಾರಿದವ**=ಹನುಮಂತ.

೨ **ಪಾಂಡುನಂದನ**=ಧರ್ಮರಾಜ.

**ಅನುಜ**=ತಮ್ಮ (ಭೀಮ).

೩ ಎರಡು+ಮೂರಾರು+ಒಂದು=೨+೧೮+೧=೨೧.

**ಕುಮತ**=(ಸಂ. ೧ ಪು. ೧೯೧).

# ೫ ಪುಣ್ಯತೀರ್ಥಮಾಹಾತ್ಮ್ಯೆ

## ೪೧ನೆಯ ಹಾಡು

**ಹರಿಸರ್ವಾಂಗೆ**=ತನ್ನ ಸರ್ವಾಂಗದಲ್ಲಿಯೂ ಹರಿಮಯಳಾದವಳು.

**ಒಬ್ಬ ದೈತ್ಯ**=ಹಿರಣ್ಯಾಕ್ಷ :—

ಹಿರಣ್ಯಕಶಿಪುವಿನ ಅಣ್ಣ. ಇವನು ಬ್ರಹ್ಮನಿಂದ ವರ ಪಡೆದು ಮೂರೂ ಲೋಕಗಳನ್ನು ಪೀಡಿಸತೊಡಗಿದನು. ಶ್ರೀಹರಿಗೂ ಇವನಿಗೂ ನಡೆದ ಯುದ್ಧದಲ್ಲಿ ಸೋಲುವ ಲಕ್ಷಣಗಳು ಕಂಡಾಗ, ಭೂಮಿಯನ್ನು ಸುತ್ತಿಕೊಂಡು ಸಮುದ್ರದಲ್ಲಿ ಮುಳುಗಿದ. ವಿಷ್ಣು ವರಾಹ ಅವತಾರ ತಾಳಿ, ಹಿರಣ್ಯಾಕ್ಷನನ್ನು ಕೊಂದು ಭೂಮಿಯನ್ನು ಮೇಲಕ್ಕೆತ್ತಿದನು. (ಭಾಗ ೩–೧೯).

**ಮೇದಿನಿ**=ಭೂಮಿ.

**ರಸಾತಳ**=ಅಧೋಲೋಕಗಳಲ್ಲಿ ಒಂದು. (ನಾಲ್ಕನೆಯದು) (ಅತಳ, ವಿತಳ, ಸುತಳ, ರಸಾತಳ, ತಳಾತಳ, ಮಹಾತಳ, ಪಾತಾಳ ಇವು ಏಳು ಅಧೋಲೋಕಗಳು).

**ಭೇದಿಸಿದವನ ನಾಸಿಕ**=ವರಾಹದೇವನ ಮೂಗು.

ವಿ. ಸೂ: ವರಾಹದೇವನ ಮೂಗಿನಲ್ಲಿ ಹುಟ್ಟಿ ತುಂಗಾನದಿಯು ಅವನ ಕೋರೆಯಿಂದ ಹರಿದು ಸಾಗಿತು.

೨ **ಮಳಲುಮಿಟ್ಟೆ**=ಮರಳಿನ ದಿನ್ನೆ.

**ನಾಳ**=ದೇಟು.

೩ **ವೃಂದಾವನ**=(ಸಂ. ೧ ಪು. ೨೫೧).

**ಕ್ಷೀರಸಾಗರ**=ಸಪ್ತಸಮುದ್ರಗಳಲ್ಲಿ ಒಂದು.

**ಬದರಿಕಾಶ್ರಮ**:—(ಸಂ. ೧ ಪು. ೨೩೭). ಇಲ್ಲಿ ವ್ಯಾಸರ ಆಶ್ರಮ ವಿದೆ. ಇದು ಅಲಕನಂದಾತೀರದಲ್ಲಿದೆ.

**ವಾರಣಾಸಿ**=(ಸಂ. ೧ ಪು. ೨೯೨).

ವಿ. ಸೂ:— ಪುರಂದರದಾಸರು ತುಂಗಾ-ಭದ್ರಾಸಂಗಮದಲ್ಲಿರುವ ಕೂಡಲಿಗೆ ಕ್ಷೇತ್ರಕ್ಕೆ ಹೋದಾಗ ರಚಿಸಿದ ಕೀರ್ತನೆ. ಇದಕ್ಕೆ ನರಸಿಂಹಕ್ಷೇತ್ರವೆಂಬ ಹೆಸರಿದೆ.

## ೪೨ನೆಯ ಹಾಡು

೧ **ಭವಹಾರಿ**=ಸಂಸಾರದುಃಖವನ್ನು ನಿವಾರಿಸುವ.

**ನುತಜನಜಾತೆ**=ಜನಸಮೂಹದಿಂದ ಸ್ತುತಿಸಿಕೊಳ್ಳುವವಳು.

**ನೀತೆ**=ಪರಿಶುದ್ಧಳು.

**ಉನ್ನತಕರದಾತೆ**=ಕೈಯೆತ್ತಿ ಕೊಡುವವಳು.

**ಶಿವನಸಂಭೂತೆ**:—

ಕಾವೇರಿಯು ಕೊಡಗಿನ ಬ್ರಹ್ಮಗಿರಿಯ ಬಳಿಯ ತಲಕಾವೇರಿಯಲ್ಲಿರುವ ಶಿವಲಿಂಗದಿಂದ ಉದ್ಭವೆಯಾಗಿದ್ದಾಳೆ.

೩ **ಅರ್ಕಪುಷ್ಕರ, ಚಂದ್ರಪುಷ್ಕರ, ವಹ್ನಿಪುಷ್ಕರ, ಚಕ್ರ-ತೀರ್ಥ**: ಇವು ಕಾವೇರೀ ನದಿಯಲ್ಲಿಯ ಪುಣ್ಯತೀರ್ಥಗಳು.

**ಓಲಾಡು**=ಈಸಾಡು.

೪ **ದುರಿತದುರ್ಜನ**=ಪಾಪದಿಂದ ಹುಟ್ಟುವ ದೌರ್ಜನ್ಯ.

೬ **ಯಾಗಾದಿಸ್ವರ್ಗಯೋಗ**=ಯಜ್ಞ ಮುಂ. ಸ್ವರ್ಗಸಾಧನಗಳು.

**ಭೋಗಿಶಯನನ ದಿನ**=ಏಕಾದಶಿ (ಹರಿದಿನ).

**ಭೋಗಿ**=ಆದಿಶೇಷ.

೭ **ಸುಕೃತಿ**=ಪುಣ್ಯವಂತ.

## ೪೩ನೆಯ ಹಾಡು

೧ **ಭಾಗೀರಥಿ**=ಗಂಗಾನದಿಯ ಮೂರು ಶಾಖೆಗಳಲ್ಲಿ ಒಂದು.

**ಸಾಗರನ ನಿಜರಾಣಿ**:—ನದಿಗಳೆಲ್ಲ ಸಾಗರನ ರಾಣಿಯರೆಂದು ಕರೆಯುವ ಸಂಪ್ರದಾಯವು ಪ್ರಾಚೀನವಾಗಿದೆ.

**ಶ್ರೀಹರಿಪಾದಕಮಲದಿಂದುದ್ಭವಿಸಿ**=(ಸಂ. ೧ ಪು. ೨೮೩).

**ಬ್ರಹ್ಮಕರಪಾತ್ರೆಯಲಿ ನಿಂದುಬಂದೆ**:—

ಶ್ರೀಹರಿ ವಾಮನಾವತಾರದಲ್ಲಿ ಒಂದು ಪಾದದಿಂದ ಭೂಮಿಯನ್ನಾವರಿಸಿ, ಎರಡನೆಯ ಪಾದವನ್ನು ಅಂತರಿಕ್ಷದಲ್ಲಿಡಲು ಅದು ಬ್ರಹ್ಮಾಂಡ ಖರ್ಪರವನ್ನು ದಾಟಿ ಸತ್ಯಲೋಕಕ್ಕೆ ಹೋಯಿತು. ಆಗ ಬ್ರಹ್ಮನು ಶ್ರೀಹರಿಯ ಪಾದವನ್ನು ತನ್ನ ಕಮಂಡಲುಜಲದಿಂದ ತೊಳೆಯಲು ಅದೇ ಗಂಗಾನದಿಯಾಗಿ ಹರಿಯಿತು. (ಭಾಗ ೮-೨೧-೪).

೨ **ಮಹಾದೇವನ ... ಬಂದೆ**:—

ತನ್ನ ಅಜ್ಜಂದಿರನ್ನು ಉದ್ಧರಿಸಬೇಕೆಂದು ಭಗೀರಥನು ತಪಸ್ಸು ಮಾಡಿದನು. ಗಂಗೆ ಪ್ರತ್ಯಕ್ಷಳಾಗಿ ತಾನು ಭೂಮಿಗಿಳಿಯುವಾಗ ತನ್ನನ್ನು ಧಾರಣಮಾಡಲು ಶಿವನನ್ನು ಕುರಿತು ತಪಸ್ಸು ಮಾಡೆಂದು ಭಗೀರಥನಿಗೆ ತಿಳಿಸಿದಳು. ಅದರಂತೆ ತಪಸ್ಸು ಮಾಡಿ ಶಿವನನ್ನು ಮೆಚ್ಚಿಸಿ, ಗಂಗೆಯನ್ನು ಧಾರಣಮಾಡಲು ಬೇಡಿಕೊಂಡನು. (ಭಾಗ ೯-೯).

೩ **ಜಹ್ನುವಿನುದರದಿ....ಜಾಹ್ನವಿಯೆಂದೆನಿಸಿಕೊಂಡೆ**:—

ಭಗೀರಥನು ಗಂಗೆಯೊಡನೆ ಬರುತ್ತಿರುವಾಗ, ಪ್ರಯಾಗದಲ್ಲಿ ಜಹ್ನುಋಷಿಯ ಯಜ್ಞಮಂಟಪದಲ್ಲಿ ಹೊಕ್ಕುದರಿಂದ ಸಿಟ್ಟಿಗೆದ್ದ ಋಷಿ ಆಕೆಯನ್ನು ಕುಡಿದುಬಿಟ್ಟನು. ಭಗೀರಥನ ಬಿನ್ನಹವನ್ನು ಮನ್ನಿಸಿ ಅವಳನ್ನು ತನ್ನ ಕಿವಿಯಿಂದ ಹೊರಗೆಡಹಿದನು. (ರಾ. ಬಾಲ. ೪೩).

**ಮುನ್ನ ನರಕಕ್ಕಿಳಿದ ಸಗರರಾಯ....ಮಾಡಿ**:—

ಸಗರರಾಜನು ಅಶ್ವಮೇಧಯಾಗ ಮಾಡಿ ಕುದುರೆಯನ್ನು ದಿಗ್ವಿಜಯಕ್ಕೆ ಬಿಟ್ಟನು. ಅವನ ೬೦,೦೦೦ ಮಂದಿ ಮಕ್ಕಳು ಅದರ ಬೆಂಗಾವಲಾಗಿ ನಡೆದರೂ ಕುದುರೆ ಮಾಯವಾಯಿತು. ಹುಡುಕುತ್ತ ಹೋಗಿ ಪಾತಾಳದಲ್ಲಿ ಅದು ಕಪಿಲ ಮುನಿಯ ಹತ್ತಿರವಿರುವುದನ್ನು ಕಂಡರು. ಅದನ್ನು ಮುಟ್ಟಹೋಗಲು ಕಪಿಲ

ಋಷಿ ಅವರನ್ನು ತನ್ನ ಕಣ್ಣಿನಿಂದ ಸುಟ್ಟನು. ಇವರನ್ನು ಉದ್ಧಾರಮಾಡಬೇಕೆಂದು ಇವರ ಮರಿಮಗ (ಅಣ್ಣನ ಮರಿಮಗ) ಭಗೀರಥ ತಪಸ್ಸುಮಾಡಿ, ಗಂಗೆಯನ್ನು ಭೂಮಿಗೆ ತಂದು ಇವರನ್ನು ಉದ್ಧಾರಮಾಡಿದನು. (ರಾ. ಬಾಲ. ೪೧).

## ೪೪ನೆಯ ಹಾಡು

ಇದರಲ್ಲಿ ಗಂಗಾತೀರದ ಮಹಾಕ್ಷೇತ್ರಗಳ ವರ್ಣನೆಯೂ ಶಾಖಾನದಿಗಳ ವರ್ಣನೆಯೂ ಬರುವುದು.

೧ **ಕಾಶಿ**=(ಸಂ. ೧ ಪು. ೨೯೨).

**ಮೀಸಲಳಿಯದ ಪದವಿ**=ಮುಕ್ತಿ.

**ತ್ರಿಧಾಮ**=ಮೂರು ಸ್ಥಾನಗಳುಳ್ಳವ (ವೈಕುಂಠ, ಶ್ವೇತದ್ವೀಪ, ಅನಂತಾಸನ).

**ಪಂಚಕ್ರೋಶ** :—

ಪಂಚಕ್ರೋಶವೆಂಬ ಐದು ದಿನದ ಯಾತ್ರೆಯನ್ನು ಕಾಶಿಯಲ್ಲಿ ಮಾರ್ಗಶೀರ್ಷ, ಫಾಲ್ಗುನ ಮತ್ತು ಅಧಿಕಮಾಸದಲ್ಲಿ ಕೈಗೊಳ್ಳುತ್ತಾರೆ.

### ೧ ಒಂದನೆಯ ದಿನ :—

ಯಾತ್ರಿಕರು ಕಾಶಿಯಿಂದ ಹೊರಟು ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ ಜ್ಞಾನವಾಪಿ, ವಿಶ್ವನಾಥ, ಅನ್ನಪೂರ್ಣಾ ಮುಂ. ದರ್ಶನ ಮಾಡಿಕೊಂಡು, ಚುನಾರದ ಹಾದಿಯಲ್ಲಿರುವ ಕಂಡವಾ ಎಂಬಲ್ಲಿ ಬೀಡುಬಿಡುತ್ತಾರೆ.

### ೨ ಎರಡನೆಯ ದಿನ :—

ಕರ್ದಮೇಶ್ವರದಿಂದ ೧೦ ಮೈಲು ದೂರದಲ್ಲಿರುವ ಭೀಮಚಂಡಿ ಎಂಬಲ್ಲಿ ಯಾತ್ರಿಕರು ಇಳಿದುಕೊಳ್ಳುತ್ತಾರೆ.

### ೩ ಮೂರನೆಯ ದಿನ :—

ಭೀಮಚಂಡಿಯಿಂದ ೧೪ ಮೈಲು ದೂರದಲ್ಲಿ ವರಣಾನದಿಯ ದಡದ ಮೇಲಿರುವ ರಾಮೇಶ್ವರವೆಂಬಲ್ಲಿ ಯಾತ್ರಿಕರು ತಂಗುತ್ತಾರೆ.

### ೪ ನಾಲ್ಕನೆಯ ದಿನ :—

ಯಾತ್ರಿಕರು ರಾಮೇಶ್ವರಧಿಂದ ೧೪ ಮೈಲು ನಡೆದು ಕಪಿಲಧಾರಾ ಎಂಬ ಸ್ಥಾನದಲ್ಲಿ ವಿಶ್ರಮಿಸುತ್ತಾರೆ.

**೫ ಐದನೆಯ ದಿನ :—**

ಕಪಿಲಧಾರೆಯಿಂದ ೩ ಮೈಲು ನಡೆದು ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ ಸಿದ್ಧಿ-ವಿನಾಯಕ ಮುಂ. ದರ್ಶನ ತೆಗೆದುಕೊಂಡು, ಪಂಚಕ್ರೋಶಯಾತ್ರೆಯನ್ನು ಮುಗಿಸುತ್ತಾರೆ.

**೨ ಬಲಿ**=(ಸಂ. ೧ ಪು. ೨೬೨).

**ಈರಡಿ**=ಎರಡು ಹೆಜ್ಜೆ.

**ಬಲಪದನಖದಿ ಬ್ರಹ್ಮಾಂಡ ಸೀಳಲ್ಕೆ**=ಬಲಗಾಲಿನ ಉಗುರಿನಿಂದ ಬ್ರಹ್ಮಾಂಡದ ಬಿರುಸಾದ ಹೊದಿಕೆ ಸೀಳಲು.

**ಬಹಿರಾವರಣ**=ಬ್ರಹ್ಮಾಂಡದ ಹೊರಗಿನ ಆವರಣ.

**ಸಲೆತೀರ್ಥವೆಂದು....ಧರಿಸಿ :—**

ಬ್ರಹ್ಮದೇವರು ಅದನ್ನು ಪವಿತ್ರವಾದ ತೀರ್ಥವೆಂದು ತನ್ನ ಕಮಂಡಲದಲ್ಲಿ ಹಿಡಿದು, ಶ್ರೀಹರಿಯ ಚರಣಗಳನ್ನು ತೊಳೆಯಲು ಆ ನೀರು ಹಿಮಗಿರಿಗೆ ಬಂದಿತು. ಅದನ್ನು ಶಿವನು ತನ್ನ ಜಡೆಯಲ್ಲಿ ಹಿಡಿದುಕೊಂಡನು. (ಭಾಗ ೮–೨೧–೪).

**೩ ನೀರಜ**=ಪರಿಶುದ್ಧ, ಪಾಪರಹಿತ.

**ನೀಲಾಭೆ**=ನೀಲಚ್ಛಾಯೆಯುಳ್ಳವಳು.

**ಕಾರ್ತಸ್ವರ**=ಬಂಗಾರ.

**ಸರಸ್ವತೀನದಿ :—**

ಭಾಗೀರಥಿಯ ಒಂದು ಶಾಖೆ. ಇದು ಕಾಶಿಯಲ್ಲಿ ಗುಪ್ತಗಾಮಿಯಾಗಿ ಮುಂದೆ ಪ್ರಯಾಗದಲ್ಲಿ ಗಂಗೆ-ಯಮುನೆಗಳಿಗೆ ಕೂಡಿ, ತ್ರಿವೇಣೀಸಂಗಮವೆಂದು ಪ್ರಸಿದ್ಧವಾಗಿದೆ. ವೇದದಲ್ಲಿ ಇದು ಪ್ರಸಿದ್ಧಿಪಡೆದಿದೆ.

**ತ್ರಿವೇಣಿ :—**

ಪ್ರಯಾಗದಲ್ಲಿ (ಅಲಹಾಬಾದ) ಗಂಗೆ-ಯಮುನೆ-ಸರಸ್ವತಿ ನದಿಗಳು ಸಂಗಮ ಹೊಂದುತ್ತವೆ. ಇದಕ್ಕೆ ತ್ರಿವೇಣೀಸಂಗಮವೆಂಬ ಹೆಸರು.

**ವಟತರು :—**

ತ್ರಿವೇಣೀಸಂಗಮದಲ್ಲಿ ಯಮುನಾನದಿಯ ದಂಡೆಯ ಮೇಲೆ ಇರುವ ಒಂದು ಪ್ರಯಾಗದ ಪ್ರಸಿದ್ಧಕ್ಷೇತ್ರ. ಇದಕ್ಕೆ ಅಕ್ಷಯವಟವೆಂಬ ಹೆಸರು ಇಲ್ಲಿ ಒಂದು ಪುರಾ-

ತನ ಆಲದಮರವಿದ್ದು ಅದರ ಬುಡದಲ್ಲಿ ಪಿತೃಗಳಿಗೆ ಪಿಂಡಗಳನ್ನು ಅರ್ಪಿಸುವ ಸಂಪ್ರದಾಯವಿದೆ.

**ತೀರ್ಥರಾಜ**=ಪ್ರಯಾಗದ ಇನ್ನೊಂದು ಹೆಸರು.

**ಮಾಧವ**=ಬಿಂದುಮಾಧವ.

ಪ್ರಯಾಗದಲ್ಲಿಯ ಮುಖ್ಯಸ್ಥಾನಗಳಲ್ಲಿ ಒಂದು.

೪ **ಮಾಘಸ್ನಾನ** :—

ಪುಷ್ಯಮಾಸದ ಪದ್ಯ ಪ್ರತಿಪದೆಯಿಂದ ಮಾಘದ ಪೌರ್ಣಿಮೆಯವರೆಗೆ ನಸುಕಿನಲ್ಲಿ ಮಾಡುವ ಸ್ನಾನ.

**ಅನುಷ್ಠಾನ**=ಧರ್ಮಕಾರ್ಯಮಾಡಿ ಪೂರ್ತಿಗೊಳಿಸುವುದು.

**ತೀರ್ಥವಿಧಿ**=ಕ್ಷೌರ ಮತ್ತು ಶ್ರಾದ್ಧಾದಿ ಕರ್ಮಗಳು.

೫ **ಆರ್ಯಾವರ್ತ**=ಆಸಮುದ್ರಾತ್ತುವೈ ಪೂರ್ವಾತ್ । ಆಸಮುದ್ರಾತ್ತು ಪಶ್ಚಿಮಾತ್ ॥ ಹಿಮವದ್ವಿಂಧ್ಯಯೋರ್ಮಧ್ಯಂ ಆರ್ಯಾವರ್ತಂ ಪ್ರಚಕ್ಷತೇ ॥ ಮನು ॥

**ಬ್ರಹ್ಮಾವರ್ತ** :—

ಸರಸ್ವತೀ,ದೃಷದ್ವತಿ(ಅಂಬಾಲಾ ಜಿಲ್ಲೆಯಲ್ಲಿ ಹುಟ್ಟಿ ರಜಪೂತಸ್ಥಾನದ ಉಸುಕಿನಲ್ಲಿ ಈಗ ಹೂತುಹೋಗಿವೆ) ನಡುವಿನ ಪ್ರದೇಶ. ಮಹಾಭಾರತ ಕಾಲದಲ್ಲಿ ಸರಸ್ವತೀನದಿಯು ಹರಿಯುತ್ತಿತ್ತು. ಪಂಜಾಬದಿಂದ ಪ್ರಯಾಗದ ವರೆಗಿನ ಪ್ರದೇಶ.

**ಧಾರ್ಯವಾದ**=ಅಡಕವಾದ.

**ತಾರಕಮಂತ್ರೋಪದೇಶಿ**=(ಸಂ. ೧ ಪು. ೧೯೮).

**ಸೂರ್ಯಚಂದ್ರಾಗ್ನಿನಯನ**=ಹಣೆಗಣ್ಣು.

(ಅಗ್ನಿನಯನ) ಉಳಿದುವೆರಡು ಸೂರ್ಯ-ಚಂದ್ರ ನೇತ್ರ (ಶಿವ).

**ಉಗ್ರ**=ಶಿವನ ಹೆಸರು.

**ಭೂತೇಶ**=ಶಿವ.

**ಭೈರವ**=ಶಿವನ ಒಂದು ರೂಪ.

ಕಾಶಿಯಲ್ಲಿ ಇರುವ ೮ ಭೈರವಮೂರ್ತಿಗಳಲ್ಲಿ ಒಂದು.

**ಬಿಂದುಮಾಧವ**=(ಸಂ. ೧ ಪು. ೨೩೭).

**೬ ಪಂಚಗಂಗಾ** :—

ಕಾಶಿಯಲ್ಲಿ ಯಮುನಾ, ಸರಸ್ವತಿ, ಕಿರಣಾ ಮತ್ತು ಧೂತಪಾಪಾ ನದಿಗಳು ಗುಪ್ತರೀತಿಯಲ್ಲಿ ಗಂಗೆಗೆ ಬಂದು ಕೂಡುವುದರಿಂದ ಈ ಹೆಸರಾಗಿದೆ.

**ಪತಿಕರಿಸು**=ಆಚರಿಸು.

**ಅಂತರ್ವೇದಿ** :—

ಕಾಶೀಯಾತ್ರಿಕರು ಪ್ರಾತಃಕಾಲದಲ್ಲಿ ಸ್ನಾನಮಾಡಿ ಪಂಚನಾಯಕ, ವಿಶ್ವೇಶ್ವರ ಇವರ ದರ್ಶನಮಾಡಿಕೊಂಡು, ಮಣಿಕರ್ಣಿಕೆಯಲ್ಲಿ, ಸ್ನಾನಮಾಡಿ ಈಶ್ವರಪೂಜೆ ಮುಗಿಸಿ ಕಂಬಲಾಶ್ವತರ ಮುಂ. ದೇವರುಗಳ ದರ್ಶನವನ್ನು ಮಾಡಿಕೊಂಡು ಬರುವ ಒಂದು ವಿಧಿ.

**೭ ಹತ್ತಶ್ವಮೇಧತೀರ್ಥ**=ದಶಾಶ್ವಮೇಧಘಾಟ.

ಇದು ಕಾಶಿಯ ಮುಖ್ಯ ತೀರ್ಥಗಳಲ್ಲಿ ಒಂದಾಗಿದೆ. ಇಲ್ಲಿ ಬ್ರಹ್ಮನು ೧೦ ಅಶ್ವಮೇಧ ಯಜ್ಞಮಾಡಿದನೆಂಬ ಐತಿಹ್ಯವಿದೆ. ಇದು ವರಣಾಸಂಗಮ ಘಾಟದಿಂದ ೩ ಮೈಲಾಗುತ್ತದೆ.

**ಉತ್ತರದ ದಕ್ಷಿಣದ ಮಾನಸ** :—

ಇಲ್ಲಿರುವ ಕುಂಡಗಳಿಗೆ ಮಾನಸರೋವರ ಕುಂಡಗಳೆಂಬ ಹೆಸರಿದೆ.

**ಶುಭ**=ಮಂಗಲ.

**ವೊತ್ತ**=ಸಮೂಹ.

**ಸ್ವರ್ನದಿ**=ಗಂಗಾ.

**ಮಣಿಕರ್ಣಿಕಾ** :—

ಕಾಶಿಯಲ್ಲಿಯ ಒಂದು ಸ್ನಾನಘಟ್ಟ. ಇದಕ್ಕೆ ವೀರತೀರ್ಥವೆಂತಲೂ ಹೆಸರಿದೆ. ಘಟ್ಟದ ಮೇಲೆ ಮಣಿಕರ್ಣಿಕಾ ಕುಂಡವಿದೆ. ನಾಲ್ಕೂ ಬದಿಗಳಲ್ಲಿ ಕಲ್ಲಿನ ಪಾವಟಿಗೆಗಳಿವೆ. ಈ ಕುಂಡದ ನೀರನ್ನು ಪ್ರತಿವಾರ ಹೊರಗೆ ಬಿಡಲಾಗುವುದು. ಇದರ ಬಳಿಯಲ್ಲಿಯೇ ತಾರಕೇಶ್ವರ ಮತ್ತು ವೀರೇಶ್ವರ ಮಂದಿರಗಳಿವೆ.

**ಗಯಾ** :—

ವಿಷ್ಣುವಿನ ಸಮೀಪದ ಭಕ್ತನಾದ ಗಯನೆಂಬ ರಾಕ್ಷಸನು ಲೋಕಕಂಟಕನಾಗಲು, ಬ್ರಹ್ಮನು ಯಜ್ಞಮಾಡಿ ಅವನ ನಾಶಮಾಡಬೇಕೆಂದು ವಿಚಾರಮಾಡಿದನು.

ಯಜ್ಞವೇದಿಕೆಗಾಗಿ ಅವನ ದೇಹ ಬೇಡಲು ಅವನು ಒಪ್ಪಿದನು. ಅವನ ಎದೆಯ ಮೇಲೆ ಕಲ್ಲನ್ನಿರಿಸಿ ಯಜ್ಞವನ್ನಾರಂಭಿಸಿದನು. ಅವನು ಅಲುಗಾಡಲು ವಿಷ್ಣು ಅವನ ಮೇಲೆ ನಿಂತನು. ತಾನಿದ್ದ ಸ್ಥಾನವು ತನ್ನ ಹೆಸರಿನಿಂದ ಪ್ರಸಿದ್ಧ ಕ್ಷೇತ್ರವಾದರೆ ತಾನು ಅಲುಗಾಡೆನೆಂದು ಹೇಳಲು ಹಾಗೇ ಆಗಲೆಂದು ವಿಷ್ಣು ವರಕೊಟ್ಟನು. ಇಂದಿಗೂ ಅದಕ್ಕೆ ಗಯಶೀರ್ಷವೆಂಬ ಹೆಸರಿದೆ. ಇಂದಿಗೂ ಅಲ್ಲಿ ಪಿತೃಗಳ ದೆಸೆಯಿಂದ ಪಿಂಡ-ಪ್ರದಾನ ಮಾಡುತ್ತಾರೆ. (ಭಾ. ಆದಿ. ೨೩೫).

ಇದು ಬಿಹಾರರಾಜ್ಯದ ಒಂದು ಜಿಲ್ಲೆ. ಫಲ್ಗುನದಿಯ ದಂಡೆಯ ಮೇಲಿದೆ. ಯಾತ್ರಾಸ್ಥಳವೆಂದು ಹೆಸರಾಗಿದೆ. ಇದರ ಹತ್ತಿರ ಬುದ್ಧಗಯೆಯೆಂಬ ಬೌದ್ಧರ ಕ್ಷೇತ್ರವಿದೆ.

**ವಿಷ್ಣುಪಾದ**=ಪಿತೃಗಳಿಗಾಗಿ ಪಿಂಡಪ್ರದಾನಮಾಡುವ ಗಯೆಯ ಪ್ರಮುಖಸ್ಥಾನ.
**ಶಮೀಪತ್ರ**=ಬನ್ನಿಯ ಎಲೆ.
**ಋಣತ್ರಯ**=ದೇವಋಣ, ಋಷಿಋಣ, ಪಿತೃಋಣ.
**ನವರತ್ನಮಾಲಿಕೆ**=ಈ ಹಾಡಿನ ಹೆಸರು. ಇದರಲ್ಲಿ ಒಂಬತ್ತು ನುಡಿಗಳಿವೆ.
**ಕಂಧರ**=ಕೊರಳು.

# ೬ ತುಲಸೀಮಾಹಾತ್ಮ್ಯ

## ೪೫ನೆಯ ಹಾಡು

೧ **ವೃಂದಾ**=ತುಳಸಿ.
**ವೃಂದಾವನ**=ತುಳಸಿಯ ಕಟ್ಟೆ.
**ತುಳಸಿ** :—

ಮೂಲಶಕ್ತಿಪಂಚಕದಲ್ಲಿ ಒಬ್ಬಳಾದ ರಾಧೆಯ ಶಾಪದಿಂದ ಕೃಷ್ಣಭಕ್ತನಾದ ಸುದಾಮನು, ದಂಭಾಸುರನ ಮಗನಾಗಿ ಶಂಖಚೂಡನೆಂಬ ಹೆಸರಿನಿಂದ ಹುಟ್ಟಿದ.

ಇವನು ಜೈಗೀಷವ್ಯಮುನಿಯ ಉಪದೇಶದಿಂದ ವಿಷ್ಣುಕವಚವೆಂಬ ಮಂತ್ರಪಡೆದು ಅದರ ಮಹಿಮೆಯಿಂದ ದೇವರಾಜ್ಯವನ್ನು ಆಕ್ರಮಿಸಿದ. ಆಗ ದೇವತೆಗಳು ಶಂಕರನಲ್ಲಿ ಮೊರೆ ಇಟ್ಟರು. ಶಿವನು ಶಂಖಚೂಡನನ್ನು ಎದುರಿಸಿ ಅವನನ್ನು ಕೊಲ್ಲಲು ಅಸಮರ್ಥನಾದಾಗ, ಆಕಾಶವಾಣಿಯ ಸಂದೇಶದಂತೆ ವಿಷ್ಣು ಬ್ರಾಹ್ಮಣರೂಪದಿಂದ ಶಂಖಚೂಡನಲ್ಲಿ ಹೋಗಿ, ಅವನ ಕವಚವನ್ನು ಅಪಹರಿಸಿ ಅವನು ಸಾಯುವಂತೆ ಮಾಡಿದನು. ಅವನ ಹೆಂಡತಿಯಾದ ವೃಂದೆ ವಿಷ್ಣುವಿನ ವಂಚನೆಗೊಳಗಾಗಿ, ತುಲಸಿಯ ಗಿಡವಾದಳು. (ಶಿವ. ಪು. ಯುದ್ಧಖಂಡ ೨೭–೪೧).

ಅಮೃತಮಂಥನಕಾಲದಲ್ಲಿ ಅಮೃತದ ಕೆಲವು ಹನಿಗಳು ಭೂಮಿಯಮೇಲೆ ಬಿದ್ದುದರಿಂದ ಅಲ್ಲಿ ತುಳಸಿಯ ಉತ್ಪತ್ತಿಯಾಯಿತು. (ಪದ್ಮ. ಸೃ. ೬೧).

೨ **ಮೂಲಮೃತ್ತಿಕೆ**=ತುಳಸಿಯಗಿಡದ ಬೇರಿನ ಬಳಿಯಲ್ಲಿಯ ಮಣ್ಣು.
**ಲೀಲೆ**=ಆನಂದ.

## ೪೬ನೆಯ ಹಾಡು

ಕಾರ್ತಿಕಶುದ್ಧ ದ್ವಾದಶಿಯ ದಿನ ಮಾಡುವ ತುಲಸೀವಿವಾಹದ ವರ್ಣನೆಯನ್ನು ಈ ಹಾಡಿನಲ್ಲಿ ನೋಡಬಹುದು.

೧ **ಕಲ್ಯಾಣ**=ಮಂಗಳ.
೩ **ಉತ್ಥಾನದ್ವಾದಶಿ**=ಕಾರ್ತಿಕಶುದ್ಧ ದ್ವಾದಶಿ (ಆಷಾಢಶುದ್ಧ ಏಕಾದಶಿಗೆ ಶಯನೈಕಾದಶಿ ಎಂಬ ಹೆಸರಿದೆ).

## ೪೭ನೆಯ ಹಾಡು

೧ **ಕೃಷ್ಣವೇಣಿ**=ಕೃಷ್ಣಾನದಿ. (ಭಾ. ಸ. ೯)
ವಿ. ಸೂ.--ತುಲಸಿಯ ಮೂಲದಲ್ಲಿ ಗಂಗಾನದಿ-ಸಕಲತೀರ್ಥಗಳಿರುತ್ತವೆ.
೩ **ಬೆಟ್ಟದೊಡೆಯ**=ವೆಂಕಟೇಶ, ಶ್ರೀಹರಿ.

## ೪೮ನೆಯ ಹಾಡು

ಶ್ರೀಹರಿಯ ಪೂಜೆಗೆ ತುಲಸಿ ಅನಿವಾರ್ಯ ಎಂಬುದನ್ನು ಈ ಉಗಾಭೋಗವು ವಿವರಿಸುತ್ತದೆ.

೧ **ಮುಗುಳುತೆನೆ**=ಎಳೆಯ ತೆನೆ, ಮಂಜರಿ.

### ೪೯ನೆಯ ಹಾಡು

ತುಲಸಿಯನ್ನು ಕುರಿತ ಪ್ರಾರ್ಥನೆ ಮತ್ತು ತುಲಸಿಯ ಮಹಿಮೆ ಈ ಹಾಡಿನಲ್ಲಿ ಇವೆ.

೨ **ಕುಂಕುಮಶಂಖಚಕ್ರವಿರಿಸಿದರೆ** = ಕುಂಕುಮ ಸಹಿತವಾದ ಶಂಖಚಕ್ರಗಳ ರಂಗೋಲಿ ಹಾಕಿದರೆ.

(ಪಂಚರಾತ್ರಾಗಮದ ಕಾರ್ತಿಕಮಾಸ ನಿರ್ಣಯದ ೭೦ನೆಯ ಅಧ್ಯಾಯ).

## ೭ ನಾಮಮಾಹಾತ್ಮ್ಯ

ಈ ವಿಭಾಗದಲ್ಲಿ ಶ್ರೀಹರಿನಾಮದ ಮಾಹಾತ್ಮ್ಯವನ್ನು ಹೇಳಲಾಗಿದೆ.

### ೫೦ನೆಯ ಹಾಡು

೧ **ತೀರ್ಥ**=ಪುಣ್ಯಜಲಸ್ಥಾನ.
**ಶೋಧಿಸಿ**=ಪುಟಕ್ಕೆ ಹಾಕಿ.

೩ **ಜಾಳಿಗೆ**=ಜಾಲಂದರ, ಕಿಡಿಕಿ.

### ೫೧ನೆಯ ಹಾಡು

೧ **ಅಂದುಗೆ**=ಕಾಲಿನ ಆಭರಣ.

೨ **ಗರಳ**=ವಿಷ.

೩ **ಕುಕ್ಕುಟ**=ಕೋಳಿ.
**ಮಯೂರ**=ನವಿಲು.
**ಬಧಿರ**=ಕಿವುಡ.
**ಮೂಢಜ್ಞಾನಿ**=ವಿಚಾರಮಾಡಿ ತಿಳಿದುಕೊಳ್ಳದವ.

## ೫೨ನೆಯ ಹಾಡು

ಈ ಹಾಡಿನಲ್ಲಿ ಹರಿನಾಮವನ್ನು ಅರಗಿಳಿಯೆಂದು ರೂಪಿಸಿ, ಆ ರೂಪಕದ ರೀತಿಯಲ್ಲಿಯೇ ವಿಷಯವನ್ನು ಹೇಳಲಾಗಿದೆ.

೧ **ಮಾರ್ಜಾರ**=ಬೆಕ್ಕು.
೨ **ಮಾರಿ**=ಮೃತ್ಯು.
**ಮುರಾರಿಪಟ್ಟಣ**=ವೈಕುಂಠ.

## ೫೩ನೆಯ ಹಾಡು

ಇದರಲ್ಲಿ ನಾರಾಯಣನ ನಾಮವನ್ನು ಒಂದು ಬೀಜಕ್ಕೆ ಹೋಲಿಸಿ, ಆ ಬೀಜವು ಮೊಳೆತು ಚಿಗುರಿ ಹೂತು ಫಲಬಿಟ್ಟು ಹಣ್ಣಾಗಿ ಅದನ್ನು ತಿಂದು ಧನ್ಯರಾದ ಭಕ್ತರ ವಿಚಾರವನ್ನು ಹೇಳುತ್ತದೆ.

೧ **ನಾರದ**=(ಸಂ. ೧ ಪು. ೨೫೭).
**ಧ್ರುವ**=(ಸಂ. ೧ ಪು. ೨೬೧).
**ಅಂಕುರಿಸು**=ಮೊಳಕೆಯೊಡೆ.
**ಪ್ರಹ್ಲಾದ**=(ಸಂ. ೧ ಪು. ೨೬೨).
**ರುಕ್ಮಾಂಗದ**=(ಸಂ. ೧ ಪು. ೨೬೧).
**ಕುರುಪಿತಾಮಹ** ಭೀಷ್ಮ. (ಸಂ. ೨ ಪು. ೨೧೮).
೨ **ವಿಜಯನ ಸತಿ** ದ್ರೌಪದಿ (ಸಂ. ೧ ಪು. ೨೧೫).
**ಗಜೇಂದ್ರ** ಕರಿರಾಜ (ಸಂ. ೧ ಪು. ೨೫೨).
**ಶುಕಮುನಿ**=(ಸಂ. ೧ ಪು. ೨೬೨).
**ಅಜಮಿಳ**=(ಸಂ. ೧ ಪು. ೨೬೪).
೩ **ಕಾಮಿತ**=ಬಯಸಿದ

## ೫೪ನೆಯ ಹಾಡು

ಹರಿನಾಮಸಂಕೀರ್ತನೆಯು ಸಂಕಟವನ್ನು ಬಿಡಿಸುವುದೆಂಬುದಕ್ಕೆ ಇಲ್ಲಿ ಅನೇಕ ಪ್ರಕಾರದ ಉದಾಹರಣೆಗಳ ನಿದರ್ಶಿಸಲಾಗಿದೆ.

೧ **ಕೇಸರಿ**=ಸಿಂಹ.
**ಮೃಗ**=ಚಿಗರೆ.
**ದಿನೇಶ**=ಸೂರ್ಯ.

೨ **ಕುಲಿಶ**=ವಜ್ರಾಯುಧ.
**ಕಲುಷ**=ಪಾಪ, ದೋಷ.
**ಕರಿರಾಜ**=(ಸಂ. ೧ ಪು. ೨೫೮).

೩ **ಫಣಿ**=ಹಾವು.
**ದಳ್ಕುರಿ**=ಬೇಗೆ.

## ೫೫ನೆಯ ಹಾಡು

ಈ ಹಾಡಿನಲ್ಲಿಯೂ ನಾಮಮಾಹಾತ್ಮ್ಯವನ್ನು ವಿವರಿಸಲಾಗಿದೆ.

೧ **ಧಾರಿಣಿ**=ಭೂಮಿ (ಕೂರ್ಮಾವತಾರ).
**ನಾರದ**=(ಸಂ. ೧ ಪು. ೨೫೬).
**ಅಜಾಮಿಳ**=(ಸಂ. ೧ ಪು. ೨೬೪).
**ಭವ**=ಶಿವ.

೨ **ಗಜ**=ಕರಿರಾಜ (ಸಂ. ೧ ಪು. ೨೫೮).
**ದ್ರೌಪದಿ**=(ಸಂ. ೧ ಪು. ೨೧೫).
**ಧ್ರುವ**=(ಸಂ. ೧ ಪು. ೨೬೧).

೩ **ಅಹಲ್ಯೆ**:—

ಶ್ರೀರಾಮನು ವಿಶ್ವಾಮಿತ್ರನೊಂದಿಗೆ ಮಿಥಿಲೆಗೆ ಹೋರಟಾಗ ದಾರಿಯಲ್ಲಿ ಶಿಲೆಯಾಗಿ ಬಿದ್ದ ಅಹಲ್ಯೆಯನ್ನು ಪಾದಸ್ಪರ್ಶದಿಂದ ರಾಮನು ಉದ್ಧಾರಮಾಡಿದನು. (ರಾ. ಬಾಲ. ೩೮).

**ಪ್ರಹ್ಲಾದ**=(ಸಂ. ೧ ಪು. ೨೬೨).
**ಅಕ್ರೂರ**=(ಸಂ. ೧ ಪು. ೨೫೨).
**ತೊರೆ**=ನದಿ (ಯಮುನೆ).

೪ **ಚಂದ್ರಶೇಖರ ಗಿರಿಜೆಗೆ ಒರೆದ**=(ಸಂ. ೧ ಪು. ೧೯೫).
**ವಿಭೀಷಣ**=(ಸಂ. ೧ ಪು. ೨೧೨).

**ಮುಚಕುಂದ**=(ಸಂ. ೧ ಪು. ೨೯೮).

೫ **ರುಕ್ಮಿಣಿ** :—

ವಿದರ್ಭದೇಶದ ಭೀಷ್ಮಕರಾಜನ ಮಗಳು. ಶಿಶುಪಾಲನನ್ನು ತಿರಸ್ಕರಿಸಿ ಕೃಷ್ಣನನ್ನು ಮದುವೆಯಾದಳು. (ಭಾಗ ೧೦-೫೨-೫೩).

೬ **ಚಿತ್ತಜ**=ಕಾಮ.

ಬ್ರಹ್ಮದೇವನ ಹೃದಯದಿಂದ ಹುಟ್ಟಿದ ಈತನು ಈಶ್ವರನ ಹಣೆಗಣ್ಣಿನಿಂದ ಸುಟ್ಟುಹೋದಮೇಲೆ, ರುಕ್ಮಿಣಿಯ ಹೊಟ್ಟೆಯಲ್ಲಿ ಪ್ರದ್ಯುಮ್ನನೆಂಬ ಮಗನಾಗಿ ಹುಟ್ಟಿದ. (ಭಾಗ ೧೦-೫೫-೧).

೭ **ಕಡಹದ**....ಕಾಳಿಂಗನ ತುಳಿದ ನಾಮ (ಸಂ. ೧ ಪು. ೨೫೦).

**ಮಡದಿಯರು**=ಕಾಳಿಂಗನ ಹೆಂಡಂದಿರು.

೮ **ತುಳಸಿ**=(ಸಂ. ೨ ಪು. ೨೧೨).

**ಕಾವೇರೀಮಧ್ಯದಲಿ**=ಶ್ರೀರಂಗದಲ್ಲಿ.

೯ **ತಂದು ಅಮೃತ....ಎರೆದ ನಾಮ** :—

ಸಮುದ್ರಮಥನಕಾಲದಲ್ಲಿ ವಿಷ್ಣು ಮೋಹಿನಿಯಾಗಿ ಸುರರಿಗೆ ಅಮೃತವನ್ನು ಎರೆದು ತೃಪ್ತಿಗೊಳಿಸಿದನು.

**ಅಂಬರೀಷ**=(ಸಂ. ೧ ಪು. ೨೭೨).

## ೫೬ನೆಯ ಹಾಡು

ಇಲ್ಲಿ ಭಕ್ತನು ಪರಮಾತ್ಮನ ಜತೆಯಲ್ಲಿ ಒಂದು ಬಗೆಯ ಸಲುಗೆಯ ನುಡಿಯನ್ನು ಬಳಸಿ, ನಿನ್ನ ನಾಮದ ಬಲವೊಂದಿದ್ದರೆ ನಿನ್ನ ಋಣವು ನನಗೇಕೆ ಎಂದು ದೇವರನ್ನು ಕೇಳುವಂತೆ ದಾಸರು ಹಾಡಿದ್ದಾರೆ.

೧ **ಹಂಗು**=ಋಣ.

**ವ್ಯಾಧನ ಮುನಿಪನ ಮಾಡಿತು**:—

(ವಾಲ್ಮೀಕಿ) ಈತನು ಪ್ರಾಚೇತಸಮುನಿಯ ಮಗ. ಆದರೆ ಚಿಕ್ಕತನದಲ್ಲಿಯೆ ಬೇಡರ ಮನೆಯಲ್ಲಿ ಸೇರಿ ದಾರಿಗರನ್ನು ಬಡಿಯುತ್ತಿದ್ದ. ಸಪ್ತಋಷಿಗಳು ಭೆಟ್ಟಿಯಾಗಿ ಇವನಿಗೆ ಜ್ಞಾನೋಪದೇಶವನ್ನು ಮಾಡಲು, ಇವನು ರಾಮಮಂತ್ರಜಪದಿಂದ

ಮೈಮರೆತುಹೋದ. ಆಗ ಈತನ ಮೈಮೇಲೆ ಹುತ್ತ ಬೆಳೆದಿತ್ತು. ಹುತ್ತಕ್ಕೆ ಸಂಸ್ಕೃತದಲ್ಲಿ ವಲ್ಮೀಕ ಎಂಬ ಹೆಸರಿದೆ. ವಲ್ಮೀಕದಿಂದ ಬಂದುದರಿಂದ ವಾಲ್ಮೀಕಿಯಾದನು. ರಾಮಚರಿತ್ರೆಯನ್ನೊಳಗೊಂಡ ರಾಮಾಯಣ ಕಾವ್ಯವನ್ನು ಬರೆದನು. (ರಾ. ಉ. ಕಾಂ. ೭).

೨ ಈ ನುಡಿಯಲ್ಲಿ ಅಜಮಿಳನ ಕಥೆಯನ್ನು ಹೇಳಿದೆ.

೩ ಇದರಲ್ಲಿ ಪ್ರಹ್ಲಾದನ ಕಥೆ ಬಂದಿದೆ.

೪ ಇದರಲ್ಲಿ ಗಜೇಂದ್ರಮೋಕ್ಷದ ಕಥೆ ಇದೆ.

೫ ಇದರಲ್ಲಿ ದ್ರೌಪದಿಯ ವಸ್ತ್ರಾಪಹರಣದ ಕಥೆ ಬಂದಿದೆ.

೬ ಇದರಲ್ಲಿ ಧ್ರುವರಾಜನ ಕಥೆ ಕದೆ.

## ೫೭ನೆಯ ಹಾಡು

ಭಕ್ತನ ಹಸಿವೆಗೆ ಶ್ರೀಹರಿಯ ನಾಮವೇ ಒಂದು ಅಮೃತಾನ್ನ ಎಂದು ಹೇಳಿ ಒಂದೊಂದು ನಾಮವನ್ನು ಒಂದೊಂದು ಆಹಾರಪದಾರ್ಥಗಳಿಗೆ ರೂಪಿಸಿ ಈ ಹಾಡಿನಲ್ಲಿ ಹೇಳಿದ್ದಾರೆ.

೧ **ಓಂಕಾರ**=ಎಲ್ಲ ಮಂತ್ರಗಳಿಗೂ ಮೂಲಮಂತ್ರ.
**ಶಂಖಪಾಣಿ**=ಶ್ರೀಹರಿ.
**ಶಾಕ**=ಪಲ್ಲೆ.
**ಸೂಪ**=ತೊವ್ವೆ.
**ಶಾಲ್ಯನ್ನ**=ಸಣ್ಣಕ್ಕಿಯ ಅನ್ನ.

೨ **ಸೂಸಲಗಡಬು** :—

ಕೊಬ್ಬರಿಯ ಹೆರಕಲ ಮತ್ತು ಸಕ್ಕರೆ ಇವುಗಳನ್ನು ಕಣಕದ ಹಾಳೆಯಲ್ಲಿ ತುಂಬಿ ಕರಿದು ಮಾಡಿದ ಕಡಬು.

೩ **ಸರವಳಿ**=(ಸಾರವಳಿಗೆ) ಒಂದು ಜಾತಿಯ ಹೋಳಿಗೆ. (ಹುರಿಯಕ್ಕಿ ಹೋಳಿಗೆ, ಪುಡಿಣ್ಣ ಹೋಳಿಗೆ).
**ಪಾರಾಯಣ**=ವೈಕುಂಠದಲ್ಲಿರುವವ.

೪ **ಎಣ್ಣೊರಿಗೆ**=ಕರಿದುಮಾಡಿದ ಹೋಳಿಗೆ.

**ಬೀಸೂರಿಗೆ**=ಒಂದು ಜಾತಿಯ ಹೋಳಿಗೆ.

೫ **ದಧ್ಯನ್ನದ ಮುದ್ದೆ**=ಬುತ್ತಿ.

**ಕಲಸುಮೇಲೋಗರ**=ಹುಳಿ ಕಲಿಸಿದ ಅನ್ನ.

**ಸುಖಿನುಂಡಿ :—**

ಅರೆಯದ ಹೂರಣದಲ್ಲಿ ದ್ರಾಕ್ಷೆ ಮುಂ. ಕೂಡಿಸಿ, ಅಕ್ಕಿ ಬೇಳೆಗಳ ಹಿಟ್ಟಿನಿಂದ ಮಾಡಿದ ಕದಡಿನಲ್ಲಿ ಅದ್ದಿ ತುಪ್ಪದಲ್ಲಿ ಕರಿದುಮಾಡಿದ ಭಕ್ಷ್ಯ.

೬ **ಘೃತ**=ತುಪ್ಪ.

**ಪಯ**=ಹಾಲು.

**ದಧಿ**=ಮೊಸರು.

**ತಕ್ರ**=ಮಜ್ಜಿಗೆ.

**ಪನ್ನಿರ**=ಸುಗಂಧದ ನೀರಿನ.

**ಪರ್ಯಂಕ**=ಮಂಚ.

೭ **ಉರಗಾದ್ರಿ**=ತಿರುಪತಿ.

**ಅಪವರ್ಗ**=ಮೋಕ್ಷ.

## ೫೪ನೆಯ ಹಾಡು

ಭಕ್ತಶ್ರೇಷ್ಠ ಅಜಾಮಿಳನ ಕಥೆಯನ್ನು ಈ ಹಾಡಿನಲ್ಲಿ ವಿವರವಾಗಿ ದಾಸರು ಹೇಳಿದ್ದಾರೆ.

೨ **ಸಮಿಧೆ**=ಯಜ್ಞಕ್ಕಾಗಿ ಉರುವಲು.

**ಪ್ರಕೃತಿ**=ಅರಣ್ಯ.

೩ **ಕಲ್ಯಾಣಿ**=ಅತಿ ಚೆಲುವೆ.

**ಸೊಲ್ಲಿಸು**=ಮಾತನಾಡು.

೫ **ಛಲ**=ಹಟ.

೬ **ಚಿತ್ತ**=ಪ್ರೇಮ.

೭ **ಹಸ್ತಕೆ ಒಳಗಾಗು**=ವಶವಾಗು.

**ಮತ**=ನಿಶ್ಚಯ.

೮ **ನಾಗಭೂಷಣ .. ಉರಿದನ**=ಕಾಮನ.
೧೧ **ಕಾಲ**=ಸಾವಿನ ಸಮಯ.
೧೨ **ಚಮ್ಮಟಿಗೆ** (ತ್ಸ—ಚರ್ಮಪಟ್ಟಿಕೆ)=ಬಾರಕೋಲು.
**ಜಾವಳಿ**=ಕ್ರೂರವಾದ ನಾಯಿಗಳು.
**ತುಡುಕು**=ಗಟ್ಟಿಯಾಗಿ ಹಿಡಿ.
೧೩ **ನಾರಗ**=(ತ್ಸ) ನಾರಾಯಣ.
೧೪ **ಹರಿದೋಡಿ**=ಬೇಗಬೇಗನೆ ಓಡುತ್ತಾ.
೧೫ **ಉದ್ದಂಡ**=ಶೂರ.
೧೭ **ಸಂದಲು**=ಹೋಗಲು.
೨೧ **ನೆಲೆ**=ರಹಸ್ಯ.

## ೫೯ನೆಯ ಹಾಡು

೧ **ಕರ್ತೃತ್ವ**=ಅಹಂಕಾರ.
**ಸಾಮಜ**=ಆನೆ. (ಸಂ. ೧ ಪು. ೨೫೮).
೨ **ಕ್ಷುಧೆ**=ಹಸಿವೆ.
**ದಾಹ**=ನೀರಡಿಕೆ.
**ವಾಣೀಪತಿ**=ಬ್ರಹ್ಮ.
೩ **ಅಸು**=ಜೀವ.
**ವಿಷಮದೂತ**=ಯಮದೂತ.

## ೬೦ನೆಯ ಹಾಡು

ಹಿಂದಿನ ಹಾಡಿನಲ್ಲಿ ನಾಮವನ್ನು ಒದಗಿಸೆಂದು ಶ್ರೀಹರಿಯನ್ನು ಪ್ರಾರ್ಥಿಸಿದ ದಾಸರು, ಅದರ ಮಹಿಮೆಯನ್ನು ಮನವರಿಕೆ ಮಾಡಿಕೊಂಡು, ಬೇರೆಯವರಿಗೂ ನಾಮಮಾಹಾತ್ಮ್ಯವನ್ನು ಉಪದೇಶಿಸಿದ್ದಾರೆ.

೧ **ಸುಲಭವೇದ್ಯ**=ಭಕ್ತರು ಬೇಗನೆ ತಿಳಿಯಬಹುದಾದ.
**ಬಲಿ**=(ಸಂ. ೧ ಪು. ೨೬೨).
೩ **ಹೇಮಕಶ್ಯಪ**=ಹಿರಣ್ಯಕಶ್ಯಪ.

## ೬೧ನೆಯ ಹಾಡು

ಪ್ರತಿಯೊಂದು ಇಂದ್ರಿಯವೂ ಪರಮಾತ್ಮನನ್ನು ಒಲಿಸುವ ಕಾರ್ಯದಲ್ಲಿಯೇ ನಿರತವಾಗಿರಬೇಕೆಂಬ ದಾಸರ ಆಶಯವನ್ನು ಈ ಪದ್ಯದಲ್ಲಿ ನೋಡಬಹುದು.

೧ **ಅಚ್ಯುತನ ಕಥೆ**=ಹರಿಕೀರ್ತನ.

೨ **ಹರಿಯಾತ್ರೆ**=ವಿಷ್ಣುಮೂರ್ತಿಗಳಿರುವ ಪವಿತ್ರ ಕ್ಷೇತ್ರಯಾತ್ರೆ.

## ೬೨ನೆಯ ಹಾಡು

ಇದರಲ್ಲಿಯೂ ಹರಿನಾಮದ ಘನತೆಯನ್ನು ವಿವಿಧ ದೃಷ್ಟಾಂತಗಳಿಂದ ವಿವರಿಸಲಾಗಿದೆ.

೧ **ಕೇಸರಿ**=ಸಿಂಹ.

**ವ್ಯಾಸಮುನಿ**=(ಸಂ. ೧ ಪು. ೬೦೩).

**ಪರಮಭಕುತರು**....ಶ್ರೀಕೃಷ್ಣನಾಮ.

ಭಕ್ತರು ಭಕ್ತಿಯ ಮಾಹಾತ್ಮ್ಯವನ್ನು, ಜ್ಞಾನಸಾಧನೆಯಲ್ಲಿ ತೊಡಗಿಸಿದ ಋಷಿಮುನಿಗಳಿಗೆ ತಿಳಿಸಿದರು.

**ದ್ರೋಣ** :—

ಭರದ್ವಾಜಋಷಿ ಮತ್ತು ಘೃತಾಚಿಯೆಂಬ ಅಪ್ಸರೆ ಇವರಿಂದ ಹುಟ್ಟಿದವ. ಅಗ್ನಿವೇಶ್ಯನು ಇವನ ಕಕ್ಕ. ಅವನಿಂದಲೆ ಧನುರ್ವಿದ್ಯೆಯನ್ನು ಇವನು ಕಲಿತನು. ಬಡತನವನ್ನು ಸಹಿಸದೆ ಹಸ್ತಿನಾವತಿಗೆ ಬಂದು ಕೌರವ-ಪಾಂಡವರಿಗೆ ಶಸ್ತ್ರಶಿಕ್ಷಾಗುರುವಾಗಿದ್ದನು. ಕುರುಕ್ಷೇತ್ರದ ಯುದ್ಧದಲ್ಲಿ ಭೀಷ್ಮನ ತರವಾಯ ಸೇನಾಪತಿಯಾಗಿ ಆರು ದಿವಸ ಯುದ್ಧಮಾಡಿ, ಇವನ ಗೆಳೆಯ ದ್ರುಪದರಾಜನ ಮಗನಾದ ಧೃಷ್ಟದ್ಯುಮ್ನನಿಂದ ಮಡಿದನು. (ಭಾ. ಆದಿ. ಮತ್ತು ದ್ರೋಣ).

**ಭೀಷ್ಮ**=(ಸಂ. ೨ ಪು. ೨೧೮).

**ಅಶ್ವತ್ಥಾಮ** :—

ದ್ರೋಣಾಚಾರ್ಯ ಹಾಗು ಕೃಪಿ ಇವರ ಮಗ. ಇವನು ಚಿರಂಜೀವಿಗಳಲ್ಲಿ ಒಬ್ಬ. (ಅಶ್ವತ್ಥಾಮಾ ಬಲಿರ್ವ್ಯಾಸಃ ಹನುಮಾಂಶ್ಚ ವಿಭೀಷಣಃ । ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ) ಇವನು ರುದ್ರಾಂಶ. ತಂದೆಯ ಬಳಿಯಲ್ಲಿ ಧನುರ್ವಿದ್ಯೆಯನ್ನು ಕಲಿತು ಮಹಾರಥಿಯೆನಿಸಿಕೊಂಡನು. ಕರ್ಣನಿಗೆ ಸೇನಾಪತಿ ಪಟ್ಟ

ಸಿಕ್ಕದ್ದನ್ನು ಕಂಡು ಸಿಟ್ಟಿಗೆದ್ದು ಶಸ್ತ್ರಸಂನ್ಯಾಸ ಕೈಕೊಂಡನು. ಭಾರತಯುದ್ಧ ಮುಗಿದ ಬಳಿಕ ತಪಸ್ಸಿಗಾಗಿ ಹಿಮಾಲಯಕ್ಕೆ ತೆರಳಿದನು. (ಭಾ. ದ್ರೋಣ. ಸೌಪ್ತಿಕ).

**ಜಯದ್ರಥ:—**

ಸಿಂಧು, ಸೌವೀರ, ಶಿಬಿ ದೇಶಗಳ ಅರಸು. ದುರ್ಯೋಧನನ ತಂಗೆಯಾದ ದುಃಶಲೆಯನ್ನು ಮದುವೆಯಾಗಿದ್ದ. ಕುರುಕ್ಷೇತ್ರದ ಯುದ್ಧದಲ್ಲಿ ಅರ್ಜುನನ ಪ್ರತಿಜ್ಞೆಗನುಸಾರವಾಗಿ ಶ್ರೀಕೃಷ್ಣನ ಯುಕ್ತಿಯಿಂದ ಇವನು ಮರಣಹೊಂದಿದನು.

೨ **ದ್ರೌಪದಿ**=(ಸಂ. ೧ ಪು. ೨೧೫).

**ಪರೀಕ್ಷಿತ್ :—**

ಅರ್ಜುನನ ಮಗನಾದ ಅಭಿಮನ್ಯು ಮತ್ತು ಉತ್ತರೆಯರ ಮಗ. ಇವನು ತಾಯಿಯ ಹೊಟ್ಟೆಯಲ್ಲಿರುವಾಗಲೆ ಅಶ್ವತ್ಥಾಮನು ಬಿಟ್ಟ ಬ್ರಹ್ಮಾಸ್ತ್ರದಿಂದ, ಕೃಷ್ಣನು ಇವನನ್ನು ರಕ್ಷಿಸಿದನು. (ಭಾ. ಆದಿ. ೬೮).

**ಸಾಂದೀಪ**=(ಸಂ. ೧ ಪು. ೨೫೬).

**ಮುಚಕುಂದ**=(ಸಂ. ೧ ಪು. ೨೯೮).

೩ **ಅವಸಾನ**=ಕೊನೆ.

**ವನಧಿ**=ಸಮುದ್ರ.

## ೬೩ನೆಯ ಹಾಡು

ಇದರಲ್ಲಿ ಕೇಶವಾದಿ ಶ್ರೀಕೃಷ್ಣಪರ್ಯಂತ ಶ್ರೀಹರಿಯ ೨೪ ನಾಮುಗಳನ್ನು ಒಂದೊಂದು ನುಡಿಯಲ್ಲಿ ಒಂದೊಂದರಂತೆ ಕೂಡಿಸಿ ಹೇಳಿದ್ದಾರೆ.

೧ **ಸುಕೃತ**=ಪುಣ್ಯ.

೨ **ಪಯಣಸಮಯ**=ಮರಣಕಾಲ.

೩ **ಗಾತ್ರ**=ಅವಯವ.

**ಕೈಲಾಸವಾಸ**=ಶಿವ.

**ಕಳತ್ರ**=ಹೆಂಡತಿ.

೪ **ಗೋಪಾಲಬಾಲ**=ನಂದಗೋಪಾಲನ ಮಗ.

**ಸೋಳಾ**=ಹದಿನಾರು (ತ್ಸ—ಷೋಡಶ).

**ಮುಕ್ತ್ವಾ**=ಮುತ್ತು.

**ಸುಗ್ರೀವ** :—

ಸೂರ್ಯ ಮತ್ತು ಋಕ್ಷರಜಸ್ ಇವರ ಮಗ. ವಾಲಿಯ ತಮ್ಮ. ಈತನನ್ನು ಶ್ರೀರಾಮ ಅನುಗ್ರಹಿಸಿ ಕಿಷ್ಕಿಂಧೆಯ ರಾಜ್ಯಕ್ಕೆ ರಾಜನನ್ನಾಗಿ ಮಾಡಿದ.

೫ **ವಿಷ್ಣುಚಕ್ರವು.... ಕೊಟ್ಟ**=ದುರ್ವಾಸ. (ಸಂ. ೧ ಪು. ೨೭೨).

೬ **ಮದಗಜ** :—

ಕಂಸನ ಕುವಲಯಾಪೀಡವೆಂಬ ಹೆಸರಿನ ಆನೆ. ಕೃಷ್ಣ-ಬಲರಾಮರನ್ನು ಕೊಲ್ಲುವ ಉದ್ದೇಶದಿಂದ ಕಂಸನ ಆಜ್ಞೆಯಂತೆ ಮಾವುತನು ಈ ಆನೆಯನ್ನು ಅವರ ಮೇಲೆ ನೂಕಿದಾಗ, ಶ್ರೀಕೃಷ್ಣನು ಅದನ್ನು ಕೊಂದನು. (ಭಾಗ. ೧೦–೪೩).

**ಮಲ್ಲರು** :—

ಚಾಣೂರ ಮುಷ್ಟಿಕ ಎಂಬವರು ಕಂಸನ ಆಸ್ಥಾನಜಟ್ಟಿಗಳು. ಬಿಲ್ಲು ಹಬ್ಬಕ್ಕೆಂದು ಕಂಸ ಶ್ರೀಕೃಷ್ಣ-ಬಲರಾಮರನ್ನು ಮಥುರೆಗೆ ಕರೆಕಳಿಸಿ ಈ ಜಟ್ಟಿಗಳೊಂದಿಗೆ ಮಲ್ಲಯುದ್ಧಮಾಡಲು ಹೇಳಿದನು. ಚಾಣೂರನನ್ನು ಕೃಷ್ಣನೂ, ಮುಷ್ಟಿಕನನ್ನು ಬಲರಾಮನೂ ಕೊಂದರು. (ಭಾಗ. ೧೦–೪೪).

**ತವಕ**=ಶೀಘ್ರವಾಗಿ.

**ಕಂಸ**=(ಸಂ. ೧ ಪು. ೨೫೧).

**ಮಧುಸೂದನ**=(ಸಂ. ೧ ಪು. ೨೯೫).

೭ **ತ್ರಿಪುರ** :—

ಮಯಾಸುರನು ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿಗಳಿಗಾಗಿ ಮೂರು ಪಟ್ಟಣಗಳನ್ನು ಕಟ್ಟಿಕೊಟ್ಟನು. ಇವಕ್ಕೆ ತ್ರಿಪುರವೆಂಬ ಹೆಸರು. ಇವರು ದೇವತೆಗಳನ್ನು ಕಾಡತೊಡಗಿ ಧರ್ಮಘಾತಕಕಾರ್ಯ ಕೈಕೊಳ್ಳಲು ವಿಷ್ಣು ಬುದ್ಧನಾಗಿ ತ್ರಿಪುರದ ಹೆಂಡಿರ ವ್ರತಗೆಡಿಸಿ ಅವರನ್ನು ನಾಶಮಾಡಿದನು. (ಭಾಗ. ೭–೧೦).

**ಯದುವಂಶ**=ಕೃಷ್ಣ.

೮ **ಬಲಿ**=(ಸಂ. ೧ ಪು. ೨೨೬).

೧೦ **ವೃಂದಾವನ**=(ಸಂ. ೧ ಪು. ೨೫೫).

**ಸನಕಾದಿ**=(ಸಂ. ೧ ಪು. ೨೫೮).
೧೧ **ಅದ್ವೈತ**=ಅಸಮಾನವಾದ.
೧೨ **ದಾಮೋದರ**=ಕೃಷ್ಣ.
**ಯದು** :—

ಯಯಾತಿ ಹಾಗು ದೇವಯಾನಿಯರ ಮಗ. ಇವನು ತಂದೆಯ ಇಚ್ಛೆಯನ್ನು ಪೂರೈಸದಿದ್ದುದರಿಂದ, ತಂದೆಯಿಂದ ಶಾಪಪಡೆದು ರಾಜ್ಯಾಧಿಪತ್ಯಕ್ಕೆ ಎರವಾದನು. (ಭಾಗ. ೯–೨೩).

೧೩ **ವಾಸುದೇವ**=ವಸುದೇವನ ಮಗ (ಕೃಷ್ಣ)
**ಸಾಸಿರನಾಮ** :—

ಶ್ರೀಹರಿಗೆ ಅನಂತನಾಮಗಳಿದ್ದು ಅವುಗಳಲ್ಲಿಯ ಒಂದು ಸಾವಿರನಾಮಗಳು ಮಹಾಪುಣ್ಯಕರವೆಂದು ಭೀಷ್ಮಾಚಾರ್ಯರು ಧರ್ಮರಾಜನಿಗೆ ಹೇಳಿದ್ದಾರೆ. (ಭಾರ. ಅನು.)

೧೬ **ಗೋಕುಲ** :—

ಕೃಷ್ಣನನ್ನು ಸಾಕಿದ ನಂದನ ಊರು. ಇದು ಮಥುರೆಯಿಂದ ೩ ಮೈಲುಗಳ ಮೇಲೆ ಯಮುನೆಯ ಆಚೆಯ ದಂಡೆಯಮೇಲಿದೆ.

೧೭ **ಧಾಟಿ**=ಸರಿಸಮಾನ.
**ನಿರವದ್ಯ**=ಪರಿಶುದ್ಧ.
**ಕಿರೀಟಿ**=ಅರ್ಜುನ.
**ಕಿರೀಟಿ....ಬ್ರಹ್ಮಾಂಡಕೋಟಿ**=(ಭ. ೧೬–೧೧).
೧೮ **ಶಿಶುಪಾಲ**=(ಸಂ. ೧ ಪು. ೨೭೯).
**ಶೂರ** :—

ದೇವಮೀಢ ಮತ್ತು ಮಾರೀಷಾ ಇವರ ಮಗ. ಇವನ ಮಗನೇ ವಸುದೇವ. ಕೃಷ್ಣನು ಇವನ ಮೊಮ್ಮಗನಾದುದರಿಂದ ಶೌರಿ ಎಂಬ ಹೆಸರು ಬಂದಿದೆ.

**ಅಜಮಿಳ**=(ಸಂ. ೧ ಪು. ೨೬೪).
೨೦ **ಶಕಟ** :—

ಕಂಸನ ಪರಿವಾರದ ಒಬ್ಬ ರಾಕ್ಷಸ. ಇವನು ಕಂಸನ ಪ್ರೇರಣೆಯಿಂದ ಚಕ್ಕ-

ಡಿಯ ರೂಪ ತಳೆದು, ಗೋಕುಲದಲ್ಲಿದ್ದ ಬಾಲಕೃಷ್ಣನನ್ನು ಕೊಲ್ಲಲು ಹೋಗಿ ತಾನೇ ಸತ್ತನು. (ಭಾಗ. ೧೦–೭).

೨೨ **ಉರಗ**=ಕಾಳಿಂಗ (ಸಂ. ೧ ಪು. ೨೫೦).

**ತ್ರಿಪುರ**=(೭ನೆಯ ನುಡಿ).

## ೬೪ನೆಯ ಹಾಡು

ಈ ಸುಳಾದಿಯಲ್ಲಿ ದಾಸರು ದೇವರಲ್ಲಿ ನಾಮವನ್ನು ಕೊಡು ಎಂದು ಮೊರೆ ಇಟ್ಟಿದ್ದಾರೆ.

೧ **ಅಕಿಂಚನ**=ದರಿದ್ರ.

**ಅನರ್ಘ್ಯ**=ಸಮೃದ್ಧಿ.

**ಅರತ**=ಅನಾಸಕ್ತ.

**ರತ**=ಆಸಕ್ತ.

**ಅಮರಾಂಘ್ರಿಪ**=ಕಲ್ಪವೃಕ್ಷ.

**ಅಪುಣ್ಯ**=ಪುಣ್ಯಹೀನತೆ.

**ಅಪಾರಸಂಸಾರಭಯಭೇದ**=ಅಪಾರವಾದ ಸಂಸಾರಭಯವನ್ನು ದೂರಮಾಡುವವ.

೨ **ಸಕಲಸ್ವರೂಪ**=ಸಕಲಜೀವಿಗಳಲ್ಲಿ ಅಂತರ್ಯಾಮಿಯಾದವ.

**ಬಕ** :—

ಕಂಸಪರಿವಾರದ ಒಬ್ಬ ರಾಕ್ಷಸ. ಕಂಸನ ಆಜ್ಞೆಯಂತೆ ಬಕಪಕ್ಷಿಯಾಗಿ ಗೋಕುಲಕ್ಕೆ ಬಂದು ಶ್ರೀಕೃಷ್ಣನನ್ನು ನುಂಗಿದ. ಶ್ರೀಕೃಷ್ಣನು ಪಚನವಾಗದಿರಲು ಅವನನ್ನು ಉಗುಳಿದ. ಕೃಷ್ಣನು ಅವನ ಕೊಕ್ಕುಗಳನ್ನು ಹಿಡಿದು ಸೀಳಿ ಕೊಂದ. (ಭಾಗ. ೧೦–೧೨).

**ಅಕುತೋಭಯ**=ಭಯರಹಿತ.

೪ **ಮನ್ನಣೆಗೆಡಿಸು**=ನಾಚಿಕೆಗೀಡುಮಾಡು.

**ಮನೆವಾರ್ತೆ**=ಮನೆಗೆಲಸ.

೫ **ಮಾರಾಂತರು**=ಎದುರಾಳಿಗಳು.

**ನಿತ್ಯ ಅನಿತ್ಯ**=ಸ್ಥಿರವಾದುವು, ಅಸ್ಥಿರವಾದುವು.

## ೬೫ನೆಯ ಹಾಡು

ಈ ಹಾಡಿನಲ್ಲಿ ದಾಸರು ಹಣ್ಣಿನ ಮಾರಾಟಗಾರರಾಗಿದ್ದಾರೆ. ಅವರು ಮಾರುವ ಹಣ್ಣೆಂದರೆ ಶ್ರೀಹರಿಯ ವಿವಿಧನಾಮದ ಹಣ್ಣುಗಳು.

೧ **ಅಳತೆಗೊಳ್ಳು**=ಅಳತೆಗೆ ಒಳಗಾಗು.
**ಗಜ**=(ಸಂ. ೧ ಪು. ೨೫೮).

೨ **ಸುಜನ**=ಕುಲೀನ.
**ಆನಂದಿ**=ನಗೆಮೊಗದವರು.

೩ **ತುರು**=ಆಕಳು.
**ಉರಗ**=(ಸಂ. ೧ ಪು. ೨೫೦).
**ಧ್ರುವ**=(ಸಂ. ೧ ಪು. ೨೬೧).

## ೬೬ನೆಯ ಹಾಡು

ಈ ಹಾಡಿನಲ್ಲಿ ದಾಸರು ನಾಮದ ಮುತ್ತುಗಾರರಾಗಿ ಮಾರಾಟಕ್ಕೆ ಹೊರಟಿದ್ದಾರೆ.

೧ **ಧ್ಯಾನ**=ಸ್ಮರಣೆ.

೨ **ಆಣಿಮುತ್ತು**=ಶ್ರೇಷ್ಠವಾದ ಮುತ್ತು.

೩ **ಕಡೆಯು ಬೆಲೆಯು ಕಾಣದು**=ಅಮೂಲ್ಯ.

## ೬೭ನೆಯ ಹಾಡು

ಹರಿನಾಮವನ್ನು ಕಲ್ಲುಸಕ್ಕರೆಗೆ ಹೋಲಿಸಿ ಎಲ್ಲರೂ ಇದನ್ನು ಕೊಳ್ಳಿರೆಂದು ದಾಸರು ಸಾರುತ್ತ ಹೊರಟಿದ್ದಾರೆ.

೧ **ಫುಲ್ಲ**=ಹೂ, ಅರಳು.
**ಗೋಣಿ**=ಚೀಲ.

೨ **ನಷ್ಟ**=ಹಾನಿ.

## ೬೮ನೆಯ ಹಾಡು

ಹರಿನಾಮದ ಉಪಾಸಕರಿಗೆ ಯಮನ ಬಾಧೆ ಏನೂ ಮಾಡಲಾರದೆಂದು ಇದರಲ್ಲಿ ದಾಸರು ದೃಢವಾದ ಮಾತಿನಲ್ಲಿ ಹೇಳಿದ್ದಾರೆ.

೧ **ಕ್ರತು**=ಯಜ್ಞ.

೨ **ಪ್ರಹ್ಲಾದ**=(ಸಂ. ೧ ಪು. ೨೬೨).

**ದ್ರೌಪದಿ**=(ಸಂ. ೧ ಪು. ೨೧೫).

**ಅಜಾಮಿಳ**=(ಸಂ. ೧ ಪು. ೨೬೪).

**ಧ್ರುವ**=(ಸಂ. ೧ ಪು. ೨೬೧).

**ಉನ್ನಂತ**=ಉನ್ನತ.

## ೧೯ನೆಯ ಹಾಡು

ಈ ಉಗಾಭೋಗದಲ್ಲಿ ನಾಮಮಹಿಮೆಯನ್ನು ದಾಸರು ತಮ್ಮ ಅನುಭವ ದರ್ಶನದಿಂದ ಸಿದ್ಧಗೊಳಿಸಿ ಹೇಳಿದ್ದಾರೆ.

೧ **ಪಂಢರಿರಾಯ**=ಪಂಢರಪುರದ ವಿಠಲ.

## ೨೦ನೆಯ ಹಾಡು

ಎಂತಹ ಪಾತಕಿಯನ್ನೂ ಹರಿನಾಮ ತಾರಿಸುವುದೆಂಬುದನ್ನು ದಾಸರು ಈ ತಮ್ಮ ಕೋರಿಕೆಯಲ್ಲಿ ಗಟ್ಟಿಗೊಳಿಸಿದ್ದಾರೆ.

**ವೆಗ್ಗಳ**=ಹೆಚ್ಚಿನ.

## ೨೧ನೆಯ ಹಾಡು

ಹರಿನಾಮವು ಪಾಪಹಾರಿಯೆಂಬುದನ್ನು ಈ ಉಗಾಭೋಗದಲ್ಲಿ ಹೇಳಿದ್ದಾರೆ.

**ಕಂಸಮರ್ದನ**=ಕೃಷ್ಣ.

**ಗೋಪೀಜಾರ**=ಕೃಷ್ಣ.

**ಅಜಮಿಳ**=(ಸಂ. ೧ ಪು. ೨೬೪).

## ೨೨ನೆಯ ಹಾಡು

ಹರಿನಾಮವನ್ನು ಅತ್ಯಲ್ಪಕಾಲ ಶ್ರದ್ಧೆಯಿಂದ ಸ್ಮರಿಸಿದರೂ ಮಾನವಜನ್ಮ ಸಾರ್ಥಕ ಎಂಬ ಮಾತನ್ನು ದಾಸರು ಈ ಉಗಾಭೋಗದಲ್ಲಿ ಹಾಡಿದ್ದಾರೆ.

**ಆವಿನಕೊಂಬಿನ ತುದಿ** :—

ತುದಿ ಚೂಪಾಗಿರುವುದರಿಂದ ಸಾಸಿವೆ ಅಲ್ಲಿ ನಿಲ್ಲುವುದು ಅಸಂಭವ. ಇದು ಅತ್ಯಲ್ಪಕಾಲದ ಸೂಚಕವಾಗಿದೆ.

**ಜೀವನ್ಮುಕ್ತ**=ಜೀವನದಲ್ಲಿಯೇ ಮುಕ್ತಿಯ ಆನಂದವನ್ನು ಅನುಭವಿಸುವವ.

## ೭೩ನೆಯ ಹಾಡು

ದೇಹವು ಅಸ್ಥಿರವಾದುದರಿಂದ, ವೇಳೆ ಅವೇಳೆಯೆನ್ನದೆ ಹರಿಯ ಕಲ್ಯಾಣ-ಗುಣಗಳನ್ನು ಕೇಳುತ್ತಿರಬೇಕೆಂದು ದಾಸರು ಹೇಳಿದ್ದಾರೆ.

**ನಿಮಿಷ**=ಒಂದುಸಲ ರೆಪ್ಪೆಹೊಡೆಯುವ ವೇಳೆ.

## ೭೪ನೆಯ ಹಾಡು

ಭಕ್ತಿಯು ದುರ್ಜನರಿಗೆ ಮೆಚ್ಚಿಕೆಯಾಗದೆಂಬ ಮಾತನ್ನು ಈ ಉಗಾಭೋಗ-ದಲ್ಲಿ ಸುಂದರವಾದ ಉಪಮೆಗಳೊಂದಿಗೆ ದಾಸರು ಹೇಳಿದ್ದಾರೆ.

**ಜಾರ**=ಪರಸ್ತ್ರೀಲಂಪಟ.

**ಖಳ**=ನೀಚ.

**ಶಾರೀರ**=ಧ್ವನಿ.

## ೭೫ನೆಯ ಹಾಡು

ಲೌಕಿಕ ಆಸೆಗಳನ್ನು ಬಿಡಿಸಿ ನಿನ್ನ ಸ್ಮರಣೆಯನ್ನು ಕೊಡು ಎಂದು ದಾಸರು ದೇವರಲ್ಲಿ ಪ್ರಾರ್ಥಿಸುತ್ತಾರೆ.

**ಮನದಾಸೆ**....ಕೆಡಿಸುತ್ತದೆ.

ವಿವಿಧ ಆಸೆಗಳಿಂದ ಚಂಚಲವಾದ ಮನಸ್ಸು ಸ್ಥಿರಗೊಳ್ಳದುದರಿಂದ, ಧ್ಯಾನಕ್ಕೆ ವಿಘ್ನವುಂಟಾಗುತ್ತದೆ.

## ೭೬ನೆಯ ಹಾಡು

**ಧ್ವಜ, ವಜ್ರ, ಅಂಕುಶ** :—

ಹರಿಯ ಪಾದದಲ್ಲಿ ಈ ಆಕೃತಿಯ ರೇಖೆಗಳು ಇರುತ್ತವೆಂದು ಹೇಳುತ್ತಾರೆ.

**ಗಜೇಂದ್ರ**=(ಸಂ. ೧ ಪು. ೨೫೮).

## ೭೭ನೆಯ ಹಾಡು

ಈ ಉಗಾಭೋಗ ಭಕ್ತನ ಭಜನೆಯ ಕೊನೆಯಲ್ಲಿ ಮಂಗಲವಾಗಿ ಹಾಡುವ ಭಾವದಿಂದ ಕೂಡಿದೆ.

**ಅಂಬುಜಾನಾಥ**=ರಮಾಪತಿ.

**ಭಾಗೀರಥಿಪಿತ**=ಭಾಗೀರಥಿ ಇವನ ಪಾದದಿಂದ ಹುಟ್ಟಿದಳು.

# ೮ ಏಕಾದಶೀಮಾಹಾತ್ಮ್ಯ

## ೭೮ನೆಯ ಹಾಡು

ಭಗವದ್ಭಕ್ತರಿಗೆ ಏಕಾದಶಿ ಒಂದು ಮಹಾವ್ರತ. ತಿಥಿತ್ರಯಗಳಾದ ದಶಮಿ, ಏಕಾದಶಿ, ದ್ವಾದಶಿ ಇವು ಈ ವ್ರತಕ್ಕೆ ಸಂಬಂಧಿಸಿದುವುಗಳು. ಏಕಾದಶಿಯಂದು ನಿರಾಹಾರ, ರಾತ್ರಿಯ ಜಾಗರಣೆ, ಮರುದಿನ ದ್ವಾದಶಿಯ ಪಾರಣೆ. ಇವೆಲ್ಲ ಭಕ್ತರಿಗೆ ಮುಖ್ಯ ಸಾಧನಗಳಾಗಿವೆ. ಈ ಹಾಡಿನಲ್ಲಿ ಏಕಾದಶಿಯ ವ್ರತಮಾಹಾತ್ಮ್ಯವನ್ನು ದಾಸರು ಹೇಳಿದ್ದಾರೆ.

೧ **ಹರಿದಿನ**=ಏಕಾದಶಿ.

**ಭಾವಜನಯ್ಯ**=ಕಾಮನ ತಂದೆ—ಕೃಷ್ಣ.

೩ **ದರ್ಪಣ**=ಕನ್ನಡಿ.

೪ **ಕ್ರತು**=ಯಜ್ಞ.

**ಜಾವ**=ಯಾಮ (೩ ತಾಸು).

**ಜಾಗರ**=ಎಚ್ಚತ್ತಿದ್ದು ಹರಿಭಜನೆ ಮಾಡುವುದು.

**ದೇವದೇವನ ದಿನ**=ಏಕಾದಶಿ.

**ಕಾವಲಿ**=ಹಂಚು.

## ೭೯ನೆಯ ಹಾಡು

ಎಲ್ಲ ವ್ರತಗಳಲ್ಲಿಯೂ ಏಕಾದಶಿವ್ರತವು ಹಿರಿದಾದುದೆಂಬುದನ್ನು ಈ ಹಾಡಿನಲ್ಲಿ ದಾಸರು ವಿವರವಾಗಿ ತಿಳಿಸಿದ್ದಾರೆ.

೧ **ಹರಿವಾಸರ**=ಏಕಾದಶಿ.

**ನ್ಯೂನ**=ಕೊರತೆ.

**ದುರ್ದಾನ**=ದುಷ್ಟರ ಕೈಯಿಂದ ತೆಗೆದುಕೊಂಡ ದಾನ.

**ನಂದನಂದನನ ವ್ರತ**=ಏಕಾದಶಿ.

೨ **ಹರಿಯ ಮರಿ**=ಸಿಂಹದ ಮರಿ

**ಕರಿಯ ಸಂಘ**=ಆನೆಗಳ ಗುಂಪು.

೩ **ಪಕ್ಷಸ್ರಾಯಶ್ಚಿತ್ತ**=ಹದಿನೈದು ದಿವಸಗಳಿಗೊಮ್ಮೆ ಮನದ ಶುದ್ಧಿಕರಣಕ್ಕಾಗಿ ಮಾಡುವ ವ್ರತ.
**ತರಣಿ**=ದಾಟಿಸುವುದು—ನಾವೆ.

೪ **ಅನೃತ**=ಸುಳ್ಳು.
**ಸ್ತ್ರೀಗೋಷ್ಠಿ**=ಸ್ತ್ರೀಸಂಭೋಗದ ಮಾತುಗಳು.
**ಖಗ**=ಪಕ್ಷಿ.

೫ **ನದ** :—

ಹಿಂದುಸ್ತಾನದ ನದಿಗಳಲ್ಲಿ ಬ್ರಹ್ಮಪುತ್ರ, ಶೋಣಭದ್ರ, ಸಿಂಧು ಇವು ನದ ಅಥವಾ ಗಂಡುಹೊಳೆಗಳೆನಿಸಿಕೊಳ್ಳುತ್ತವೆ.

# ೯ ಪುಣ್ಯಪ್ರತೀಕಮಾಹಾತ್ಮ್ಯ

## ೮೦ನೆಯ ಹಾಡು

ದಾಸರು ಬೇರೆಬೇರೆ ವಿಷ್ಣುಕ್ಷೇತ್ರಗಳನ್ನು ಯಾತ್ರೆಮಾಡುತ್ತ ಅಲ್ಲಲ್ಲಿಯ ವಿಗ್ರಹಗಳನ್ನು ಕುರಿತು ಹಾಡುಗಳನ್ನು ರಚಿಸಿದ್ದಾರೆ.

ಶ್ರೀರಂಗಪಟ್ಟಣದ ರಂಗನಾಥನನ್ನು ಕುರಿತು ರಚಿಸಿದ ಕೀರ್ತನೆ.

(ಸಂ. ೧ ಪು. ೨೩೬).

೧ **ಚೆನ್ನಿಗ**=ಚೆಲುವ.
**ಪ್ರಳಯ....ವಟಪತ್ರಶಯನ**=(ಸಂ. ೧ ಪು. ೩೦೯).
(ಭಾಗ. ೧೨–೪)

**ನಳಿನಭವ**=ಬ್ರಹ್ಮ.

೨ **ಆಣಿಮುತ್ತು**=ದೊಡ್ಡಮುತ್ತು.
**ಮಕರಕುಂಡಲ**=ಮೊಸಳೆಯ ಆಕಾರದ ಕಿವಿಯ ಆಭರಣ.
**ಭುಜಕೀರ್ತಿ**=ಭುಜಕಿರೀಟ.

ಅಪರಂಜಿ=ಶುದ್ಧ ಬಂಗಾರ.

೩ ರಮಣಿ=ರುಕ್ಮಿಣಿ.

ಪಾರಿಜಾತ=(ಭಾ. ೧೦-೫೯).

ಭಸ್ಮಾಸುರ=(ಸಂ. ೧ ಪು. ೩೧೨).

೪ ಪುಲುಕುಪೂಜೆ=(ಪೂಜೆಯ ಪ್ರಕಾರ).

'ಪುನುಗುಪೂಜೆ' ಇರಬಹುದೆ?

ತಲ್ಲಣ=ಪೀಡಕ.

೫ ಪಾಪವಿನಾಶ :—

ಕಾವೇರಿಯಲ್ಲಿಯ ಒಂದು ತೀರ್ಥ. ( ತಿರುಪತಿಯಲ್ಲಿಯೂ ಪಾಪನಾಶನವೆಂಬ ಹೆಸರಿನ ತೀರ್ಥವಿದೆ.

## ೮೧ನೆಯ ಹಾಡು

ಶ್ರೀರಂಗನಾಥನು ಶೇಷಪರ್ಯಂಕದಲ್ಲಿ ಮಲಗಿದುದನ್ನು ಕಂಡ ದಾಸರು, ಆತನ ಶಯನವನ್ನು ಉತ್ಪ್ರೇಕ್ಷಿಸಿ ಹಾಡಿದ್ದಾರೆ.

೧ ಗೋವರ್ಧನಗಿರಿ=(ಸಂ. ೧ ಪು. ೨೮೯).

ಮಧುರೆ=(ಸಂ. ೧ ಪು. ೨೪೪).

ಗೋಕುಲ=(ಸಂ. ೧ ಪು. ೨೪೬).

ಹದುಳಹೋಗಿ=ಶಕ್ತಿಗುಂದಿ.

೨ ಪೂತಣಿ=(ಸಂ. ೧ ಪು. ೨೭೫).

ಶಕಟ=(ಸಂ. ೩ ಹಾಡು ೬೧).

ಅಸು=ಪ್ರಾಣ, ಶಕ್ತಿ.

ಕಾಳಿಂಗ=(ಸಂ ೧ ಪು. ೨೫೦).

ಬಾಲಬ್ರಾಹ್ಮಣ=ವಾಮನ.

ಬಲಿ=(ಸಂ. ೧ ಪು. ೨೬೨).

## ೮೨ನೆಯ ಹಾಡು

ಇದು ಅಹೋಬಲ ಕ್ಷೇತ್ರದಲ್ಲಿಯ (ಸಂ. ೧ ಪು. ೨೯೦) ಶ್ರೀನೃಸಿಂಹನ ಸ್ತುತಿ.

೧ ಶರಣ್ಯ=ಶರಣುಬಂದವರು—ಭಕ್ತರು.

**ಶೀಲ**=ಶುದ್ಧಾಚರಣೆ.

**ಜ್ವಾಲಾನರಸಿಂಹ**=ಅಹೋಬಲದಲ್ಲಿರುವ ೯ ನರಸಿಂಹಮೂರ್ತಿಗಳಲ್ಲಿ ಒಂದು.

(೧ ಜ್ವಾಲಾನೃಸಿಂಹ, ೨ ಅಹೋಬಲನೃಸಿಂಹ, ೩ ಮಾಲೋಲನೃಸಿಂಹ (ಲಕ್ಷ್ಮೀನೃಸಿಂಹ), ೪ ಕ್ರೋಡಾಕಾರನೃಸಿಂಹ, ೫ ಕಾರಂಜನೃಸಿಂಹ, ೬ ಭಾರ್ಗವ-ನೃಸಿಂಹ, ೭ ಯೋಗಾನಂದನೃಸಿಂಹ, ೮ ಛತ್ರವಟನೃಸಿಂಹ, ೯ ಪಾವನನೃಸಿಂಹ.)

೨ **ಕುಲಗಿರಿ**=ಸಪ್ತಕುಲಪರ್ವತಗಳು.

ಮಹೇಂದ್ರಮಲಯಃಸಹ್ಯಃ ಶುಕ್ತಿಮಾನ್ ಋಕ್ಷಪರ್ವತಃ ।
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ॥

**ದಿಗ್ಗಜ**=ಎಂಟು ದಿಗ್ಗಜಗಳು.

ಕರಿಣ್ಯೋऽಭ್ರಮುಕಪಿಲಾಪಿಂಗಲಾನುಪಮಾಃಕ್ರಮಾತ್ ।
ತಾಮ್ರಕರ್ಣೀ ಶುಭ್ರದಂತೀಚಾಂಗನಾಚಾಂಜನಾವತೀ ॥

೪ **ಪ್ರಹ್ಲಾದ**=(ಸಂ. ೧ ಪು. ೨೬೨).

೫ **ನಿರುತದಲ್ಲಿ ನಿನ್ನೆರಡುತೊಡೆಯಲಿ ಶರೀರವಿರಲೆಂದೆನು-ತಲಿ**:—

ಈ ಪ್ರಹ್ಲಾದನ ವಾಕ್ಯದ ಮೂಲವು ಪುರಾಣದಲ್ಲಿ ದೊರಕಿಲ್ಲ.

## ೮೩ನೆಯ ಹಾಡು

ಬಿಜಾಪುರದಿಂದ ಪಶ್ಚಿಮಕ್ಕೆ ೬ ಮೈಲಿನಮೇಲಿರುವ ತೊರವೆಯ ನರಸಿಂಹ-ದೇವರ ಮಹಿಮೆಯನ್ನು ಕಲ್ಪನಾಚಮತ್ಕೃತಿಯಿಂದ ಈ ಹಾಡಿನಲ್ಲಿ ವರ್ಣಿಸಿದ್ದಾರೆ. ಈ ನರಸಿಂಹನ ಮೂರ್ತಿ ನೆಲಮನೆಯಲ್ಲಿದೆ.

೧ **ಅಂಗ**=ರೀತಿ.
**ತೆರ**=ಪದ್ಧತಿ.

೩ **ಅರಿ**=ಹಿರಣ್ಯಕಶಿಪು.

## ೮೪ನೆಯ ಹಾಡು

ಇದೂ ತೊರವೆಯ ನರಸಿಂಹನ ವರ್ಣನೆಯೆ. ಹಿರಣ್ಯಕಶಿಪುವನ್ನು ಕೊಂದ ಬಗೆಯನ್ನು, ದಾಸರು ತುಂಬ ಚತುರೋಕ್ತಿಗಳಿಂದ ಬೇರೆ ಅರ್ಥವನ್ನು ಕೊಟ್ಟು ಇಲ್ಲಿ ಹೇಳಿದ್ದಾರೆ.

೧ **ವಿನೋದಿ**=ಆಟಗಾರ, ಲೀಲಾಪುರುಷ.

೨ **ಸ್ನೇಹ**=ನಂಟುತನ, ಆಪ್ತತ್ವ.

## ೮೫ನೆಯ ಹಾಡು

ಈ ಹಾಡಿನಲ್ಲಿ ದಾಸರು ವೆಂಕಟೇಶನನ್ನು ಒಗಟದ ಭಾಷೆಯ ರೀತಿಯಲ್ಲಿ ಬಣ್ಣಿಸಿ ಹಾಡಿದ್ದಾರೆ.

೧ **ಶೇಷಾದ್ರಿ**=ತಿರುಪತಿ (ಸಂ. ೧ ಪು. ೨೩೮).

**ತಿಮ್ಮಪ್ಪ**=(ತಿರುಪತಿಯ ಅಪ್ಪ)=ವೆಂಕಟೇಶ.

**ಬೆರಳು....ಜೀವಿಸುವವನ**=ಆನೆಯ.

**(ಆನೆಯ) ಶಿರದ ಅಂದದ ದೇವನ**=ಗಣಪತಿಯ.

**ಉರುವ....ಇರುವನ**=ಚಂದ್ರನ.

ಗಣಪತಿ ಒಂದುದಿನ ಬ್ರಹ್ಮನಿಂದ ಪೂಜಿತನಾಗಿ ವಾಹನವಾದ ಇಲಿಯನ್ನೇರಿ ಮನೆಗೆ ಬರುತ್ತಿರುವಾಗ, ಹಾವೊಂದನ್ನು ಕಂಡು ಇಲಿಯು ಬೆಚ್ಚಿತು. ಆಗ ಗಣಪತಿ ಕೆಳಗೆ ಬೀಳಲು ಚಂದ್ರನು ನಕ್ಕನು. ಆಗ ಗಣಪತಿ ನಿನ್ನ ಮುಖವನ್ನು ಯಾರೂ ನೋಡಲಾಗದೆಂದು ಶಾಪಕೊಟ್ಟನು.

**(ಚಂದ್ರನ) ಶಿರದೊಳು ಧರಿಸಿದವನ**=ಮಹಾದೇವನ.

**(ಮಹಾದೇವನ) ಕೊರಳಮಾಲೆ....ಗಿರಿಯೊಳು**=ಶೇಷಾದ್ರಿ.

೨ **ವಾರಿಯೊಳುದಿಸಿದ ನಾರಿಯು**=ಲಕ್ಷ್ಮೀದೇವಿಯು.

**ಮಧ್ಯದಿ ನಿರಿಸಿ ಕುಳಿತವನ**:—

(ಲಕ್ಷ್ಮೀದೇವಿಯು ಜನನಿಯಾಗಿರುವಳೆಂಬ ಭಾವನೆ ತೋರುತ್ತದೆ.) ವೆಂಕಟೇಶನ.

**ವಾರಿಜವದನ**=ಶ್ರೀಹರಿ.

**ತೋರಿದಸಾರಧಿ**=ವೇದದಲ್ಲಿ.

**ಮೂರೊಂದು ಪೆಸರವನ**=ನಾಲ್ಕು ಹೆಸರುಳ್ಳವನ (ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ).

**ಮೇರುವಿನಗ್ರದಿ....ಚರಣವ** :—

ತ್ರಿವಿಕ್ರಮನಾಗಿ ತನ್ನ ಎರಡನೆಯ ಪಾದವನ್ನು ಮೇರುವಿನ ತುದಿಯಮೇಲೆ ಎಂದರೆ ಅಕಾಶದ ಕೇಂದ್ರದಲ್ಲಿ ಊರಿದನು.

**ಜೀವ**=ಪ್ರಾಣಸ್ವರೂಪ.

೩ **ಸೋತವಮಾನಿನಿ....ಸಲಹಿದನ** :—

ಗರುಡ, ಕಶ್ಯಪ ಮತ್ತು ವಿನತೆಯರ ಮಗ. ಅರುಣನು ಇವನ ಅಣ್ಣ. ಇವನ ತಾಯಿಯಾದ ವಿನತೆ ಕದ್ರುವಿಗೆ ಸೋತು ದಾಸಿಯಾದ್ದರಿಂದ, ಅವಳ ಮಗನಾದ ತಾನೂ ಕದ್ರುವಿಗೆ ದಾಸನಾಗಬೇಕಾಗಿತ್ತು. ಇವನು ಕದ್ರುವಿನ ಅಪೇಕ್ಷೆಯಂತೆ ಅಮೃತಕುಂಭ ತಂದುಕೊಟ್ಟು ತನ್ನ ತಾಯಿಯನ್ನು ದಾಸ್ಯದಿಂದ ಮುಕ್ತಳನ್ನಾಗಿ ಮಾಡಿದ. (ಭಾರ. ಆದಿ. ೨೫–೩೨–೩೪).

**ವಾತಭಕ್ಷಕರು**=ಹಾವುಗಳು.

**ತರೆ**=ನಾಶಮಾಡು.

**ನೂತನವಾಗಿಹ....ಮೇಲೆ**=ಗರುಡಾದ್ರಿಯೆಂಬ ಹೊಸ ಹೆಸರುಳ್ಳ ಶೇಷಾದ್ರಿಯಲ್ಲಿ.

೪–೫ ಈ ನುಡಿಗಳಲ್ಲಿಯ ಪೌರಾಣಿಕ ಸಂದರ್ಭಗಳು ನಮಗೆ ದೊರೆತಿಲ್ಲ.

೬ ಆದಿನಾರಾಯಣನೆಂಬ ಪರ್ವತ=ತಿರುಪತಿಯ ಬೆಟ್ಟದ ಮೊದಲನೆಯ ಶ್ರೇಣಿ.

೭ **ಅತ್ತೆಯ....ತಂದವನ**=ಅರ್ಥವಾಗುವುದಿಲ್ಲ.

**ಉತ್ತಮವಾಗಿಹ....ಇರುತಿಪ್ಪನ** :—

ಪರಮಾತ್ಮನ ಮಗಳಾದ ಆಕಾಶಗಂಗೆಯ ಸಮೀಪದಲ್ಲಿ ಇರುವವನು.

**ಬತ್ತಲೆಯಾಗಿಹ....ಪುತ್ರನೆಂದೆನಿಸಿದನ** :—

ಅತ್ರಿಋಷಿಯ ಪತ್ನಿಯಾದ ಅನಸೂಯೆಯ ಸತ್ಯಪರೀಕ್ಷೆಗೆಂದು ಹೋಗಿ ತ್ರಿಮೂರ್ತಿಗಳು ಕೂಸಾದಾಗ, ಶ್ರೀಹರಿಯು ದತ್ತಾತ್ರೇಯನಾದನು.

## ೮೬ನೆಯ ಹಾಡು

ಇದು ದಾಸರು ಶ್ರೀವೆಂಕಟೇಶನೊಡನೆ ಆಡಿದ ಸಲುಗೆಯ ಮಾತು.

೧ **ಬಲ್ಲಿದತನ**=ಗಟ್ಟಿಗತನ.

೨ **ಅರಿವುಮರೆವು ಮಾಡಿ**=ಅಜ್ಞಾನವನ್ನು ಹುಟ್ಟಿಸಿ.

೩ **ಅತ್ತೆಯಮಕ್ಕಳು**=ಪಾಂಡವರು.

೪ **ತೆತ್ತಿಗ**=ಬಾಂಧವ.

ವಿ. ಸೂ;— ಇಲ್ಲಿ ರಾಶಿಯ ಬದಲು ಗಾಸಿ ಇದ್ದರೆ ಒಳಿತಾಗಿತ್ತು.

೫ **ಪುರಂದರ**=ಇಂದ್ರ.

## ೮೭ನೆಯ ಹಾಡು

ಇದೊಂದು ವಿಷ್ಣುವಿನ ಬೇರೆಬೇರೆ ಕ್ಷೇತ್ರ ಮತ್ತು ರೂಪಗಳ ಅನುಕ್ರಮಣಿಕೆಯಂತಿದೆ.

೧ **ವರಗಿರಿ**=ತಿರುಪತಿ. (ಸಂ. ೧ ಪು. ೨೩೮).
**ಸಿಂಹಗಿರಿ**=ಅಹೋಬಲ. (ಸಂ. ೧ ಪು. ೨೯೦).
**ಹಸ್ತಿಗಿರಿ**=ಕಂಚಿ. (ಸಂ. ೧ ಪು. ೨೩೮).
**ಯದುಗಿರಿ**=ಮೇಲುಕೋಟೆ. (ಸಂ. ೧ ಪು. ೩೧೦).
**ಕಾವೇರಿ**=ಆದಿರಂಗ, ಪಶ್ಚಿಮರಂಗ (ಶ್ರೀರಂಗಪಟ್ಟಣ) ಮತ್ತು ಅಂತರಂಗ (ಶ್ರೀರಂಗಮ್) (ಸಂ. ೧ ಪು. ೨೩೬ ಮತ್ತು ೨೩೮).
**ಪುರುಷೋತ್ತಮ**=ಪುರಿ (ಜಗನ್ನಾಥಪುರಿ) (ಸಂ. ೧ ಪು. ೨೩೭)
**ಪಾಂಡುರಂಗ**=ಪಂಢರಾಪುರ. (ಸಂ. ೧ ಪು. ೨೩೭).

೨ **ಬದರಿಕಾಶ್ರಮ** (ಸಂ. ೧ ಪು. ೨೩೭).
**ಬಾದರಾಯಣ**=ವೇದವ್ಯಾಸರು.
**ಕಿಂಪುರುಷಖಂಡ** :—

ಹಿಮಾಲಯದ ಉತ್ತರಭಾಗದಲ್ಲಿದೆ. ಇಲ್ಲಿಯೇ ಚಿರಜೀವಿಯಾದ ಹನುಮಂತನು ಇರುವನೆಂದು ಪುರಾಣಗಳು ಹೇಳುತ್ತವೆ.

೩ **ಅನಂತಶಯನ**=(ಸಂ. ೧ ಪು. ೨೩೬).
**ಉಡುಪಿ**=(ಸಂ. ೧ ಪು. ೨೩೭).
**ವಾರಣಾಸಿ**=ಕಾಶಿ (ಸಂ. ೧ ಪು. ೨೯೨).
೪ **ಪ್ರಯಾಗ**=(ಸಂ. ೩ ಹಾಡು ೪೪, ೮ನೆಯ ನುಡಿ).
**ಗಯಾ**=(ಸಂ. ೩ ಹಾಡು ೪೪, ೮ನೆಯ ನುಡಿ).
**ಆದಿಕೇಶವ** :—

ಕಾಗಿನೆಲೆಯ ಆದಿಕೇಶವ (ಈ ದೇವರು ಕನಕದಾಸರ ಆರಾಧ್ಯದೈವತ. ಈ ಊರು ಹಾವೇರಿಯಿಂದ ನೈಋತ್ಯಕ್ಕೆ ೧೦ ಮೈಲಿನ ಮೇಲಿದೆ).

೫ **ಅತಳ, ವಿತಳ, ಸುತಳ, ಮಹಾತಳ, ತಳಾತಳ, ರಸಾತಳ, ಪಾತಾಳ**=ಏಳು ಅಧೋಲೋಕಗಳು.
**ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ**=ಇವು ಮೇಲಿನ ಲೋಕಗಳು.
೬ **ಮೇಲುಗಿರಿ**=ತಿರುಪತಿ.
**ಅಲುಮೇಲುಮಂಗ**=ತಿರುಚ್ಚಾನೂರು (ಸಂ. ೧ ಪು. ೨೪೦).
**ಕಾಲಿಂದಿ**=ಯಮುನಾ.
**ಕಾಳಿಂಗಮರ್ದನ**=ಕೃಷ್ಣ.

## ೮೮ನೆಯ ಹಾಡು

ಈ ಹಾಡಿನಲ್ಲಿ ಉಡುಪಿಯ ಶ್ರೀಕೃಷ್ಣದೇವಸ್ಥಾನದಲ್ಲಿ ನಡೆಯುತ್ತಿರುವ ಶ್ರೀಕೃಷ್ಣನ ಜೋಡುದೀವಟಿಗೆಯ ಉತ್ಸವವನ್ನು ದಾಸರು ಕಣ್ಣಾರೆಕಂಡು ವರ್ಣಿಸಿದ್ದಾರೆ.

೧ **ರಜತ**=ಬೆಳ್ಳಿ.
**ಪಂಜು**=ದೀವಟಿಗೆ.
**ಕಂಜಾಕ್ಷ**=ಕಮಲಾಕ್ಷ.
೨ **ಗುರುರಾಯ**=ಪರ್ಯಾಯಪೀಠಸ್ಥರು.
**ವಿನಿಯೋಗ**=ಊಳಿಗದವರು.

೩ **ಪಂಚಮುಖದ ಜ್ಯೋತಿ**=ಐದು ಬತ್ತಿಗಳುಳ್ಳ ದೀಪ.
**ಪೊಮ್ಮರಿಮೃಗ**=ಚಮರೀಮೃಗ.
**ಕಾಂಚನಮಯದ ಕಟ್ಟಿಗೆಕೋಲು**=ಬಂಗಾರದ ತಗಡುಬಡಿದ ಬೆತ್ತ.
**ಹಸುರಿನ ಲಾಂಛನನಾದಗೆ**=ಪಚ್ಚದ ಹಾರದಿಂದ ಶೋಭಿಸುವವಗೆ.

೪ **ಬಟ್ಟಲವೀಳ್ಯ**=ವೀಳೆಯದ ತಬಕ.
**ಲಾಜಾಕ್ಷತೆ**=ಬತ್ತದ ಅರಳಿನ ಅಕ್ಷತೆ.
**ಪುಟ್ಟಕದಳಿ**=ಮಿಟ್ಟಲೆ ಬಾಳೆ.
**ಹೊತ್ತಿಟ್ಟ**=ಹೊತ್ತಿಸಿದ.

೬ **ಮನನೆರಸಿ**=ಏಕಚಿತ್ತದಿಂದ.
**ಅದ್ವೈತ**=ಸರಿಯಿಲ್ಲದ.

## ೮೯ನೆಯ ಹಾಡು

ಈ ಹಾಡಿನಲ್ಲಿ ತಿರುಪತಿಯಲ್ಲಿ ನಡೆಯುವ ಧ್ವಜಮಹೋತ್ಸವಕಾಲದ ವರ್ಣನೆಯನ್ನು ದಾಸರು ಮಾಡಿದ್ದಾರೆ.

೧ **ಧ್ವಜದ ತಿಮ್ಮಪ್ಪ** :—
ಧ್ವಜಮಹೋತ್ಸವದ ವೇಳೆಯಲ್ಲಿ ಪಲ್ಲಕ್ಕಿಯಲ್ಲಿರಿಸಿ ಮೆರೆಸುವ ತಿಮ್ಮಪ್ಪ. (ಉತ್ಸವಮೂರ್ತಿ)

೨ **ಶಚಿ**=ಇಂದ್ರನ ಹೆಂಡತಿ.
**ಢಾಳಿಸು**=ಬೀಸು.
**ವ್ಯಜನ**=ಬೀಸಣಿಕೆ.
**ಚಿತ್ತಜಾತ**=ಕಾಮ.
**ಹಡಪ**=ಸಂಚಿ.
**ಕಾಳಂಜಿ**=ಉಗುಳುವ ಪಾತ್ರೆ.
**ಹರಿಣಾಂಕ**=ಚಂದ್ರ.

೩ **ಸ್ವಾದುಜಲ**=ಸಿಹಿನೀರು.

**ತರುಣಿ**=ಲಕ್ಷ್ಮಿ.
**ಸುಮನ**=ಹೂ.

೪ **ಮಂದರ, ಮಧ್ಯಮ, ತಾರಕ** = ಸಂಗೀತದಲ್ಲಿಯ ಮೂರು ಸ್ವರಸಪ್ತಕಗಳು.
**ಮೋಹನ**=ಗಂಧರ್ವರು ಹಾಡುವ ಸ್ವರಗಳು.
**ನಾರಂದ**=ನಾರದ.
**ಆಡುತ**=ಕುಣಿಯುತ್ತ.

೫ **ಗರುಡಧ್ವಜ**=ಗರುಡಲಾಂಛನವಾದ ಧ್ವಜ.

# ೧೦ ಪುರಾಣಪುರುಷಮಾಹಾತ್ಮ್ಯ

## ೬೦ನೆಯ ಹಾಡು

ಇಲ್ಲಿ ಲೋಕವಿರೋಧಕವಾಗಿ ಕಾಣುವಂತಹ ಪರಮಾತ್ಮನ ಪೌರಾಣಿಕ ಲೀಲೆಗಳನ್ನು ಉಪರೋಧಿಕ ಭಾಷೆಯಲ್ಲಿ ಬಣ್ಣಿಸಲಾಗಿದೆ.

೧ **ಎಣಿಸು**=ಭಾವಿಸು.
**ಅಳವು**=ಸಾಮರ್ಥ್ಯ, ಶಕ್ತಿ.
**ರಂಡೆಯ ಮಕ್ಕಳು**=ವಿಧವೆಯ ಮಕ್ಕಳು.
**ಕುಂಡಗೋಳಕರು**= ಗಂಡನಿರುವಾಗ ಜಾರತನಕ್ಕೆ ಹುಟ್ಟಿದ ಮಕ್ಕಳು ಕುಂಡರು ಮತ್ತು ಗಂಡ ಸತ್ತಮೇಲೆ ಹಡೆದ ಮಕ್ಕಳು ಗೋಳಕರು.

ಅಮೃತೇಜಾರಜಃ ಕುಂಡಃ ಮೃತೇಭರ್ತರಿ ಗೋಲಕಂ ।
ಯಸ್ತಯೋರನ್ನಮಶ್ನಾತಿ ಕುಂಡಾಶೀತ್ಯಭಿಧೀಯತೇ ॥

(ದೇವಲಸ್ಮೃತಿ)

**ಮಂಡೆನೇವರಿಸಿ**=ತಲೆಯನ್ನು ಸವರಿ.
**ಮೊಲೆಯನಿತ್ತವಳಿಗೆ**=ಪೂತನಿಗೆ (ಸಂ.೧ ಪ್ರ. ೨೬೫).

**ಮೈಗೂಡು**=ದೇಹವನ್ನು ಅರ್ಪಿಸು.

೨ **ತೊತ್ತಿನ ಮಗ**=ವಿದುರ (ಸಂ. ೧ ಪು. ೨೭೩).

**ಅತ್ತೆ**=ಕುಂತೀದೇವಿ.

**ಮಾವ**=ಕಂಸ (ಸಂ. ೧ ಪು. ೨೪೫).

**ಬಯ್ದ ಪಾತಕಿ**=ಶಿಶುಪಾಲ (ಸಂ. ೧ ಪು. ೨೭೯).

೩ **ತಂದೆಯ ಕೊಂದು**=ಹಿರಣ್ಯಕಶಿಪುವನ್ನು ಕೊಂದು.

**ಕಂದನ ಕೊಂದು....ಸಲಹಿದೆ**= ಕಂಸನನ್ನು ಕೊಂದು ಅವನ ತಂದೆಯಾದ ಉಗ್ರಸೇನನನ್ನು ಪಟ್ಟಕ್ಕೆ ಕುಳ್ಳಿರಿಸಿದ.

**ಬಲೀಂದ್ರ**=ಬಲಿರಾಜ (ಸಂ. ೧ ಪು. ೨೬೨).

**ಮರ್ಯಾದೆ**=ಸದಾಚಾರ.

## ೯೧ನೆಯ ಹಾಡು

ಈ ಹಾಡಿನಲ್ಲಿ ಪರಮಾತ್ಮನ ಮಹಿಮೆಯನ್ನು ವ್ಯಂಗ್ಯರೀತಿಯಲ್ಲಿ ಬಣ್ಣಿಸಿದ ಚಮತ್ಕಾರವನ್ನು ನೋಡಬಹುದು.

೧ **ಹಿಡಿಬಿಟ್ಟಮಾಡಿ**=ದುರ್ಲಕ್ಷ್ಯಿಸಿ.

**ಸಿಂಧುರಾಜ**=ಸಮುದ್ರರಾಜ.

**ಕುರುಹ**=ಲಕ್ಷಣಗಳನ್ನು.

**ಅರಿತ**=ಪ್ರಸಿದ್ಧರಾದ.

**ಹಿರಿಯರೆಂಬುದ....ಕಾಣದನಿವ** :—

ಪರಮಾತ್ಮನ ಸರ್ವೋತ್ತಮತ್ವವನ್ನು ಹೀಗೆ ಹೇಳಿದ್ದಾರೆ.

೨ **ಪರಿಪಂಥಿ**=ವಿರೋಧಿಗಳು.

**ಎದೆಯ ಮೇಲೆ....ಒದೆಯೆ**=ಭೃಗುಮುನಿ (ಸಂ. ೨ ಪು. ೧೭೬).

**ಮನವೆಲ್ಲ ಬಿಚ್ಚಿದ**=ಮನಸ್ಸನ್ನು ಅರಳಿಸಿದ.

೩ **ಗಿಡದ ಮರೆಯಲಿದ್ದು....ಕೊಂದ** :—

ರಾಮಾವತಾರದಲ್ಲಿ ವಾಲಿಯನ್ನು ಕೊಂದ ಸಂಗತಿ ಇಲ್ಲಿ ಕಾಣಿಸಿದೆ.
(ಸಂ. ೨ ಪು. ೨೨೩).

**ಚೌಪಟಮಲ್ಲ**=ನಾಲ್ಕು ದಿಕ್ಕಿನಲ್ಲಿಯೂ ಯುದ್ಧಮಾಡುವವ.

**ಮಥುರೆ**=(ಸಂ. ೧ ಪು. ೨೪೪).

**ಕೊಡೆಮಾಡಿ ಬೆಟ್ಟವ**=ಗೋವರ್ಧನ ಪರ್ವತವನ್ನು ಎತ್ತಿದ ಕಥೆ (ಸಂ. ೧ ಪು. ೨೪೯).

**ಮಡದಿಯರುಡುಗೆ....ಹುಸಿಯಲ್ಲಿ** :—

ಕಾತ್ಯಾಯಿನೀ ವ್ರತಕ್ಕೆಂದು ಯಮುನಾತೀರಕ್ಕೆ ಹೋಗಿ ನಗ್ನರಾಗಿ ಸ್ನಾನಮಾಡಿ ಗೋಪಿಯರು ಕಾತ್ಯಾಯಿನಿಯ ಪೂಜೆಮಾಡುವ ಪರಂಪರೆಯಿದ್ದಿತು. ಶ್ರೀಕೃಷ್ಣನು ಈ ರೂಢಿಯನ್ನು ತಪ್ಪಿಸಬೇಕೆಂದು ಅವರ ಸೀರೆಗಳನ್ನೆಲ್ಲ ತೆಗೆದುಕೊಂಡು ಮರವೇರಿ ಕುಳಿತ. (ಭಾಗ. ೧೦–೨೨).

**ಕಡಹದ ಮರ**=ಕದಂಬವೃಕ್ಷ.

**ಕಾಳಿಂಗ**=(ಸಂ. ೧ ಪು. ೨೫೦).

**ಸ್ಯಂದನ**=ರಥ.

**ನರ**=ಅರ್ಜುನ.

೩ **ಕುಂಚಿಗೆ ಮಾಡಿ**=ಮೂಲೆಮಾಡಿ.

**ಓದನವನು ಬೇಡಿ....ಹೊರೆದನು** :—

ಶ್ರೀಕೃಷ್ಣನು ಗೋಕುಲದಲ್ಲಿರುವಾಗ ಆಕಳ ಕಾಯಲಿಕ್ಕೆ ಹೋದನು. ಅಗ ಹಸಿವೆಯಾಗಿ ಜೊತೆಗಾರರನ್ನು ಕೂಡಿಕೊಂಡು ಸತ್ರಶಾಲೆಗೆ ಹೋಗಿ, ಆಹಾರವನ್ನು ಬೇಡಿದನು. ಅಲ್ಲಿದ್ದ ಋಷಿ-ಮುನಿಗಳು ಅವರಿಗೆ ಅನ್ನವನ್ನು ನೀಡದಿರಲು, ಅವರು ಋಷಿಪತ್ನಿಯರ ಕಡೆಗೆ ಹೋಗಿ ಅನ್ನವನ್ನು ದೊರೆಕಿಸಿ ಊಟಮಾಡಿದರು.

(ಭಾಗ. ೧೦–೨೩).

**ಪಾದರಿಪೆಣ್ಣು** = ಹಾದರಿಯರಾದ ಹೆಣ್ಣುಮಕ್ಕಳು. (ಕೃಷ್ಣನ ರಾಸಕ್ರೀಡೆ).

**ಭೂದಿವಿಜರ....ಪೋಷನ** :—

ತನ್ನ ಗುರುಗಳಾದ ಸಾಂದೀಪಿನಿ ಋಷಿಗಳಲ್ಲಿ ಅಭ್ಯಾಸಮಾಡುತ್ತಿರುವಾಗ ಉಳಿದ ವಿದ್ಯಾರ್ಥಿಗಳ ಕೂಡ ಮಧುಕರವೃತ್ತಿ ಕೈಕೊಂಡಿದ್ದನು.

**ಮಸ್ತಕವು....ಇರುವ**=ಸಂನ್ಯಾಸಿಗಳ ಅಂತರಂಗದಲ್ಲಿ ನೆಲಸಿರುವವ.

**ಭೇದಾಭೇದದಂದದಿ ತೋರುವ**=ಅವತಾರಗಳಲ್ಲಿ ಭಿನ್ನರೂಪದಿಂದ ಕಂಡರೂ ಮೂಲತಃ ಒಂದೇ ರೂಪದವನಾಗಿ ತೋರುವ.

**ಸಭೆಯೊಳಗೆ....ವ್ಮೈದೋರುವ :—**

ಶ್ರೀಕೃಷ್ಣನು ಸಂಧಾನಕ್ಕೆ ಹೋದಾಗ, ದುರ್ಯೋಧನನು ಅವನನ್ನು ನಿಂದಿಸಲು ಕೃಷ್ಣನು ತನ್ನ ವಿಶ್ವರೂಪದರ್ಶನವನ್ನು ಮಾಡಿಸಿದನು. (ಭಾ. ಉ. ೧೩೦-೧೩೧).

## ೯೨ನೆಯ ಹಾಡು

ಪುರಂದರದಾಸರ ನಿಂದಾಸ್ತುತಿಯ ವಿನೋದವನ್ನು ಈ ಹಾಡಿನಲ್ಲಿ ನೋಡಬಹುದು.

೧ **ಹಾಸಿಕಿಲ್ಲದೆ....ಪವಡಿಸಿದ**=ಶೇಷಶಾಯಿ.
**ಕರಡಿ**=ಜಾಂಬವತಿ.

ಋಕ್ಷರಾಜನಾದ ಜಾಂಬವಂತನ ಮಗಳು; ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು. ಸ್ಯಮಂತಮಣಿಯನ್ನು ಹುಡುಕಲು ಹೋಗಿ, ಶ್ರೀಕೃಷ್ಣ ಜಾಂಬವಂತನ ಕೂಡ ಮುಷ್ಟಿಯುದ್ಧ ಮಾಡಿದನು. ಯಾರಿಂದಲೂ ಸೋಲದ ಜಾಂಬವಂತನು ಸೋಲಲು ಆಶ್ಚರ್ಯಬಟ್ಟು, ಯುದ್ಧಮಾಡಿದವನು ಕೃಷ್ಣರೂಪದ ಶ್ರೀರಾಮಚಂದ್ರನೆ ಎಂದು ಖಂಡಿತ ತಿಳಿದು, ಸ್ಯಮಂತರತ್ನವನ್ನೂ ತನ್ನ ಮಗಳಾದ ಜಾಂಬವತಿಯನ್ನೂ ಕೃಷ್ಣನಿಗೆ ಅರ್ಪಿಸಿದನು. ಜಾಂಬವತಿ ಶ್ರೀಕೃಷ್ಣ ತೀರಲು ಅಗ್ನಿಪ್ರವೇಶ ಮಾಡಿದಳು. (ಭಾಗ. ೧೦-೫೬-೫೭).

**ದಾಸನ ಮನೆಯಲಿ ಉಂಡ** ವಿದುರನ ಮನೆಯಲ್ಲಿ ಉಂಡ. (ಭಾ. ಉದ್ಯೋ. ೯೧).

೨ **ಕುಂಡಗೋಳಕರು** = ಪಾಂಡವರು (ಹಾಡು ೯೦ ಟೀಕೆ ನೋಡಿರಿ).
**ಮುಂಡೆಬೋಳಕರು**=ಸಂನ್ಯಾಸಿಗಳು.

೩ **ಒಬ್ಬರಲಿ....ಪುಟ್ಟಿದನು** ವಸುದೇವ-ದೇವಕಿಯರ ಮಗನಾಗಿ ಮಥುರೆಯಲ್ಲಿ ಹುಟ್ಟಿದನು.
**ಒಬ್ಬರಲಿ ಬೆಳೆದನು** ನಂದ-ಯಶೋದೆಯರ ಬಳಿ ಗೋಕುಲದಲ್ಲಿ ಬೆಳೆದನು.

## ೯೩ನೆಯ ಹಾಡು

ಈ ಹಾಡಿನಲ್ಲಿಯೂ ದಾಸರ ನಿಂದಾಸ್ತುತಿಯ ವೈಲಕ್ಷಣ್ಯವನ್ನು ಕಾಣಬಹುದು. ಇದರಲ್ಲಿ ದಶಾವತಾರದ ಒಂದೊಂದು ವೈಶಿಷ್ಟ್ಯವನ್ನು ತಮ್ಮ ನಿಂದಾಸ್ತುತಿಗೆ ವಿಷಯವನ್ನಾಗಿ ತೆಗೆದುಕೊಂಡಿದ್ದಾರೆ.

೧ **ಚಂಚಲರೂಪ**=ಮೀನ (ಮತ್ಸ್ಯಾವತಾರ).
**ಬೆನ್ನಲಿ ಬುಗಟೆ**=ಆಮೆ (ಕೂರ್ಮಾವತಾರ).
**ಗೂಟದಂತೆ....ಮೋರೆಯು**=ಮಿಕ (ವರಾಹಾವತಾರ).
**ಬೂಟಕತನ**=ವಂಚನೆ.
**ಬಾಯಿತೆರೆವನು**=ಸಿಂಹ (ನರಸಿಂಹಾವತಾರ).

೨ **ಅಣುರೂಪದವ**=ಗಿಡ್ಡ (ವಾಮನಾವತಾರ).
**ನಿಲುವು**=ಎತ್ತರ.
**ಬಸವ....ಕೊಡಲಿ**=ಪರಶುರಾಮಾವತಾರ.
**ಮನುಜರ....ಕಪಿಗಳ....ಆಡುವ**=ರಾಮಾವತಾರ.
**ಮನೆ....ತಿಂಬವನಿಗೆ**=ಕೃಷ್ಣಾವತಾರ.
**ದಿಗಂಬರನಿವ**=ಬೌದ್ಧಾವತಾರ.
**ಅಂಬರದಲಿ....ಕುಣಿಸುವನು**=ಕಲ್ಕ್ಯವತಾರ.

## ೯೪ನೆಯ ಹಾಡು

ಶ್ರೀಹರಿಯ ಮೋಹಿನೀರೂಪದ ವರ್ಣನೆಯನ್ನೂ ಲೀಲೆಯನ್ನೂ ಈ ಹಾಡಿನಲ್ಲಿ ನೋಡಬಹುದು. (ಸಂ. ೨ ಪು. ೧೨೯).

೧ **ಹೆಂಡಿರನಾಳುವ....ಹೆಂಗುಸೀ ಕನ್ನಿಕೆ** = ಮೋಹಿನೀರೂಪದ ವಿಷ್ಣು.
**ಅಳವಡಿಸು**=ನಿರ್ಣಯಿಸಿ ಹೇಳು.
**ಅನಂತ**=ಎಣಿಕೆಗೆ ನಿಲುಕದಷ್ಟು.
**ದನುಜ**=ರಾಕ್ಷಸರ ಒಂದು ಪಂಗಡ.

(ಪ್ರಾಚೇತಸ ದಕ್ಷ ಪ್ರಜಾಪತಿ ಅಸಿಕ್ನಿಯ ಮಗಳು ದನು. ಇವಳು ಕಶ್ಯಪನನ್ನು ಮದುವೆಯಾದಳು. ಇವಳ ಸಂತತಿಯವರಿಗೆ ದನುಜ, ದಾನವರೆಂಬ ಹೆಸರು.

**ಪ್ರಪಂಚದಿ**=ಪಂಕ್ತಿಯಲ್ಲಿ ಪರಪಂಕ್ತಿಮಾಡಿ.

೨ **ಶಿಶುಬೊಂಬೆಯು ತೋರ ಆಲದೆಲೆಯ ಮೇಲೆ**= (ಸಂ. ೧ ಪು. ೪೦೯).

**ತೋರ**=ಶಿಶುವಿನ ಅಳತೆಯಷ್ಟು.

**ಅಸುಮಯ**=ಮೂಲಜೀವಿಗಳಿಂದ ತುಂಬಿದ.

**ಒಸಗೆ**=ಮದುವೆ.

**ಹೊಕ್ಕುಳ ಹೂವಲಿ....ಈಕನ್ನಿಕೆ**=ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮನು ಹುಟ್ಟಿದನು. (ಭಾ. ೩–೮).

೩ **ಬೇಗೆಗಣ್ಣವ**=ಮಹಾದೇವ.

**ಬಿಸುಗೈ ತಾಗುವಾಗ**= ಭಸ್ಮಾಸುರನು ಇವನ ತಲೆಯಮೇಲೆ ಕೈಯಿಡಲು ಬರುವಾಗ. (ಸಂ. ೧ ಪು. ೩೧೨).

**ಬೇಲೂರ ಚೆನ್ನಿಗ**=(ಸಂ. ೧ ಪು. ೨೩೬).

ಇಲ್ಲಿಯ ದೇವರಿಗೆ ಮೋಹಿನೀರೂಪ ಹಾಕುವ ಪರಂಪರೆ ಇದೆ. ಆಗ ಅದನ್ನು ನೋಡಿ ದಾಸರು ಈ ಹಾಡನ್ನು ಹಾಡಿರಬಹುದು.

## ೯೫ನೆಯ ಹಾಡು

ಈ ಹಾಡಿನಲ್ಲಿಯೂ ಮೋಹಿನೀರೂಪದ ಲೀಲಾವರ್ಣನೆಯನ್ನು ಕಾಣಬಹುದು.

೧ **ಹೊಂತಕಾರಿ**=ಧೂರ್ತ.

**ಸಂತತ ಸುರರಿಗೆ....ಪಂಕ್ತಿಯ ಮಾಡಿದ**=(ಸಂ.೨ ಪು.೧೨೯).

**ಮಂದರ** :—

ಮೇರುಪರ್ವತಕ್ಕೆ ಪೂರ್ವಭಾಗದಲ್ಲಿ ಭೂಮಿಯನ್ನು ನಿಲ್ಲಿಸಿರುವ ಪರ್ವತ. ದೇವ-ದಾನವರು ಕ್ಷೀರಸಾಗರ ಕಡೆಯುವಾಗ, ಇದನ್ನು ಕಡೆಗೋಲನ್ನಾಗಿ ಮಾಡಿಕೊಂಡಿದ್ದರು.

**ಸಿಂಧು**=ಕ್ಷೀರಸಾಗರ.

**ಇಂದುಮುಖಿ**=ಸುಂದರಿ, ಮೋಹಿನಿ.

**ಧಂಧನೆ**=ಗಡಿಬಿಡಿ.

೨ **ಅಸುರ**=ಭಸ್ಮಾಸುರ.

## ೯೬ನೆಯ ಹಾಡು

ಈ ಹಾಡಿನಲ್ಲಿ ಇರುವ ನಿಂದಾಸ್ತುತಿಯ ಸವಿನುಡಿಗಳು, ದಾಸರ ಕಲ್ಪನಾ-ಚಮತ್ಕೃತಿಯನ್ನು ಪ್ರಕಟಪಡಿಸುವಂತಿರುವುವು.

೧ **ನಾರಾಸಿ**=ಸಮುದ್ರ.
**ಶ್ರುತಿಹೀನ**=ಕಿವಿಯಿಲ್ಲದ ( ಹಾವುಗಳಿಗೆ ಕಿವಿಗಳಿಲ್ಲವೆಂಬುದು ಶಾಸ್ತ್ರಸಿದ್ಧವಾದ ಸಂಗತಿ).

೨ **ತುಂಬು**=ಆಕಳು.

೩ **ನಿರ್ಧಾರವಾದ**=ತನ್ನದೆಂದು ನಿಶ್ಚಿತವಾದ.
**ಹಾರುವ ಹದ್ದು**=ಗರುಡ.
**ಗರುವಿ**=ಅಭಿಮಾನಿ.
**ಬೋವ**=ಸಾರಥಿ.
**ಕುಬ್ಜೆ**=(ಸಂ. ೧ ಪು. ೨೭೯).
**ಗದುಗಿನ ವೀರನಾರಾಯಣ**=(ಸಂ. ೧ ಪು. ೨೮೬).

## ೯೭ನೆಯ ಹಾಡು

ಈ ಹಾಡಿನಲ್ಲಿ ದಾಸರು ಶ್ರೀಹರಿಯನ್ನು ಮಗುವೆಂದು ಭಾವಿಸಿ, ತಾಯಿಯಂತೆ ಮಗನ ಲೀಲಾವಿನೋದಗಳನ್ನು ಕೌತುಕದಿಂದ ಕೊಂಡಾಡುತ್ತಾರೆ.

೧ **ಖಗವರ**=ಪಕ್ಷಿಶ್ರೇಷ್ಠ, ಗರುಡ.
**ಒಬ್ಬಳ....ಬಂದು**=ದೇವಕಿಯ ಹೊಟ್ಟೆಯಲ್ಲಿ ಹುಟ್ಟಿ.
**ಮತ್ತೊಬ್ಬಳ....ಬೆಳೆದು**= ಯಶೋದೆಯಿಂದ ಪಾಲನೆಯನ್ನು ಪಡೆದು.
**ತಬ್ಬಿಬ್ಬಾಟ**=ಆಶ್ಚರ್ಯಕರವೆನಿಸುವ ಆಟ.

೨ **ಪೂತನಿ**=(ಸಂ. ೧ ಪು. ೨೭೫).
**ಗೋಪಿ**=ದೇವಕಿ.

೩ **ಬಾಯೊಳು....ತೋರಿದುದು**=(ಭಾಗ. ೧೦-೮).

೪ **ಕಾಳಿಂಗ**=(ಸಂ. ೧ ಪು. ೨೫೦).

೫ **ಒಂದು ಪಾದ....ಕಲಿತೆಯೊ**=ವಾಮನಾವತಾರ.

೬ **ಉರಿಹಸ್ತದವ**=ಭಸ್ಮಾಸುರ (ಸಂ. ೧ ಪು. ೩೧೨).

೭ **ನಾಗರಾಜ**=ಕರಿರಾಜ (ಸಂ. ೧ ಪು. ೨೫೨).

**ವಿಗಡ**=ಭೀಕರ.

**ಹಗರಣದ**=(ತ್ಸ—ಪ್ರಕರಣ) ನಟನೆಯ.

೮ **ವಿದುರ**=(ಸಂ. ೧ ಪು. ೨೭೩).

**ಒಕ್ಕುಡಿತೆ**=ಒಂದು ಸೆರೆ.

೯ **ಡಂಭಕ**=ಆಡಂಬರದವ.

**ಡಂಭಕ....ಕಲಿತೆಯೊ**=ನರಸಿಂಹಾವತಾರ.

೧೦ **ಜರಾತನಯ**=ಜರಾಸಂಧ (ಸಂ. ೧ ಪು. ೨೨೬).

೧೧ **ಪ್ರಾಣ....ಸೈಂಧವಗೆಸಲು....ಕಲಿತೆಯೊ**=
(ಸಂ. ೧ ಪು. ೨೯೬).

೧೨ **ಆ ಶಿರವಾತನ ತಂದೆಯ ಕರದೊಳು....ಕಲಿತೆಯೊ**
**ಆತನ ತಂದೆ=ಜಯದ್ರಥನ ತಂದೆ, ವೃದ್ಧಕ್ಷತ್ರ**

ವೃದ್ಧಕ್ಷತ್ರ ಸಿಂಧುದೇಶದ ಅರಸು. ಇವನ ಮಗ ಜಯದ್ರಥ. ದುರ್ಯೋಧನನ ತಂಗಿಯ ಮಾವ. ಈತ ಸಾಯಂಸಂಧ್ಯೆಯನ್ನು ಮಾಡುತ್ತಿದ್ದಾಗ ಅರ್ಜುನನ ಬಾಣದಿಂದ ಛಿನ್ನವಾದ ಜಯದ್ರಥನ ರುಂಡವು ಇವನ ಬೊಗಸೆಯಲ್ಲಿ ಬಿತ್ತು. ವೃದ್ಧಕ್ಷತ್ರ ಹೇಸಿ ಅದನ್ನು ನೆಲಕ್ಕೆ ಒಗೆದನು. ಅದಕಾರಣ ಅವನ ತಲೆ ಒಡೆದು ಸಾವಿರ ಹೋಳಾಯಿತು. (ಭಾ. ದ್ರೋಣ. ೧೪೮).

೧೩ **ಸರ್ಪನ....ಕಲಿತೆಯೊ** :—

ಅರ್ಜುನನು ಅಗ್ನಿಯ ಅಪೇಕ್ಷೆಯಂತೆ ಖಾಂಡವವನವನ್ನು ಅವನಿಗೆ ಆಹುತಿ ಕೊಟ್ಟ ಸಮಯದಲ್ಲಿ ಆ ವನದಲ್ಲಿದ್ದ ತಕ್ಷಕನ ಹೆಂಡತಿ ಅವನನ್ನು ಬಾಯಲ್ಲಿ ಕಚ್ಚಿಕೊಂಡು ಹೋಗುತ್ತಿರಲು, ಅರ್ಜುನನು ಬಾಣಹೊಡೆದು ಅವಳ ತಲೆ ಕತ್ತರಿಸಿದ. ಆಗ ತಕ್ಷಕನು ಹಾವಾಗಿ ಸರ್ಪಾಸ್ತ್ರನಾಗಿ ಕರ್ಣನ ಬತ್ತಳಿಕೆಯಲ್ಲಿ ಸೇರಿ, ತನ್ನ ಸೇಡು ತೀರಿಸುವ ಸಮಯ ಕಾದಿದ್ದನು. ಇದೇ ಸರ್ಪಾಸ್ತ್ರವನ್ನು ಕರ್ಣನು ಅರ್ಜುನನ ಕೊರಳಿಗೆ ಗುರಿಯಿಟ್ಟು ಹೊಡೆದಾಗ, ಶ್ರೀಕೃಷ್ಣನು ಅರ್ಜುನನ ರಥವನ್ನು ನೆಲಕ್ಕೆ ಒತ್ತಲು, ಸರ್ಪಾಸ್ತ್ರ ಅರ್ಜುನನ ಕಿರೀಟವನ್ನು ಕೊಂಡೊಯ್ದಿತು. ಇನ್ನೊಂದು ಸಲ ತನ್ನನ್ನು

ಪ್ರಯೋಗಿಸೆಂದು ಹೇಳಿದರೂ ಕರ್ಣನು ಕುಂತಿಗೆ ಕೊಟ್ಟ ಮಾತಿಗಾಗಿ ಒಪ್ಪಲಿಲ್ಲ. (ಭಾ. ಕರ್ಣ. ೯೭-೯೮).

೧೪ **ದುರುಳ ದುಃಶಾಸನ....ಕಲಿತೆಯೊ**=(ಭಾ. ಸಭಾ. ೩೮).

ದ್ರೌಪದಿಯ ವಸ್ತ್ರಾಪಹರಣದ ಕತೆ.

೧೫ **ಕುರುಪತಿ....ಕಲಿತೆಯೊ** :—

ಸಂಧಾನಕ್ಕಾಗಿ ಶ್ರೀಕೃಷ್ಣನು ಹೋದಾಗ ಸಭೆಯಲ್ಲಿ ಶ್ರೀಕೃಷ್ಣನು ಬರಲು, ಸಭಿಕರೆಲ್ಲರು ಮರ್ಯಾದೆಗಾಗಿ ಎದ್ದು ನಿಂತರು. ದುರ್ಯೋಧನನು ಮಾತ್ರ ತನ್ನ ಸ್ಥಳದಿಂದ ಕದಲಲಿಲ್ಲ. ಆಗ ಶ್ರೀಕೃಷ್ಣನು ಉಂಗುಟದಿಂದ ನೆಲವನ್ನು ಒತ್ತಲು ದುರ್ಯೋಧನನು ಸಿಂಹಾಸನದಿಂದ ಉರುಳಿ ಶ್ರೀಕೃಷ್ಣನ ಕಾಲಮೇಲೆ ಬಿದ್ದನು. (ಭಾ. ಉದ್ಯೋ. ೧೩೦-೧೩೧).

೧೬ **ದುರ್ಯೋಧನ....ಕಲಿತೆಯೊ**=(ಭಾ. ಉದ್ಯೋ. ೭).

೧೭ **ಪತಿಶಾಪದಿ....ಕಲಿತೆಯೊ**=(ಸಂ. ೧ ಪು. ೨೬೮).

೧೮ **ಅಂಬರೀಷ....ಕಲಿತೆಯೊ**=(ಸಂ. ೧ ಪು. ೨೭೨).

**ಇಂದುಧರಾಂಶ**=ರುದ್ರಾಂಶ, ದುರ್ವಾಸ. (ಅತ್ರಿ ಮತ್ತು ಅನುಸೂಯೆಯರ ಮಗ. ರುದ್ರಾಂಶದಿಂದ ಹುಟ್ಟಿದ. ಭಾಗ. ೪-೧).

೧೯ **ಕುಲಛಲ....ಕಲಿತೆಯೊ**=ಅಜಾಮಿಳ (ಸಂ. ೧ ಪು. ೨೬೪).

೨೦ **ಬಡತನ....ಕಲಿತೆಯೊ**=ಸುದಾಮ ಅಥವಾ ಕುಚೇಲ. (ಸಂ. ೧ ಪು. ೨೬೮).

## ೯೮ನೆಯ ಹಾಡು

ಇದು ಗಜೇಂದ್ರಮೋಕ್ಷದ ಕಥೆಯನ್ನೊಳಗೊಂಡ ಉದಯರಾಗದ, ಕೀರ್ತನೆ. ಇದರ ನುಡಿಗಳೆಲ್ಲ ವಾರ್ಧಿಕ ಷಟ್ಪದಿಯ ಲಕ್ಷಣಗಳಿಂದ ಕೂಡಿವೆ.

೧ **ನಾಗೇಂದ್ರ**=ಶೇಷ

**ಪಾಂಡ್ಯದೇಶ** :—

ಈಗಿನ ತಿರುನೆಲ್‍ವೇಲಿ ಮತ್ತು ಮಧುರೆ ಜಿಲ್ಲೆಗಳಿಗೆ ಈ ಹೆಸರು ಪುರಾಣಕಾಲದಲ್ಲಿ ಪ್ರಚಾರದಲ್ಲಿತ್ತು. ಇದು ಹಿಂದುಸ್ತಾನದ ತೀರ ದಕ್ಷಿಣದ ಪ್ರದೇಶ. (ಭಾ. ಭೀಷ್ಮ. ೯).

**ಪುಂಡರೀಕ**=ಕಮಲ.

**ಅಗಸ್ತ್ಯ** :—

ಮಿತ್ರಾವರುಣ ಮತ್ತು ಊರ್ವಶಿಯರ ಮಗ. ಇವನು ಕುಂಭದಲ್ಲಿ ಹುಟ್ಟಿದುದರಿಂದ ಇವನಿಗೆ ಕುಂಭಸಂಭವನೆಂಬ ಹೆಸರುಂಟಾಯಿತು. ವಿದರ್ಭದೇಶದ ರಾಜಕುಮಾರಿ ಲೋಪಾಮುದ್ರೆ ಇವನ ಹೆಂಡತಿ. (ಭಾ. ಸಭಾ. ೧೧).

**ಶುಂಡಾಲ**=ಆನೆ.

೨ **ಎರಡೀರೈದು**=ಇಪ್ಪತ್ತು.

**ತ್ರಿಕೂಟಾದ್ರಿ**=ಒಂದು ಪರ್ವತದ ಹೆಸರು.

**ಶೃಂಗ**=ಕೋಡು, ಶಿಖರ

**ರಾರಾಜಿಸುವ**=ಹೊಳೆಯುವ.

**ನಾರಾಯಣಾಂಶ**=ಇದು ಪರಮಾತ್ಮನ ಒಂದು ಅಂಶವಾಗಿತ್ತು.

**ಸೌರಭ**=ಸುಗಂಧ.

**ಅಶ್ವತ್ಥ**=ಅರಳಿಮರ.

**ಪೂಗ**=ಅಡಿಕೆಮರ.

**ಪುನ್ನಾಗ**=ಪೀಳೆಯದೆಲೆಯ ಒಂದು ಜಾತಿ.

**ಜಂಬೀರ**=ನಿಂಬೆ, ಕಂಚಿ, ಮುಂ.

**ಗುಲ್ಮ**=ಕಂಟಿ.

**ಶಾಖಾಮೃಗ**=ಮಂಗ.

**ವಾರಣೇಂದ್ರ**=ಗಜರಾಜ.

೩ **ಪಾನಾಭಿಲಾಷೆ**=ನೀರು ಕುಡಿಯಬೇಕೆಂಬ ಇಚ್ಛೆ.

**ನೆಗಳು**=ಮೊಸಳೆ.

೪ **ಇಭರಾಜ**=ಗಜೇಂದ್ರ.

**ಔಡೊತ್ತಿ**=ಹಲ್ಲುಕಚ್ಚಿ.

೫ **ಮಾಯಾಪ್ರಬಂಧಕ**=ಅಜ್ಞಾನವನ್ನು ತಡೆಯುವವ.

**ದಂಡುಗ**=ತೊಂದರೆ.

೬ **ಪರಮಾಕಾಶ**=ಅವ್ಯಾಕೃತಾಕಾಶ.

**ನಿರ್ಲಯು**=ನಾಶರಹಿತ.

**ನಿರಾಕಾರ**=ಅನಂತ ರೂಪದವ.

**ನಿರ್ಗುಣ**=ಪ್ರಾಕೃತ ಗುಣಾತೀತ.

**ನಿರವಧಿಕ**=ಕಾಲಾತೀತ.

**ನಿರವದ್ಯ**=ದೋಷದೂರ.

೭ **ಗುಪ್ತಕಂಠಸ್ವರದ**=ದನಿ ಕುಗ್ಗಿದ.

**ಅಕಾಂತ**=(ತ್ಸ—ಆಕ್ರಾಂತ) ಮೊರೆ.

**ಅನಂತಶಯುನ** = ಶ್ರೀಹರಿಯ ಮೂರು ವಾಸಸ್ಥಾನಗಳಲ್ಲಿ ಒಂದು.

**ಸಂತವಿಡುತ**=ಸಾವರಿಸುತ್ತ.

೮ **ಕರಿವರನ**=ಗಜೇಂದ್ರನನ್ನು.

**ತೆಗೆದುದು**=ಇಲ್ಲದಂತಾಯಿತು.

**ನಗಧರ**=ಶ್ರೀಹರಿ.

**ಓಲೈಸು**=ಮನ್ನಿಸು.

**ನಗರಿಪುಪುರ**=ಇಂದ್ರಪುರ, ಸ್ವರ್ಗ.

**ದೇವಲ** :—

ಕಶ್ಯಪಗೋತ್ರದ ಒಬ್ಬ ವೇದಮಂತ್ರಕಾರ ಮತ್ತು ಪ್ರವರಕಾರ. ಇವನಿಗೆ ಅಸಿತನೆಂಬ ಇನ್ನೊಂದು ಹೆಸರಿದೆ. ಇವನು ಹೂ ಹೂ ಎಂಬ ಗಂಧರ್ವನಿಗೆ ಶಾಪ- ಕೊಟ್ಟನು. (ಭಾಗ. ೮–೪). ಆದುದರಿಂದ ಅವನು ಮೊಸಳೆಯಾದನು.

೯ **ಅಂಗದ**=ತೋಳಬಾಪುರಿ.

**ವೈಜಯುಂತಿ**=ರತ್ನಮಾಲೆ.

**ಕೃಪೇಕ್ಷಣ**=ದಯಾಪೂರ್ಣದೃಷ್ಟಿ.

೧೦ **ವಿರಜೆ**=ಗಂಗಾನದಿ.

**ಶರವರಧಿ**=ಕ್ಷೀರಸಾಗರ.

**ಸುರಪ**=ಇಂದ್ರ.

**ಅಹಿಪತಿ**=ಶೇಷ.

**ಪರಜನ್ಮ**=ಅವತಾರ.
**ಪರಮೇಷ್ಠಿ**=ಬ್ರಹ್ಮ. (ಭಾಗ. ೮-೪-೧೭-೨೫).
೧೧ **ವಿಹಂಗಾಧಿಪ**=ಗರುಡ.

## ೯೯ನೆಯ ಹಾಡು

### ದ್ರೌಪದಿಯ ಮಾನಸಂರಕ್ಷಣೆ.

ಇದರಲ್ಲಿ ದ್ರೌಪದಿಯ ವಸ್ತ್ರಾಪಹರಣದ ಕಾಲದಲ್ಲಿ ಆಕೆಯ ಮೊರೆಯನ್ನು ಕೇಳಿ ಶ್ರೀಕೃಷ್ಣನು ಅಕ್ಷಯವಸ್ತ್ರ ದಾನಮಾಡಿದ ಕಥೆ ಇದೆ. ಇನ್ನೊಂದು ಹಾಡು 'ವಾಸುದೇವಾಯ ನಮೋ' ಎಂಬುದು ಈಗ ಪ್ರಚಾರದಲ್ಲಿದ್ದು ಅದು ಪುರಂದರ-ದಾಸರ ಅಂಕಿತದಿಂದ ಕೂಡಿರುವುದು. ಆದರೆ ಹಸ್ತಪ್ರತಿಗಳಲ್ಲಿ ಅದಕ್ಕೆ ಕನಕದಾಸರ ಅಂಕಿತವಿದೆ.

೧ **ಕರಿಯ ಪುರ**=ಹಸ್ತಿನಾವತಿ. (ಸಂ. ೧ ಪು. ೨೬೫).
**ಒಡ್ಡಿ**=ಪಣಕ್ಕೆ ಹಚ್ಚಿ.
**ಪಾಸು**=ಲೆತ್ತ, ದಾಳ.
**ಶಕುನಿ** :—.

ಸುಬಲರಾಜನ ಹಿರಿಯಮಗ. ದುರ್ಯೋಧನನ ಸೋದರಮಾವ. ಇವನ ಕುಟಿಲತಂತ್ರದಿಂದಲೆ ಪಾಂಡವರು ವನವಾಸ-ಅಜ್ಞಾತವಾಸಗಳನ್ನು ಅನುಭವಿಸ-ಬೇಕಾಯಿತು. ಕುರುಕ್ಷೇತ್ರದ ಯುದ್ಧಕ್ಕೆ ಇವನ ವಂಚನೆಗಳೇ ಕಾರಣವಾದುವು.

೨ **ಶಿದ್ದಿ**=ಆಜ್ಞೆಮಾಡಿ.
**ಮನ್ನೆಯ**=ಮಾಂಡಲಿಕ.
**ಮುದ್ರೆಮನ್ನೆಯರು**=ರಾಜಮುದ್ರೆಯ ಅಧಿಕಾರಿಗಳು.
**ನಿಜದಿ**=ನಿಜವಾಗಿ.
೫ **ಕಾಯ**=ದೇಹ.
೬ **ಶಲ್ಯ** :—

ಮದ್ರದೇಶದ ರಾಜ. ನಕುಲ-ಸಹದೇವರ ಸೋದರಮಾವ. ಮಾದ್ರಿಯ ಅಣ್ಣ. ಇವನು ಕುರುಕ್ಷೇತ್ರದ ಯುದ್ಧದಲ್ಲಿ ಕೌರವರ ಪಕ್ಷಕ್ಕೆ ಸೇರಿ, ಸೇನಾಪತಿಯಾಗಿ ಯುದ್ಧಮಾಡಿ ಧರ್ಮರಾಜನಿಂದ ಹತನಾದನು. (ಭಾ. ಶಲ್ಯ.)

**ಭಗದತ್ತ** :—

ನರಕಾಸುರನ ಮಗ. ಪ್ರಾಗ್ಜ್ಯೋತಿಷ ನಗರದಲ್ಲಿ ರಾಜ್ಯವಾಳುತ್ತಿದ್ದನು. ಇವನು ಗಜಯುದ್ಧಪ್ರವೀಣ. ಭಾರತಯುದ್ಧದ ೧೨ನೆಯ ದಿವಸ ಅರ್ಜುನನಿಂದ ಮಡಿದನು. (ಭಾ. ದ್ರೋಣ. ೨೬–೨೮–೨೯).

**ಅಶ್ವತ್ಥಾಮ**=ದ್ರೋಣಾಚಾರ್ಯರ ಮಗ.

**ಗುರುಹಿರಿಯರು**=ದ್ರೋಣ, ಭೀಷ್ಮ, ಕೃಪ ಮುಂ.

೭ **ಮುಂದರಿಯದೆ**=ಮುಂದಾಗುವ ಕೇಡನ್ನರಿಯದೆ.

೮ **ಚಲ್ಲೆಗಂಗಳ**=ಬೊಗಸೆಗಣ್ಣಿನವಳಾದ.

**ಬಂಡಣ**=ಯುದ್ಧ.

೯ **ಬಟ್ಟೆಬಡಕ**=ಸ್ಥಿರವಾದ ನೆಲೆಯಿಲ್ಲದವ.

೧೦ **ಬೆಡಗು**=ಆಡಂಬರ, ಒಣ ಹೆಮ್ಮೆ.

೧೧ **ಬಿಂಚೆ**=ಚೆಲುವೆ.

೧೨ **ಉಬ್ಬುಕೊಬ್ಬು**=ಉತ್ಸಾಹ ಮತ್ತು ಸೊಕ್ಕು.

೧೩ **ನಿರಿ**=ನಿರಿಗೆ.

೧೯ **ಲೆತ್ತವಾಡಿ ಪತಿಗಳೈವರನ್ನು ಗೆಲಿದಳು** :—

ಇದು ಜಾನಪದ ಕಥೆಯ ಮೂಲದಿಂದ ಬಂದಿರಬಹುದು.

೨೦ **ವಾಸಿ**=ಹಿತಕರ, ಅನುಕೂಲ.

## ೧೦೦ನೆಯ ಹಾಡು

ಪರಮಾತ್ಮನಿಗೆ ಯಾವ ಬಂಧು-ಬಾಂಧವ ಸಂಬಂಧವೂ ಇಲ್ಲವೆಂಬುದನ್ನು ಈ ಹಾಡಿನಲ್ಲಿ ಸೋದಾಹರಣವಾಗಿ ವಿವರಿಸಲಾಗಿದೆ.

೧ **ವಾವೆ**=ಆಪ್ತಸಂಬಂಧ, ಬಾಂಧವ್ಯ.

**ಭಾರ್ಗವ**=ಪರಶುರಾಮ (ಸಂ. ೧ ಪು. ೨೪೮).

**ಒಬ್ಬ ಮಾವನ**=ಕಂಸನನ್ನು.

**ಒಬ್ಬ ಮಾವನನೆಸೆದ** = ರಾಮಾವತಾರದಲ್ಲಿ ಸಮುದ್ರರಾಜನ ಮೇಲೆ ಬಾಣಬಿಟ್ಟ.

**ಒಬ್ಬ ಮಾವನ ಕೂಡ ಕಡಿದಾಡಿದ**= ಜಾಂಬವಂತನ ಕೂಡ ಮುಷ್ಟಿಯುದ್ಧ ಮಾಡಿದ.

**ಒಬ್ಬ ಭಾವನ ಹಿಡಿದು**=ರುಕ್ಮಿಯನ್ನು ಹಿಡಿದು.

**ಒಬ್ಬ ಭಾವಗೆ ಬಂಡಿಬೋವನಾದ**= ಅರ್ಜುನನ ಸಾರಥಿಯಾದ.

೨ **ಕುಂಭಿನಿ**=ಭೂಮಿ (ಶ್ರೀಹರಿಗೆ ಭೂದೇವಿ ಒಬ್ಬಳು ಹೆಂಡತಿ).

**ಕುಂಭಿನಿಗೆ ಅಳಿಯನಾದ :—**

ರಾಮಾವತಾರದಲ್ಲಿ ಮದುವೆಯಾದ ಸೀತೆ ಭೂಮಿಯ ಮಗಳು. ಆದ್ದರಿಂದ ಭೂಮಿಯ ಅಳಿಯನಾದ.

**ಕುಂಭಿನೀಪತಿಯ ಸಂಹರ ಮಾಡಿದ** = ಪರಶುರಾಮಾವತಾರದಲ್ಲಿ ಕಾರ್ತವೀರ್ಯನನ್ನು ಕೊಂದ.

**ಅಂಬುಧಿ**=ಗಂಗಾನದಿ.

**ಅಂಬುಜಾ**=ಲಕ್ಷ್ಮಿ.

**ಅಂಬುಜಾಸನ**=ಬ್ರಹ್ಮ.

೩ **ಮೊಮ್ಮನನು ಮಲಗಿಸಿದ....**ಸಂಹರ ಮಾಡಿದ: ?

## ೧೦೧ನೆಯ ಹಾಡು

ಈ ಹಾಡಿನಲ್ಲಿ ದಾಸರು ಶ್ರೀಹರಿಯನ್ನು ಹಂಗಿಸುವುದರ ಮೂಲಕ ಆತನ ಮಾಹಾತ್ಮ್ಯವನ್ನು ಹೇಳಿದ್ದಾರೆ.

೧ **ಬವಣೆ**=ಕಷ್ಟ.

**ತಲೆಗೆ....ಕಾಯುತಲಿದೆ**=ಕೃಷ್ಣಾವತಾರ.

**ಹಲವು ರತ್ನದ.... ಇಟ್ಟಹೆನೆಂದು:—**

ತಿರುಪತಿಯ ವೆಂಕಟೇಶನ ರತ್ನಖಚಿತ ಕಿರೀಟವನ್ನು ಕಣ್ಣಾರೆಕಂಡ ದಾಸರು ಹೀಗೆ ನುಡಿದಿದ್ದಾರೆ.

೨ **ಒಪ್ಪಿಡಿ ಅವಲಕ್ಕಿ....ಸವಿದೆ:—**

ಸುದಾಮನು ತಂದ ಅವಲಕ್ಕಿಯನ್ನು ಒಳ್ಳೆ ಪ್ರೀತಿಯಿಂದ ತಿಂದೆ.

(ಸಂ. ೧ ಪು. ೨೬೮).

## ೧೦೨ನೆಯ ಹಾಡು

ಶ್ರೀಹರಿಯ ದಯೆಯ ಮೇಲೆ ಸಂಪೂರ್ಣ ಭರವಸೆ ಇಟ್ಟ ದಾಸರು, ತಮ್ಮ ನಿರ್ಭೀತಿಯನ್ನು ಈ ಹಾಡಿನಲ್ಲಿ ಹೊರಹೊಮ್ಮಿಸಿದ್ದಾರೆ.

೧ **ದಾತ**=ಕೊಡುವವ.
**ಬೈಗು**=ಸಂಜೆ.
**ನ್ಯೈಹುಳುಕು ಹರಟೆ**=ದೋಷಪೂರ್ಣ ಹರಟೆ.

೨ **ಪಾಂಸು**=ಧೂಳಿ.

೩ **ಬೊಬ್ಬುಳಿ**=ಗುಳ್ಳೆ.

## ೧೦೩ನೆಯ ಹಾಡು

ಭಗವದ್ಭಕ್ತರು ಶ್ರೀಹರಿಯೊಂದಿಗೆ ಆಡಿದ ಸಲುಗೆಯಾಟಗಳನ್ನು ದಾಸರು ವಿವರಿಸುತ್ತ,ಪರ್ಯಾಯವಾಗಿ ಅಂಥ ಸದ್ಭಕ್ತರ ನಿಷ್ಠೆ ತಮ್ಮಲ್ಲಿಲ್ಲವಲ್ಲ— ಎಂಬುದನ್ನು ಈ ಸುಳಾದಿಯಲ್ಲಿ ಪ್ರಕಟಿಸಿದ್ದಾರೆ.

೧ **ಗೋಪಿದೇವಿ**=ಯಶೋದಾ.
**ಒರಳಿಗೆ ಕಟ್ಟಿದೆ**=(ಭಾಗ. ೧೦-೯-೧೪).
**ಭೃಗುಮುನಿ**=(ಸಂ. ೨ ಪು. ೧೭೬).
**ಭೀಷ್ಮ**=(ಸಂ. ೨ ಪು. ೨೧೮).
**ಕೊಂಕಣದ ಎಮ್ಮೆಗೆ ಕೊಡತಿಯ ಮದ್ದು**=(ನಾಣ್ಣುಡಿ).

ಕೊಂಕಣದಲ್ಲಿಯ ಎಮ್ಮೆಗಳನ್ನು ಹಿಂಡಬೇಕಾದರೆ, ಒಬ್ಬನು ಅದರ ಮುಂದೆ ಬಡಿಗೆ ಹಿಡಿದುಕೊಂಡು ನಿಲ್ಲಬೇಕಾಗುತ್ತದೆ.

೨ **ಕಾಳಿಂಗ**=(ಸಂ. ೧ ಪು. ೨೫೦).
**ಬಲಿ**=(ಸಂ. ೧ ಪು. ೨೬೨).
**ಕುಬುಜೆ**=(ಸಂ. ೧ ಪು. ೨೭೯).
**ರಟ್ಟುಭೂತವ ಮಾಡಿ**=ಪೀಕಲಾಟಕ್ಕೆ ಸಿಕ್ಕಿಸಿ.
**ಗುಂಜಿಹಾಕಲುಬೇಕು**=ಗುಂಜಿಮಾಲೆ ಹಾಕಬೇಕು.
(ಇದು ಭಾಗವತದಲ್ಲಿಲ್ಲ).

**ಮುಂಜೆರಗ ಪಿಡಿದು**=(ಭಾಗ ೧೦-೪೨-೯).

೩ **ಪಾಂಡುತನಯ**=ಧರ್ಮರಾಯ.

**ಅಟ್ಟುವಮಣಿ ಅರಿವಮಣಿ ಇಕ್ಕು**=ಎಡೆಬಿಡದೆ ಕೆಲಸಕ್ಕೆ ಹಚ್ಚು.

**ವಾಘಿಸು**=ಕಡಿವಾಣದಿಂದ ನಿಯಂತ್ರಿಸು.

೪ **ವಾಲಿ**=(ಸಂ. ೨ ಪು. ೨೨೩).

**ಮೂದಲಿಸು**=ಹಂಗಿಸು.

**ಅಟ್ಟು, ಇಟ್ಟು, ಸುಟ್ಟು, ಕೊಟ್ಟು, ಮುಟ್ಟು**=ಅಡಿಗೆ-ಮಾಡಿ, ನೈವೇದ್ಯಮಾಡಿ, ವೈಶ್ವದೇವಮಾಡಿ, ದಾನಮಾಡಿ, ಪಾದಮುಟ್ಟಿ.

೫ **ಇಂದ್ರ**=(ಸಂ. ೧ ಪು. ೨೮೯).

**ಗೋವರ್ಧನಗಿರಿ....ಹೊರಿಸಬೇಕು**=(ಸಂ. ೧ ಪು. ೨೮೯).

## ೧೦೪ನೆಯ ಹಾಡು

ದಾಸರು ಉಮ್ಮತ್ತೂರ ಚೆನ್ನಕೇಶವನನ್ನು ಕಂಡು ಈ ಸುಳಾದಿಯನ್ನು ರಚಿಸಿ-ದಂತಿದೆ.

೧ **ಉಮ್ಮತ್ತೂರು** :—

ಗುಂತಕಲ್ಲು, ರೇಣಿಗುಂಡಾ ರೈಲ್ವೆದಾರಿಯ ಮೇಲಿರುವ ಕೊಂಡಾಪುರಮ್ ರೈಲ್ವೆಸ್ಟೇಷನಿಂದ ೧೨ ಮೈಲಾಗುತ್ತದೆ.

೨ **ದಾಮ-ಸುದಾಮ**=ಕಂಸನ ಮಾಲೆಗಾರರು.

**ಕಾಕುಪ್ರೋಕಿನ**=ಹುಡುಗಾಟಿಕೆಯ.

೩ **ಸುಳಿದರೆ ಸುಂಕವ ಕೊಂಬ ಪುಂಡಗಾರ**.—

ಗೋಪಿಕಾಸ್ತ್ರೀಯರು ಕೃಷ್ಣನ ಬೆಸೆಯಿಂದ ಹೇಳಿದ ಮಾತು.

೪ **ನೌರಿ**=(ನೌಬತ್) ಬಜಂತ್ರಿಯಂತಹ ವಾದ್ಯ.

೫ **ಬಲ್ಲಿದರಿಗೆ ಬಟ್ಟೆ ಸಸಾರವೆಂಬಂತೆ**:—

(ಪಾಠ ೨) ಬಲ್ಲಿದರಿಗೆ [illegible] ತೋರು-ತ್ತದೆ.

## ೧೦೫ನೆಯ ಹಾಡು

ಪುರಾತನ ಭಕ್ತರನ್ನು ಪರಮಾತ್ಮನು ಸಂರಕ್ಷಿಸಿದುದನ್ನು ಮತ್ತೆಮತ್ತೆ ನೆನಪಿಗೆ ತಂದುಕೊಂಡು, ದಾಸರು ಅಂತಹ ಭಕ್ತವತ್ಸಲನನ್ನು ಅನವರತವೂ ಪಾಡುವೆನೆಂದು ಸಂಕಲ್ಪ ಮಾಡಿದ್ದಾರೆ.

೧ **ಅನವರತ**=ಯಾವಾಗಲೂ.
**ಪರೀಕ್ಷಿತ**=(ಸಂ. ೧ ಪು. ೧೯೯).
**ನಾರದ**=(ಸಂ. ೧ ಪು. ೨೫೭).
**ಪ್ರಹ್ಲಾದ**=(ಸಂ. ೧ ಪು. ೨೬೨).
೨ **ಶಿಲೆಯು ಬಾಲೆಯು ಮಾಡಿದ ಪಾದ**=ಅಹಲ್ಯೆ (ಸಂ. ೧ ಪು. ೨೬೮)
**ನಳಿನಸಂಭವ**=ಬ್ರಹ್ಮ.
೩ **ದ್ರುಪದನ ಸುತೆ**=ದ್ರೌಪದಿ (ಸಂ. ೧ ಪು. ೨೧೫).
**ಧರ್ಮ**=ಧರ್ಮರಾಯ.
**ವಿದುರ**=(ಸಂ. ೧ ಪು. ೨೭೩).
**ಗಜ**=ಗಜೇಂದ್ರ. (ಸಂ. ೧ ಪು. ೨೫೨).
೪ **ಬಲಿ**=(ಸಂ. ೧ ಪು. ೨೬೨).
**ಧ್ರುವ**=(ಸಂ. ೧ ಪು. ೨೬೧).
೫ **ಸಾಗರನ ಮಗಳು**=ರಮಾದೇವಿ.
**ಹನುಮಂತ**=(ಸಂ. ೧ ಪು. ೨೧೯).

## ೧೦೬ನೆಯ ಹಾಡು

ದಾಸರು ಬೇಲೂರ ಚೆನ್ನಕೇಶವನನ್ನು ಕಂಡು ಸ್ತೋತ್ರಮಾಡಿದ ಹಾಡು.

೧ **ನಿಗಮ**=ವೇದ.
೩ **ಪೋಷ**=ಪೋಷಕ, ಆಶ್ರಯ.
೪ **ಹಂಸವಾಹನ**=ಬ್ರಹ್ಮ.
೫ **ವೇಲಾಪುರ**=ಬೇಲೂರು (ಹಾಸನ ಜಿಲ್ಲೆ) (ಸಂ. ೧ ಪು. ೨೩೬).

# ೧೧ ದಶಾವತಾರಮಾಹಾತ್ಮ್ಯ

## ೧೦೭ನೆಯ ಹಾಡು

ಈ ಹಾಡಿನಲ್ಲಿ ದಾಸರು ತಾಯಿಯಾಗಿ ಶ್ರೀಹರಿಯನ್ನು ಮಗುವೆಂದು ಭಾವಿಸಿ, ದಶಾವತಾರದಲ್ಲಿಯ ಒಂದೊಂದು ಅವತಾರದ ವೈಲಕ್ಷಣ್ಯಗಳನ್ನು ತಿಳಿಸಿ, ಅವು ಮಗುವಿಗಾದ ರೋಗವಿಕೃತಿಯೆಂದು ಹೇಳಿ, ಅದಕ್ಕೆ ಉಪಾಯವನ್ನು ಹೇಳಿದ್ದಾರೆ.

೧ **ಆಗಮ**=ರಹಸ್ಯ.
**ತೂಗಿ....ಮುಚ್ಚಲೊಲ್ಲನು**=ಮತ್ಸ್ಯಾವತಾರ.
**ಬೆನ್ನ....ಕಲ್ಲಾಗಿದೆ**=ಕೂರ್ಮಾವತಾರ.
**ದಾಡಿಯಿಂದ....ಇಳಿಯುತಿದೆ**=ವರಾಹಾವತಾರ.
**ಕೂಗುವ....ಕುಂದಲಿಲ್ಲ**=ನರಸಿಂಹಾವತಾರ.
೨ **ಖಂಡಸಕ್ಕರೆ**=ಕಲ್ಲುಸಕ್ಕರೆ.
**ಖಂಡ....ಬೇಡಿ**=ವಾಮನಾವತಾರ.
**ಪಿಡಿಯೆ ಕೊಡಲಿ**=ಪರಶುರಾಮಾವತಾರ.
**ಮುಂಡೆ....ಮಾಡಲಿನ್ನೇನಿದಕೆ**=ರಾಮಾವತಾರ.
**ಹಿಂಡು ಸತಿಯರ....ಘನವಾಯಿತೇನೊ**=ಕೃಷ್ಣಾವತಾರ.
೩ **ಮೊಲೆ....ನೊದೆಯುತಿದೆ**=ಬೌದ್ಧಾವತಾರ.
**ಕಲಿಕತನದಲಿ....ಕೊಲುವುದೇಕೊ**=ಕಲ್ಕ್ಯವತಾರ.

## ೧೦೮ನೆಯ ಹಾಡು

ಈ ಹಾಡಿನಲ್ಲಿ ಅಂಬೆಗಾಲಿಕ್ಕುವ ಬಾಲಕೃಷ್ಣನ ದಶಾವತಾರಗಳನ್ನು ಬಣ್ಣಿಸಲಾಗಿದೆ.

೧ **ಜಲಚರ**=ಮತ್ಸ್ಯಾವತಾರ.
**ಜಲವಾಸ**=ಕೂರ್ಮಾವತಾರ.
**ಧರಣೀಧರ**=ವರಾಹಾವತಾರ
**ಮೃಗರೂಪ**=ನರಸಿಂಹಾವತಾರ.

**ನೆಲನಳೆದು....ಬಂದ**=ವಾಮನಾವತಾರ.
**ಕುಲನಾಶ**=ಪರಶುರಾಮಾವತಾರ.
**ವನವಾಸ**=ರಾಮಾವತಾರ.
**ನವನೀತಚೋರ**=ಕೃಷ್ಣಾವತಾರ.
**ಲಲನೆಯರ ವ್ರತಭಂಗ**=ಬೌದ್ಧಾವತಾರ.
**ವಾಹನತುರಂಗ**=ಕಲ್ಕ್ಯವತಾರ.
೨ **ಕಣ್ಣಬಿಡುವನು**=ಮತ್ಸ್ಯಾವತಾರ.
**ಮುಖ ತಗ್ಗಿಸಿ**=ಕೂರ್ಮಾವತಾರ.
**ನೆಲನಗೆದು**=ವರಾಹಾವತಾರ.
**ಅಣಕಿಸುವ ಬಾಯ್ದೆರೆದು**=ನರಸಿಂಹಾವತಾರ.
**ಬಾಲತನದಿ**=ವಾಮನಾವತಾರ.
**ಪ್ರಾಣಘಾತಕನು**=ಪರಶುರಾಮಾವತಾರ.
**ಉಣಲೊಲ್ಲ**=ರಾಮಾವತಾರ (ಗಡ್ಡೆ-ಗೆಣಸು ತಿಂದು ವನವಾಸ ಮಾಡಿದನು).
**ಬೆಣ್ಣೆ ಮೆಲುವ**=ಕೃಷ್ಣಾವತಾರ.
**ಮಾನವ ಬಿಟ್ಟು**=ಬೌದ್ಧಾವತಾರ.
**ಕುದುರೆಯನೇರಿ ಮೆರೆವ**=ಕಲ್ಕ್ಯವತಾರ.
೩ **ನೀರ ಪೊಕ್ಕನು**=ಮತ್ಸ್ಯಾವತಾರ.
**ಗಿರಿಯನೆಗಹಿ**=ಕೂರ್ಮಾವತಾರ.
**ಧಾರಿಣಿ ತಂದ**=ವರಾಹಾವತಾರ.
**ನರಮೃಗ**=ನರಸಿಂಹಾವತಾರ.
**ಬಲಿಬಂಧ**=ವಾಮನಾವತಾರ.
**ಕೊರಳಗೊಯ್ಕ**=ಪರಶುರಾಮಾವತಾರ.
**ಶರಮುರಿದು**=ರಾಮಾವತಾರ.
**ಒರಳೆಳೆದು**=ಕೃಷ್ಣಾವತಾರ.
**ಬತ್ತಲೆ**=ಬೌದ್ಧಾವತಾರ.
**ಹಯವನೇರಿ**=ಕಲ್ಕ್ಯವತಾರ.

## ೧೦೯ನೆಯ ಹಾಡು

ಶ್ರೀಕೃಷ್ಣನ ಬಾಲಲೀಲೆಯ ತುಂಟಾಟಗಳನ್ನು ದಶಾವತಾರಗಳೊಂದಿಗೆ ಹೊಂದಿಸಿ ದಾಸರು ಹಾಡಿದ ಹಾಡು.

೧ **ಕಂಡ....ಕಣ್ಣ ಹಾಕುತಾನೆ**=ಮತ್ಸ್ಯಾವತಾರ.
**ಉಂಡು ...ಮಲಗಿಕೊಳ್ಳುತಾನೆ**=ಕೂರ್ಮಾವತಾರ.
**ಲಂಡತನ....ಮಣ್ಣ ಗೋರುತಾನೆ**=ವರಾಹಾವತಾರ.
**ಬಂಡುಮಾಡಿ.... ಚೀರಿಕೊಳ್ಳುತಾನೆ**=ನರಸಿಂಹಾವತಾರ.
೨ **ಕರುಣವಿಲ್ಲ ...ಒದೆಯುತಾನೆ**=ವಾಮನಾವತಾರ.
**ಶರಣ....ಮಸೆಯುತಾನೆ**=ಪರಶುರಾಮಾವತಾರ.
**ಹರಿಯುವ....ಹಾರಾಡುತಾನೆ**=ರಾಮಾವತಾರ.
**ಶ್ರೀಕೃಷ್ಣ ....ಸೂರೆಮಾಡುತಾನೆ**=ಕೃಷ್ಣಾವತಾರ.
೩ **ಬಾಲೆಯರಿಗೆ....ಕೆಡಿಸುತಾನೆ**=ಬೌದ್ಧಾವತಾರ.
**ನೀಲಗುದುರೆಯ...ಹಾರಿಸಾಡುತಾನೆ**=ಕಲ್ಕ್ಯವತಾರ.

## ೧೧೦ನೆಯ ಹಾಡು

ಶ್ರೀಕೃಷ್ಣನು ಎಳೆಯತನದಲ್ಲಿ ಕುಳಿತುಕೊಳ್ಳಲು ಕಲಿತ ಸಂಗತಿಯನ್ನು ದಾಸರು ತಾಯಿಯ ಭಾವದ ಕೌತುಕದಿಂದ ಕೃಷ್ಣನನ್ನು ಕುರಿತು ಈ ಮಾತು-ಗಳನ್ನು ಹೇಳಿದ್ದಾರೆ.

೧ **ಜಲಚರ**=ಮತ್ಸ್ಯ.
**ನಿಗಮ**=ವೇದ.
**ಕುಲಗಿರಿ** ಮಂದರಾದ್ರಿ.
(ಮಹೇಂದ್ರೋ ಮಲಯಃ ಸಹ್ಯಃ । ಶುಕ್ತಿಮಾನ್ ಋಕ್ಷಪರ್ವತಃ ॥
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ॥ )
೨ **ತೊಡೆ**=ಧರಿಸಲು.
**ಲಂಕೆ**=ಸಿಂಹಳದ್ವೀಪ.
**ಉಪನಿಷದ್ವಾಹನ**=ಉಪನಿಷತ್ತುಗಳ ಮುಖಾಂತರ ಜನರಲ್ಲಿ ತತ್ತ್ವಜ್ಞಾನವನ್ನು ಬೀರಿದವ.

## ೧೧೧ನೆಯ ಹಾಡು

ದಾಸರು ಶ್ರೀಹರಿಯ ದಶಾವತಾರದ ವೈಲಕ್ಷಣ್ಯಗಳನ್ನು ವಿಡಂಬನೆಮಾಡುತ್ತ ಇಂತಹ ವಿಲಕ್ಷಣಪುರುಷನಿಗೆ ಸಾಗರರಾಜನು ಹೇಗೆ ಹೆಣ್ಣುಕೊಟ್ಟನೊ ಎಂದು ವಿಸ್ಮಯಪಟ್ಟಿದ್ದಾರೆ.

೧ **ಸಾಗರ**=ಕ್ಷೀರಸಮುದ್ರ.
**ಮಗಳು**=ಮಹಾಲಕ್ಷ್ಮಿ.
**ಗುಷ್ಟನಾರುವುದ....ಸತತ**=ಮತ್ಸ್ಯಾವತಾರ.
**ಗುಷ್ಟ**=ಕೆಟ್ಟ, ಕೊಳಕು.
**ಮುಟ್ಟ....ಕಠಿಣವು**=ಕೂರ್ಮಾವತಾರ.
**ಎಷ್ಟುದ್ದ....ನೊಗದವನಿವನು**=ವರಾಹಾವತಾರ.
**ಇಷ್ಟು ಘೋರದ....ದೊರಕಿದನೊ**=ನರಸಿಂಹಾವತಾರ.
೨ **ಬೇಡುವನು ಭಿಕ್ಷವನು**=ವಾಮನಾವತಾರ.
**ಮಾಡದುದ ಮಾಡುವನು**=ಪರಶುರಾಮಾವತಾರ.
(ಮಾತೃಹತ್ಯಾಕಾರಿ).
**ನೋಡಿದರೆ....ಇಹನು**=ರಾಮಾವತಾರ.
**ಊಡಿಸುವ ಪಶುಗಳನು**=ಕೃಷ್ಣಾವತಾರ.
**ಈಡಾಡುವನು ವಸನ**=ಬೌದ್ಧಾವತಾರ.
೩ **ಹಿಂಡು....ಬಹ**=ಕಲ್ಕ್ಯವತಾರ.

## ೧೧೨ನೆಯ ಹಾಡು

ಶ್ರೀಕೃಷ್ಣನಿಗಾಗಿ ಮಂಕುಬಟ್ಟು ತಿರುಗುವ ಒಬ್ಬ ಗೋಪವಧುವಿಗೆ ಇನ್ನೊಬ್ಬ ಗೋಪಾಂಗನೆ ಅವನ ಗುಣಗಳನ್ನು ದಶಾವತಾರದ ವೈಲಕ್ಷಣ್ಯಗಳಿಂದ ಕೂಡಿಸಿ ಈ ಹಾಡಿನಲ್ಲಿ ಹೇಳುತ್ತಾಳೆ.

೧ **ಜಲವಾಸಿ**=ಮತ್ಸ್ಯ.
**ಮುಖ ಒಳಸೆಳೆವ**=ಕೂರ್ಮ.
**ಕಾಲುಗೆದರಿ**=ವರಾಹ.

ಕಂಬದಿ ಬಾಯು ತೆಗೆವ=ನರಸಿಂಹ.
ನೆಲವನಳೆದ=ವಾಮನ.
ಕೊರಳಗೊಯ್ಕ=ಪರಶುರಾಮ.
ವನವಾಸಿ=ರಾಮ.
ಕೊಳಲ ಪಿಡಿದು....ಅಳಿದಾತಗೆ=ಕೃಷ್ಣ.

೨ ಮಧುರೆ=(ಸಂ. ೧ ಪು. ೨೪೪).
ಪೂತನಿ=(ಸಂ. ೧ ಪು. ೨೭೫).
ಕಂಸ=(ಸಂ. ೧ ಪು. ೨೫೧).

೩ ನಿರ್ವಾಣಿ = ನಿರ್ವಾಣಸುಖವನ್ನನುಭವಿಸುವವ, ನಿತ್ಯಮುಕ್ತ, ಬೌದ್ಧಾವತಾರ.
ತೇಜಿ=ಖಡ್ಗಪಾಣಿ; ಕಲ್ಕ್ಯವತಾರ.
ಪಾರ್ಥ=ಅರ್ಜುನ.
(ಕುಂತಿಗೆ ಪೃಥೆಯೆಂಬ ಬೇರೆ ಹೆಸರಿದೆ).

## ೧೧೩ನೆಯ ಹಾಡು

ಈ ಹಾಡಿನಲ್ಲಿಯೂ ದಾಸರು ವಿಡಂಬನೆಯ ಶೈಲಿಯಲ್ಲಿ ದಶಾವತಾರವನ್ನು ಬಣ್ಣಿಸಿದ್ದಾರೆ.

೧ ಕಾಡಿ....ಸೇರಿಕೊಂಡೆ ಬೇಗ=ಮತ್ಸ್ಯವತಾರ.
ಹೇಡಿಯು....ತೋರದೆ=ಕೂರ್ಮಾವತಾರ.
ಓಡಿ....ಮೃಗಗಳ ಸೇರಿದೆ=ವರಾಹಾವತಾರ.

೨ ಬಡವರ....ತೆರೆದಂಜಿಸಿದೆ=ನರಸಿಂಹಾವತಾರ.
ತಡೆಯದೆ....ಬಿಡರೆಂದು=ವಾಮನಾವತಾರ.
ಕೊಡಲಿಯ ಪಿಡಿದು=ಪರಶುರಾಮಾವತಾರ.
ಕೋಡಗಹಿಂಡು ಕಾಯ್ದೆ=ರಾಮಾವತಾರ.

೩ ಉತ್ತಮ....ಚೋರನಾದೆ=ಕೃಷ್ಣಾವತಾರ.
ಬತ್ತಲೆ ನಿಂತು=ಬೌದ್ಧಾವತಾರ.
ತೇಜಿಯನೇರಿದೆ=ಕಲ್ಕ್ಯವತಾರ.

## ೧೧೪ನೆಯ ಹಾಡು

ಈ ಹಾಡಿನಲ್ಲಿ ದಶಾವತಾರದ ವೈಲಕ್ಷಣ್ಯಗಳ ವಿಡಂಬನೆಯನ್ನು ಮತ್ತೊಂದು ರೀತಿಯಲ್ಲಿ ಕಾಣಬಹುದು.

೧ **ಚಂಚಲ**=ಮತ್ಸ್ಯಾವತಾರ.
**ಕಠಿಣ**=ಕೂರ್ಮಾವತಾರ.
**ಮೌನದಿಂದ... ಓರೆಮಾಡುವ**=ವರಾಹಾವತಾರ.
**ಕರುಳಹರಕ**=ನರಸಿಂಹಾವತಾರ.
**ತಿರಿದುತಿಂಬುವ**=ವಾಮನಾವತಾರ.
**ಕೊರಳಗೊಯ್ಕ**=ಪರಶುರಾಮಾವತಾರ.
**ಅರಣ್ಯ ತಿರುಗುವ**=ರಾಮಾವತಾರ.
**ಮೊಸರು ತಿಂಬುವ**=ಕೃಷ್ಣಾವತಾರ.
೨ **ವಾಸಶೂನ್ಯ**=ಬೌದ್ಧಾವತಾರ (ದಿಗಂಬರ).
**ಕತ್ತಿ ಬೀಸಿ ಸವರುವ**=ಕಲ್ಕ್ಯವತಾರ.
**ಕಾಸು**=ನಾಣ್ಯ.
**ವೀಸ**=ಚಿಕ್ಕನಾಣ್ಯ.
**ಮೀಸಲಮಾಡಿಟ್ಟ**=ಸಂಗ್ರಹಮಾಡಿರಿಸಿದ.
**ಕೇಸಕ್ಕಿ**=ಕೆಂಪಾದ ಅಕ್ಕಿ.

ವಿ. ಸೂ:—ಈ ನುಡಿ ತಿರುಪತಿ ವೆಂಕಟೇಶನಿಗೆ ಅನ್ವಯಿಸುತ್ತದೆ.

**ಕೊಡನ**=ಕೊಡದವನ.
**ಮೋರೆನೋಡಿ ಭಿಡೆಯ ಹಿಡಿಯದವ**= ಎಲ್ಲರನ್ನೂ ಸಮನಾಗಿ ನೋಡುವವ.

## ೧೧೫ನೆಯ ಹಾಡು

ಶ್ರೀಕೃಷ್ಣನೇ ದಶಾವತಾರವನ್ನು ಧರಿಸಿದ ಶ್ರೀಹರಿಯೆಂಬ ಮಾತನ್ನು ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

೧. **ಮಂದರಧರ**=ಕೂರ್ಮಾವತಾರ.

ಮಂದಾಕಿನಿಯು ಪಿತ=ಭಾಗೀರಥಿಯ ತಂದೆ. (ಗಂಗಾಜನಕ).
ಹೃತ=ಕೊಂದವ.
ಕಣ್ಣನೋಟದಿ ಚೆಲುವ=ಮತ್ಸ್ಯಾವತಾರ.
ಕಮಠರೂಪದಿ ನಲಿವ=ಕೂರ್ಮಾವತಾರ.
ಹೆಣ್ಣವೊರೆಯ ಕೇಳಿ=ವರಾಹಾವತಾರ.
ಹಿರಣ್ಯನುದರ ಸೀಳಿ=ನರಸಿಂಹಾವತಾರ.
ಮಣ್ಣುಬೇಡಿ ಬೆಳೆದ=ವಾಮನಾವತಾರ.
ಹೊನ್ನಕೊಡಲಿಯ ಪಿಡಿದು=ಪರಶುರಾಮಾವತಾರ.
ಹತ್ತುಗ್ರೀವನ ಕಡಿದು=(ದಶಕಂಠ) ರಾಮಾವತಾರ.
ಚಿನ್ನರ ಒಡಗೂಡಿ=ಕೃಷ್ಣಾವತಾರ.
ಚಪಲೆಯರ ವ್ರತಗೆಡಿಸಿ=ಬೌದ್ಧಾವತಾರ.
ಚೆನ್ನರಾವುತನಾದೆಯೊ=ಕಲ್ಕ್ಯವತಾರ.

೨ ಗೋ=ನೀರು.
ಗೋಚರನಂದದಿ=ಮತ್ಸ್ಯಾವತಾರ.
ಗಿರಿಯ ತಾಳಿದೆ ಬೆನ್ನಿನಲಿ=ಕೂರ್ಮಾವತಾರ.
ಭೂಚೋರನನು ಕೊಂದು=ವರಾಹಾವತಾರ.
ಬಾಲ ಕರೆಯಲು ಬಂದು=ನರಸಿಂಹಾವತಾರ.
ಯಾಚಕ=ವಾಮನಾವತಾರ.
ಸೂಚಕನ ಸುತಗೊಲಿದು=ಪರಶುರಾಮಾವತಾರ.
(ಸೂಚಕನ ಸುತ—ಸೂತಪುತ್ರ=ಕರ್ಣ)
ಶರಧಿಯ....ಮೆರೆದೆ=ರಾಮಾವತಾರ.
ಕೀಚಕಹತಪೋಷ=ಕೃಷ್ಣಾವತಾರ.
ಖೇಚರಪುರವಾಸ=ಬೌದ್ಧಾವತಾರ.
(ವಾಸ ಇದರ ಬದಲು ವಾಸಿಸಿದ್ದರೆ ಚೆನ್ನಾಗಿತ್ತು).
ನೀಚಜನರ ತರಿದೆ=ಕಲ್ಕ್ಯವತಾರ.

೩ ವನವನಲೆದುಬಂದ=ಮತ್ಸ್ಯ-ಕೂರ್ಮಾವತಾರ.
ವನ=ನೀರು.

**ವನಿತೆರತ್ನವ ತಂದ**=ವರಾಹಾವತಾರ.
**ಘನಕಂಭದಿಂದ ಬಂದು**=ನರಸಿಂಹಾವತಾರ.
**ಗರುವ ಮುರಿದು ಬಲಿಯ**=ವಾಮನಾವತಾರ.
**ಜನನಿಯ ಶಿರವರಿದೆ**=ಪರಶುರಾಮಾವತಾರ.
**ಹನುಮವಂದಿತ ಪಾದ**=ರಾಮಾವತಾರ.
**ಹರುಷಪಾಂಡವವರದ**=ಕೃಷ್ಣಾವತಾರ.
**ಮನಸಿಜವೈರಿ**=ಶಿವ.
**ವೈರಿಗೆ ಒಲಿದು :—**

ತ್ರಿಪುರಾಸುರರ ಯುದ್ಧಕಾಲದಲ್ಲಿ ಶಿವನಮೇಲೆ ಪ್ರಸನ್ನನಾಗಿ, ಬೌದ್ಧಾವತಾರ ತಾಳಿದ.

**ಮಹಾಕಲ್ಕಿ**=ಕಲ್ಕ್ಯವತಾರ.

## ೧೧೬ನೆಯ ಹಾಡು

ಈ ಹಾಡಿನಲ್ಲಿ ದಾಸರು ಶ್ರೀಹರಿಯನ್ನು ದಶಾವತಾರಗಳ ಲೀಲೆಗಳೊಂದಿಗೆ ಬಣ್ಣಿಸಿ ಪ್ರಾರ್ಥಿಸಿದ್ದಾರೆ.

೧ **ವಿರಿಂಚಿ**=ಬ್ರಹ್ಮ.
**ಮರುತ್**=ವಾಯುದೇವರು.
**ಸುಪರ್ಣ**=ಗರುಡ.
**ಪುರಾರಿ**=ಶಂಕರ.
**ಪರಾಶರ**=(ಸಂ. ೨ ಪು. ೨೨೩).
**ಮುಖ**=ಪ್ರಮುಖ.
**ನಾರುವೆ**=ಮತ್ಸ್ಯಾವತಾರ.
**ಭಾರವ ಪೊರುವೆ**=ಕೂರ್ಮಾವತಾರ.
**ಬೇರು....ಮೆಲುವೆ**=ವರಾಹಾವತಾರ.
**ಕರಿವೈರಿರೂಪಗೊಂಡ**=ನರಸಿಂಹಾವತಾರ.
**ಬ್ರಹ್ಮಚಾರಿ**=ವಾಮನಾವತಾರ.

**ಖಳರ ಕತ್ತರಿಸುವಿ**=ಪರಶುರಾಮಾವತಾರ.

**ದಶರಥಸುತ**=ರಾಮಾವತಾರ.

**ಜಾರತನದಲಿ**=ಕೃಷ್ಣಾವತಾರ.

**ವ್ರತವ ಕೆಡಿಸುತ**=ಬೌದ್ಧಾವತಾರ.

**ಬಲು ಗಂಭೀರ....ಮೆರೆವನೆ**=ಕಲ್ಕ್ಯವತಾರ.

೨ **ಅನಿಮಿಷ**=ಮತ್ಸ್ಯಾವತಾರ (ಕಣ್ಣುರೆಪ್ಪೆ ಬಡೆಯದ).

**ಮಂದರೋದ್ಧರಣ**=ಕೂರ್ಮಾವತಾರ.

**ವನಗ**=ವರಾಹಾವತಾರ.

**ಪಂಚಾನನವದನ**=ನರಸಿಂಹಾವತಾರ.

**ಪಂಚಾನನ**=ಸಿಂಹ.

**ದಾನವರ ಕೊಯ್ವ ಕದನ**=ಪರಶುರಾಮಾವತಾರ.

**ದನುಜ ರಾವಣಸಂಹರಣ**=ರಾಮಾವತಾರ.

**ಧೇನುಕಾಸುರ :—**

ಒಬ್ಬ ರಾಕ್ಷಸ. ವೃಂದಾವನದ ಸಮೀಪದಲ್ಲಿದ್ದ ತಾಳೆಯುವನದಲ್ಲಿ ವಾಸಮಾಡುತ್ತಿದ್ದು, ಅಲ್ಲಿಗೆ ಬಂದು ಹಣ್ಣು ಹರಿದವರನ್ನೆಲ್ಲ ಕೊಂದುಬಿಡುತ್ತಿದ್ದ. ಒಂದುದಿನ ಬಲರಾಮನು ಗೋಪಾಲರನ್ನು ಕೂಡಿಕೊಂಡು ಈ ವನಕ್ಕೆ ಹೋಗಿ ಹಣ್ಣುತಿನ್ನುವ ಆಶೆಯಿಂದ ಅರಿಸಿಕೊಳ್ಳುತ್ತಿರುವಾಗ, ಧೇನುಕ ಭೀಕರವಾದ ಕತ್ತೆಯ ರೂಪದಿಂದ ಬಂದು ಬಲರಾಮನ ಮೇಲೇರಿಹೋಗಿ ಅವನಿಂದ ಮರಣಪಡೆದನು. (ಭಾಗ. ೧೦–೧೫).

**ಶಕಟ**=(ಸಂ. ೧ ಪು. ೨೬೫).

**ಧೇನುಕಾಸುರ ಶಕಟಮರ್ದನ**=ಕೃಷ್ಣಾವತಾರ.

**ಜ್ಞಾನದಾನವಿಡಂಬನಾನಕ**=ಜ್ಞಾನದ ನೆವದಿಂದ ಅಜ್ಞಾನವನ್ನು ಸಾರಿದವ (ಆನಕ=ದುಂದುಭಿ).

**ಭಾನುಮಸ್ತಕ**=ಆಕಾಶ.

**ನೀಲ**=ಕಪ್ಪಿನ ನೀಲಿಬಣ್ಣದ ಕುದುರೆ.

**ವರಕರ**=ಶ್ರೇಷ್ಠವಾದ ಖಡ್ಗ.

**ಭಾನುವರಕರ**=ಕಲ್ಕ್ಯವತಾರ.
(ಇದರರ್ಥ ಚೆನ್ನಾಗಿ ಹೊಂದುವುದಿಲ್ಲ.)
**ಸಂತ್ರಾಣ**=ಸಂರಕ್ಷಿಸುವವ.
೩ **ಕಚ್ಛಪ**=ಆವೆ.
**ಕಿರ**=ಹಂದಿ.
**ವತ್ಸಾಸುರ** :—

ಕಂಸನ ಪಕ್ಷದ ಒಬ್ಬ ರಾಕ್ಷಸ. ಇವನು ಕೃಷ್ಣನನ್ನು ನಾಶಮಾಡಬೇಕೆಂದು ಕರುವಾಗಿ ಕರುಗಳ ಹಿಂಡಿನಲ್ಲಿ ಹೊಕ್ಕನು. ಆಗ ಶ್ರೀಕೃಷ್ಣನು ಇದರ ಸುಳಿವನ್ನು ಹಿಡಿದು, ಆ ರಾಕ್ಷಸಕರುವನ್ನು ಹಿಂಗಾಲು ಹಿಡಿದು ಬೆಳುವಲಗಿಡಕ್ಕೆ ಬೀಸಿಹೊಡೆದು ಕೊಂದನು. (ಭಾಗ. ೧೦–೧೧).

**ತುಚ್ಛಜನರಿಗೆ ಕಪಟಕಾರಣ**=ಬೌದ್ಧಾವತಾರ.
**ಅಶ್ವದ ಮೇಲೆ ಹೊಳೆವನೆ**=ಕಲ್ಕ್ಯವತಾರ.
**ಅಚ್ಯುತ**=ಚ್ಯುತಿ ಇಲ್ಲದವ.

# ೧೨ ಸರ್ವೋತ್ತಮಮಾಹಾತ್ಮ್ಯೆ

## ೧೧೭ನೆಯ ಹಾಡು

ಈ ಹಾಡಿನಲ್ಲಿ ದಾಸರು ದೃಢವಿಶ್ವಾಸದಿಂದ ಶ್ರೀಹರಿಯೇ ಸರ್ವೋತ್ತಮನೆಂಬುದನ್ನು ಡಂಗುರಸಾರಿ ಹೇಳಿದ್ದಾರೆ.

೧ **ಮೃಡಸಖ**=ಶಿವನ ಮಿತ್ರ (ಹರಿ).
೨ **ವೇದಗಮ್ಯ**=ವೇದಗಳಿಂದ ಇವನ ನಿಜವಾದ ಜ್ಞಾನವು ದೊರೆಯುವುದು.
**ಆರ್ತಿ**=ಕಷ್ಟ.
೩ **ಶ್ರೀನಿಧಿ**=ಶ್ರೀಹರಿ.
**ಪರ**=ಶ್ರೇಷ್ಠ.

## ೧೧೮(ಅ)ನೆಯ ಹಾಡು

ಈ ಹಾಡಿನಲ್ಲಿ ಶ್ರೀಹರಿಯ ಸರ್ವೋತ್ತಮತ್ವವನ್ನು ವಿವರ-ವಿವರವಾಗಿ ವರ್ಣಿಸಲಾಗಿದೆ.

**೧ ವಿಷ್ಣುಮಯಂ ಜಗತ್**=ವಿಷ್ಣು ಜಗದ್ವ್ಯಾಪಿಯಾಗಿದ್ದಾನೆ.

**ಮುಡಿ**=ಹೆಡೆ.

**ಜಗಂಗಳ ಪುಟ್ಟಿಸುವ ಬೊಮ್ಮ ನಿನ್ನ ಮಗ....ಜಗದ ಸಂಹಾರಕ ನಿನ್ನ ಮೊಮ್ಮಗನು:—**

ಯಸ್ಯಪ್ರಸಾದಜೋ ಬ್ರಹ್ಮಾ ರುದ್ರಶ್ಚಕ್ರೋಧಸಂಭವಃ ॥

(ಭಾ. ತಾ. ನಿ. ೨–೧೧೭) (ಭಾಗ. ೨–೬–೩೦).

**ಜಗದ ಪಾವನೆ ಭಾಗೀರಥಿ ನಿನ್ನ ಮಗಳು**

ಅನಂತಚರಣಾಂಭೋಜ ಪ್ರಸೂತಾಯಾ ಭವಚ್ಛಿದಃ ॥

(ಭಾಗ. ೯–೯–೧೪)

**ಜಗದ ಜೀವನ ಮಾತೆ**=ಲಕ್ಷ್ಮಿ (ಭಾಗ. ೮–೮–೨೫).

**೨ ವಿಶ್ವತೋಮುಖ ನೀನೆ ಇತ್ಯಾದಿ**=ಆ ಬ್ರಹ್ಮನು ಎಲ್ಲಕಡೆಗೂ ಮುಖ ಮುಂತಾದುವುಗಳುಳ್ಳವನಾಗಿದ್ದಾನೆ.

ಸರ್ವತಃ ಪಾಣಿಪಾದಂತತ್ ಸರ್ವತೋಽಕ್ಷಿ ಶಿರೋಮುಖಂ ॥
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯತಿಷ್ಠತಿ ॥

(ಭ. ಗೀ. ೧೩–೧೩).

ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ।

(ಋಗ್ವೇದ ಮಂಡಲ ೧೦).

ವಿಷ್ಣು=ವ್ಯಾಪಕ.

೩ ಆಗಮ=ಉಪಾಸನಾ ತಂತ್ರಗಳಿರುವ ಗ್ರಂಥ.

ಶಾಸ್ತ್ರ=ಷಟ್ ಶಾಸ್ತ್ರಗಳು.

ಭೋಗಿಭೂಷಣ=ಶಿವ.

## ೧೧೮(ಬ)ನೆಯ ಹಾಡು

ಮುಕ್ತ ಜೀವರುಗಳಲ್ಲಿಯೂ ಶ್ರೀಹರಿಗೆ ಸಮಾನರಿಲ್ಲವೆಂಬ ಮಾತನ್ನು ದಾಸರು ಈ ಹಾಡಿನಲ್ಲಿ ತಿಳಿಸಿದ್ದಾರೆ.

೧ **ವಿಧಾತೃ**=ಬ್ರಹ್ಮಮುಂ.
**ಹಿಂದೆ**=ಕಡಮೆ ತರಗತಿ.
**ತಪ್ಪು**=ಸುಳ್ಳಾಗು.
**ಫಣಿಫಣ**=ಹಾವಿನ ಹೆಡೆ.
**ಸಾಲಗ್ರಾಮ**=(ಸಂ. ೨ ಪು. ೧೮೭).
**ಪ್ರಕಟ**=ಪ್ರಸಿದ್ಧವಾದ.
೨ **ಹರಿಯ ದಿನ**=ಏಕಾದಶಿ.
೩ **ಮಜ್ಜನ**=ಸ್ನಾನ.
**ಕರ್ಮ**=ಸಂಧ್ಯಾದಿಕರ್ಮಗಳು.

## ೧೯೯ನೆಯ ಹಾಡು

ಪೌರಾಣಿಕ ಸಂದರ್ಭಗಳ ಆಧಾರದಿಂದ ಶ್ರೀಹರಿಯ ಸರ್ವೋತ್ತಮತ್ವವನ್ನು ದಾಸರು ಇಲ್ಲಿ ಸಿದ್ಧಗೊಳಿಸಿದ್ದಾರೆ.

೧ **ಭಾಗ. ೫ನೆಯ ಸ್ಕಂಧ ೫ನೆಯ ಅಧ್ಯಾಯ ೯–೮೨ ಶ್ಲೋಕಗಳು.**

೨ **ಕಪಿಲದೇವ :—**

ಕರ್ದಮಮುನಿ ಮತ್ತು ಸ್ವಾಯಂಭುವ ಮನುವಿನ ಮಗಳಾದ ದೇವಹೂತಿಯರ ಮಗ. ಇವನು ವಿಷ್ಣುವಿನ ಅವತಾರವೆಂದು ಭಾರತದಲ್ಲಿ ವರ್ಣನೆ ಇದೆ. (ಭಾರತ. ವನ. ೧೦೬–೧೦೭). ಇವನು ಸಾಂಖ್ಯಸೂತ್ರಗಳನ್ನು ಬರೆದನು.

**ದೇವಹೂತಿ**=ಕಪಿಲದೇವನ ತಾಯಿ. (ಭಾಗ. ೩–೨೪).

**ಅರ್ಜುನ ಉದ್ಧವರಿಗೆ :—**

ಅರ್ಜುನನಿಗೆ ಕೃಷ್ಣನು ಭಗವದ್ಗೀತೆಯನ್ನೂ ಉದ್ಧವನಿಗೆ ಉದ್ಧವಗೀತೆಯನ್ನೂ ಹೇಳಿದ ವಿಷಯ ಕ್ರಮವಾಗಿ ಭಾರತ ಮತ್ತು ಭಾಗವತಗಳಲ್ಲಿ ಬರುತ್ತದೆ. (ಭಾರತ. ಭೀಷ್ಮ ಮತ್ತು ಭಾಗ ೩–೩)

೩ **ವೇದೈಶ್ಚ**....ವೇದ್ಯಃ (ಭ. ಗೀ. ೧೫–೧೫).
**ವೇದಾಂತ**=ಉಪನಿಷತ್ತುಗಳು.
**ವೇದವಿಧಾಯಕ**=ವೇದಗಳನ್ನು ರಚಿಸಿದವ.

**ವೇದಾಕ್ಷರಗಳು ಹರಿನಾಮಗಳೆಂದು :**

ವೇದಾಕ್ಷರಾಣಿಸಂತಿಯಾವಂತಿವೇದೇ । ದ್ವಿಜಾದಿಭಿಃ ಪಠಿತಾನೀ
ತಾನಿಸದೈವ ॥ ತಾವಂತಿ ಸರ್ವಾಣಿ ಹರಿಪ್ರಿಯಾಣಿ ।
ತಾನ್ಯೇವನಾಮಾನಿ ಹರೇಶ್ಚನಿತ್ಯಂ ॥
(ಬ್ರಹ್ಮಕಾಂಡ ಗರುಡ ಪು. ಅ. ೨ ಶ್ಲೋ. ೫೭).

೪ **ರಾಜಸ ತಾಮಸ ಪುರಾಣ :—**
ಪುರಾಣಗಳಲ್ಲಿ ಸಾತ್ವಿಕ, ರಾಜಸ, ತಾಮಸವೆಂಬ ಮೂರು ಬಗೆಗಳಿವೆ. ವಿಷ್ಣು ಸರ್ವೋತ್ತಮತ್ತ್ವವನ್ನು ಪ್ರತಿಪಾದಿಸುವ ಪುರಾಣಗಳು ಸಾತ್ವಿಕ ಪುರಾಣಗಳೆಂದು ಪರಂಪರೆ ಇದೆ.

**ಮೋಹಕ**=ಭ್ರಾಂತಿ.
**ವ್ಯಾಸ**=(ಸಂ. ೧ ಪು. ೩೦೩).
೫ **ಪಾಷಂಡ ಮತ**=ನಾಸ್ತಿಕ ಮತ.
**ಮೃಡಪ್ರಿಯ**=ಶ್ರೀಹರಿ. (೧೨೭ ನುಡಿ ೧).

## ೧೨೦ನೆಯ ಹಾಡು

೧ **ಸ್ಥಿರದಿ ಅಜಭವಾದಿಗಳು....ಮಿಕ್ಕ ಸುರರೇನು ಬಲ್ಲರು :—**
ಬ್ರಹ್ಮ, ಶಿವ ಮುಂ. ಶ್ರೀಹರಿಯ ಮಾಹಾತ್ಮ್ಯವನ್ನು ತಿಳಿಯಲಾರರೆಂದ ಮೇಲೆ ಉಳಿದ ಸುರರ ಪಾಡೇನು ?

ಮಾಹಾತ್ಮ್ಯದೇಹ ಸ್ಮೃತಿಮುಕ್ತಿಗತೇ ಶಿವಶ್ಚ ।
ಬ್ರಹ್ಮಾ ಚ ತದ್ಗುಣಗತಾ ನ ಕಥಂಚನೇಶಾ॥ (ಭಾ. ತಾ. ನಿ. ೧–೨೫).

**ಸರಸಿಜಾಕ್ಷಿ ಇಂದಿರಾದೇವಿ....ಅಳವಲ್ಲದಂಥ :—**
ಲಕ್ಷ್ಮೀದೇವಿಯು ಪರಮಾತ್ಮನ ಪಾದದ ಕಿರುಬೆರಳಿನ ಉಗುರನ್ನು ಕೂಡ ತಿಳಿಯಲು ಅಸಮರ್ಥಳು.

ನ ಶ್ರೀಃ ಕುತಸ್ತದಪರೇಽಸ್ಯ ಸುಖಸ್ಯ ಮಾತ್ರಾ ।
ಮುಕ್ತ್ಯತಿ ಮುಕ್ತಸಂಗತಾಶ್ಚ ಕದಾಪರೇಣ ॥ (ಭಾ. ತಾ. ನಿ. ೧–೨೫).
ನ ರಮಾಪಿ ಪದಾಂಗುಲಿಲಸನ್ನಖಪೂಜದನಂತಸದ್ಗುಣಾನ್ ।
ಗಣಯೇನ್ನನು ಮರ್ತ್ಯನಾರಕಂ ಪರಮಾನ್ ಕೋಽಸ್ಯ ಪರೀಂಗುಣಾನ್
ವದೇತ್ ॥ (ಮಧ್ವವಿಜಯ ೭)

**ಶಕಟ**=(ಸಂ. ೧ ಪು. ೨೬೫).

**ಯೋಗ್ಯತೆ ಪರಿಯಲಿ** = ಜೀವರ ಯೋಗ್ಯತೆ ತಾರತಮ್ಯದ ಪ್ರಕಾರ.

## ೧೨೧ನೆಯ ಹಾಡು

೧ **ವಿಶ್ವನೆನಿಸಿ**=ವಿಷ್ಣುವಿಗೆ ವಿಶ್ವನೆಂಬ ಹೆಸರಿದೆ. (ವಿಷ್ಣು ಸಹಸ್ರ ಸ್ತೋತ್ರ).

**ವಿಶ್ವಜಾಗರ**=(ಪ್ರೇರಿಸುವಿ) ವಿಶ್ವದಲ್ಲಿರುವ ಜೀವಗಳನ್ನು ಪ್ರೇರಿಸುವಿ.

ಯಚ್ಚಕ್ಷುಸಿ ಸ್ಥಿತಂ ರೂಪಂ ।
ವಿಷ್ಣೋಶ್ಚಕ್ಷುಸ್ತದುಚ್ಯತೇ ॥
ಶಬ್ದಾದೇರಪ್ಯಾಪರೋಕ್ಷೇ ।
ತದ್ಧೇತುಃ ವಿಶ್ವನಾಮಕಂ ॥
ಜಾಗೃತಾಂ ಸರ್ವಜೀವಾನಾಂ ।
ಸವಿಷ್ಣುಃ ದಕ್ಷಣಾಕ್ಷಿಗಃ ॥
(ಭೃಹದಾರಣ್ಯ ಭಾಷ್ಯ)

**ತೈಜಸ**=ವಿಷ್ಣುವಿನ ಮತ್ತೊಂದು ಹೆಸರು.

**ಸ್ವಾಪನ**=ಕನಸು.

ಚಿತ್ತಸ್ಥಃ ದರ್ಶಯೇತ್ತಸ್ಮಾತ್ ।
ತೈಜಸಃ ಸ್ವಪ್ನಕೃದ್ಧರಿಃ ॥ (ಮಾಂಡೂಕ್ಯ ಭಾಷ್ಯ).

**ಪ್ರಾಜ್ಞನೆನಿಸಿ**= ಪ್ರಾಜ್ಞನೆಂಬುದು ವಿಷ್ಣುವಿನ ಮತ್ತೊಂದು ಹೆಸರು.

ಪ್ರಾಜ್ಞಂ ಸಂವೇದಯೇತ್ ಕಿಂಚಿತ್ ।
ಜೀವಕಾಲತಮೋವಿನಾ ॥
ಸುಪ್ತ್ಯವಸ್ಥಾಂ ಸುಖಂಚಾಪಿ ।
ವಿನಾನ್ಯಾನ್ಯತ್ ಪ್ರದರ್ಶಯೇತ್ ॥ (ಮಾಂಡೂಕ್ಯ ಭಾಷ್ಯ).

**ತುರೀಯನೆನಿಸಿ**=ತುರೀಯನೆಂಬುದು ವಿಷ್ಣುವಿನ ಹೆಸರು.
**ಪರಗತಿ**=ಮೋಕ್ಷ.

ಸರ್ವಜ್ಞಾನ ಪ್ರದಶ್ಚಾಪಿ ಮುಕ್ತಸ್ಯೈವ ತುರೀಯಕಃ ।
ಸರ್ವಂತು ದರ್ಶಯೇತ್ ಮುಕ್ತಾತ್ಮಾ ತುರೀಯಃ ಪರಮೇಶ್ವರಃ ॥
ವಿಷ್ಣುಸ್ತುರ್ಯರೂಪೇಣ ದ್ವಾದಶಾಂಕೇ ವ್ಯವಸ್ಥಿತಃ ॥
(ಮಾಂಡೂಕ್ಯಭಾಷ್ಯ)

**ಆತುಮ ಅಂತರಾತುಮನೆನಿಸಿ**=ವಿಷ್ಣು ಆತ್ಮಾ ಮತ್ತು ಅಂತರಾತ್ಮಾ ಎಂಬ ಹೆಸರಿನಿಂದ

ಆತ್ಮಾಂತರಾತ್ಮೇತಿ ಹರಿಃ ಏಕಏವದ್ವಿಧಾಸ್ಥಿತಃ ।
ನಿವಿಷ್ಟೋಹೃದಯೇನಿತ್ಯ ರಸಂ ಪಿಬತಿಕರ್ಮಜಂ ॥
(ಬೃಹತ್ಸಂಹಿತಾಯಾಂ).

**ಶುಭಸಾರವ ಭೋಗಿಸೆ**=ಸತ್ಕರ್ಮಗಳ ಫಲವನ್ನು ಭೋಗಿಸುತ್ತಿ.

ಶುಭಂ ಪಿಬತ್ಯಸೌನಿತ್ಯಂ ।
ನಾಶುಭಂ ಸ ಹರಿಃ ಪಿಬೇತ್ ॥
ಪೂರ್ಣಾನಂದಮಯಸ್ಯಾಸ್ಯ ।
ಚೇಷ್ಟಾನಜ್ಞಾಯತೇ ಕ್ವಚಿತ್ ॥ (ಪದ್ಮಪುರಾಣ).

**ಅನಿರುದ್ಧನೆನಿಸಿ....ಸೃಜಿಸುವಿ** :—

ಅನಿರುದ್ಧನಾಮಕನಾದ ಭಗವಂತನು ಲಿಂಗದೇಹಾತಿರಿಕ್ತ ಮತ್ತು ದೇಹ-ವಿರಹಿತ ಜೀವಗಳನ್ನು ತನ್ನ ಉದರದಲ್ಲಿಟ್ಟುಕೊಂಡು ಕಾಲಕ್ರಮದಿಂದ ಬ್ರಹ್ಮ ಮುಂತಾದವರನ್ನು ಮತ್ತು ಜೀವಿಗಳನ್ನು ಸೃಷ್ಟಿಸುವನು.

ನಿರ್ದೇಹಕಾನ್ ಸ ಭಗವಾನ್ ಅನಿರುದ್ಧನಾಮ
... .... ....
... ... ...
ಚಕ್ರೇಥ ದೇಹಸಹಿತಾನ್ ...
(ಭಾ. ತಾ. ೩. ೧-೯).

**ಪ್ರದ್ಯುಮ್ನನೆನಿಸಿ....ಪಾಲಿಸುವಿ :—**

ಪ್ರದ್ಯುಮ್ನನಾಮಕನಾದ ಭಗವಂತನು ಲೋಕವನ್ನು ಪಾಲಿಸುತ್ತಾನೆ.

ಸ್ಥಿತ್ಯೈಪುನಃ ಸ ಭಗವಾನನಿರುದ್ಧನಾಮ ।
.... .... ....
.... .... ....
ಪ್ರದ್ಯುಮ್ನರೂಪಕ .... ....

(ಭಾ. ತಾ. ನಿ. ೧–೮).

**ಸಂಕರ್ಷಣನೆನಿಸಿ....ಇಡುವೆ :—**

ಭಗವಂತನು ಸಂಕರ್ಷಣನೆನಿಸಿ ಲೋಕವನ್ನು ಉಪಸಂಹಾರ ಮಾಡಿ ತನ್ನೊಳಗೆ ಇಟ್ಟುಕೊಳ್ಳುತಾನೆ.

**ವಾಸುದೇವನೆನಿಸಿ....ನೀವೆ :—**

ಭಗವಂತನು ವಾಸುದೇವನಾಗಿ ಜೀವರಿಗೆ ಮುಕ್ತಿಯನ್ನು ಕೊಡುವನು.

ಇತ್ಥಂ ವಿಚಿಂತ್ಯಾ ಪರಮಃ ಸತುವಾಸುದೇವಃ ।
.... .... ನಿಜಮುಕ್ತಿಪ್ರದಾತಾ ॥
.... .... ....

(ಭಾ. ತಾ. ನಿ. ೧–೬).

**ಸರ್ವ ವ್ಯಾಪಾರಕೆ ಕಾರಣ ನೀನೆ :—**

ತತ್ರತತ್ರ ಸ್ಥಿತೋವಿಷ್ಣುಃ
ತತ್ತಚ್ಛಕ್ತೀಃ ಪ್ರಬೋಧಯನ್ ॥
ಏಕಏವ ಮಹಾಶಕ್ತಿಃ ।
ಕುರುತೇ ಸರ್ವಮಂಜಸಾ ॥ (ಪದ್ಮಪುರಾಣೇ).

೨ **ಒಂದೊಂದವಯವದೊಳನಂತ ಮಹಿಮೆ** =

( ೧೪೦–೨ ನೋ. )

**ಒಂದೊಂದು ರೋಮಾದಿಗಳಲಿ ಅಜಭವಾದಿ ಕಾರ್ಯ:–**

(೧೪೦–೨ ನೋ.)

೩ **ಉಗುರು....ಒಡೆಯಿತು**=(ನೋ. ಹಾಡು ೪೪ ನುಡಿ ೨ ಟೀಕೆ.)

ತತ್ರಭಗವತಃ ಸಾಕ್ಷಾದ್ಯಜ್ಞಲಿಂಗಸ್ಯ । ವಿಷ್ಣೋರ್ವಿಕ್ರಮತೋವಾಮ
ಪಾದಾಂಗುಷ್ಠ । ನಖನಿರ್ಭಿನ್ನೋರ್ಧ್ವಾಂಡಕವಾಹವಿವರೇಣ ।
ಅಂತಃಪ್ರವಿಷ್ಟಯೊ ಬಾಹ್ಯ ಜಲಧಾರಾ (ಭಾಗ. ೫–೧೭–೧.)

**ಉಂಗುಟವು....ಕೆಡಹಿತು**=(ಭಾ. ಉದ್ಯೋಗ ೧೩೦–೧೩೧)
**ಪಾದಶಕಟನ....ನುಗ್ಗೊತ್ತಿತು**=(ಭಾಗ ೧೦–೭).
(ಸಂ. ೧ ಪು. ೨೬೫).

**ಬಾಹು ಕೇಶಿಯನೆತ್ತಿ ಕೆಡಹಿ ಬಿಸಾಟಿತು:—**

ಕೇಶಿ ಕಂಸ ಪರಿವಾರಕ್ಕೆ ಸೇರಿದ ಒಬ್ಬ ರಾಕ್ಷಸ. ಇವನು ಕುದುರೆರೂಪ ತಾಳಿ ಬಲರಾಮ-ಕೃಷ್ಣರನ್ನೂ, ಗೊಲ್ಲಹುಡುಗರನ್ನೂ ಪೀಡಿಸಲಾಗಿ ಶ್ರೀಕೃಷ್ಣನು ಇವನನ್ನು ಎತ್ತಿ ಅಪ್ಪಳಿಸಿ ಕೊಂದನು. (ಭಾಗ. ೧೦–೩೭).

**ದೃಷ್ಟಿ ಕುರುಸೈನ್ಯದ ಅಸುಗುಂದಿಸಿತು**=(ಭ. ಗೀ. ೧೧–೩೩).

೪ **ಹಿಂಗದೆ ಹಿಂಗದೆ ಹಿಗ್ಗುವವನ**=ಸದಾನಂದಭರಿತನಾದ ಪರಮಾತ್ಮನನ್ನು.

೫ **ಐದೇನೆ**=ಇದ್ದೇನೆ.

**ತಡಿ**=(ತಟ) ದಂಡೆ.

**ಕಡೆಗೈದುವೆನೆಂದು ಆಡುತ ಪಾಡುತಲೈದೆನೊ ದೇವ**=
ನಿನ್ನ ಅನುಗ್ರಹದಿಂದ ಭವಸಾಗರವನ್ನು ನಾನು ದಾಟುವೆನೆಂಬ ವಿಶ್ವಾಸದಿಂದ ಆನಂದದಿಂದ ಇದ್ದೇನೆ.

## ೧೨೨ನೆಯ ಹಾಡು

೧ **ಹಿರಿಯ ಒಡೆಯ**=ಸರ್ವ ದೇವತೆಗಳಲ್ಲಿ ಶ್ರೇಷ್ಠ.

**ಪ್ರಣವಪ್ರತಿಪಾದ್ಯ** = ಓಂಕಾರದಿಂದ ಅಂದರೆ ವೇದಗಳಿಂದ ಗುಣರೂಪಗಳು ವಿವರಿಸಲ್ಪಟ್ಟವನು.

**ಪ್ರಳಯೋದಕ**=ಮಹಾಪ್ರಳಯದ ನೀರಿನಲ್ಲಿ.

**ಮಹಾಕಾಂತಿ**=ಮಹಾಪ್ರಕಾಶವುಳ್ಳವ.

ಶ್ರೀರ್ಭೂಮಿರಿತಿ ರೂಪಾಭ್ಯಾಂ ।
ಪ್ರಕೃತಿರ್ವಿಷ್ಣುನಾಸಹ ॥
ಶೇತೇಶ್ರುತಿಸ್ವರೂಪೇಣ ।
ಸ್ತ್ರೈತಿಬ್ರಹ್ಮಲಿಯೇ ಹರಿಮ್ ॥ (ಭಾಗ. ತಾ. ಸ್ಕಂ. ೧೦ ಉತ್ತರಾರ್ಧ ಅಧ್ಯಾಯ ೮೭)
(ಜ್ಯೋತಿಃಸಂಹಿತಾಯಾಂ)

**ಹಲವು....ಫಲವ ನೇಮಿಸಿಕೊಟ್ಟ**=(ಭ. ಗೀ. ೧೮/೪೧–೪೫).

**ಜಲಜಲೋಚನ ಸಿರಿಯು ಬಿನ್ನಹ ಕೈಕೊಂಬ :—**

ಭೋ ಕೇಶವೋತ್ತಿಷ್ಠ ಸುಖಸ್ವರೂಪ ।
ಸೃಷ್ಟ್ಯಕೃತ್ಯಯೇವರ್ತಯಿತುಂ ಸಮರ್ಥಃ ।
ಸೃಷ್ಟ್ವಾಬ್ರಹ್ಮಾಣಂ ಪ್ರೇರಯಸೃಷ್ಟಸೃಷ್ಟೌ ।
ಸೃಷ್ಟ್ವಾರುದ್ರಂ ನಾಶಯಿತುಂ ಪ್ರೇರಯಸ್ವ ।
(ಬ್ರಹ್ಮಕಾಂಡ ಗ. ಪು. ಅ. ೨೩ ಶ್ಲೋ. ೬೫)

೨ **ತಮ**=ಸೋಮಕನೆಂಬ ದೈತ್ಯನು.
**ಸುಮನಸರು**=ದೇವತೆಗಳು.
**ಪದ್ಮಜಾ**=ಲಕ್ಷ್ಮಿ.

೩ **ದೈತ್ಯ**=ಭಸ್ಮಾಸುರ. (ಸಂ. ೧ ಪು. ೩೧೨).

## ೧೨೩ನೆಯ ಹಾಡು

೧ **ಕುಸುಮಜ**=ಬ್ರಹ್ಮ.
**ಪರ**=ಶ್ರೇಷ್ಠ.
**ತಮ್ಮಗೆ....ರಂಗ :—**

ರಾಮಾವತಾರದಲ್ಲಿ ಶೇಷಾವತಾರಿ ಲಕ್ಷ್ಮಣನು ತಮ್ಮನಾಗಿದ್ದನು. ಕೃಷ್ಣಾವತಾರದಲ್ಲಿ ಅದೇ ಶೇಷಾವತಾರಿಯಾದ ಬಲರಾಮನು ಅಣ್ಣನಾದ.

**ಮಗನ....ಮೊಮ್ಮಗನಾದೆಯೊ ರಂಗ :—**

ಮಗನೆಂದರೆ ಬ್ರಹ್ಮ. ಬ್ರಹ್ಮನ ಮಾನಸಪುತ್ರ ಮರೀಚಿ. ಮರೀಚಿಯು ಮಗನಾದ ಕಶ್ಯಪಋಷಿಯು ಮಗ ವಾಮನ.

ಶ್ರೀಹರಿ
|
ಬ್ರಹ್ಮ (ಮಗ)
|
ಮರೀಚಿ (ಮಗ)
|
ಕಶ್ಯಪ
|
ವಾಮನ (ಮೊಮ್ಮಗ)

**ಮಗನ ಮಗಳ....ರಂಗ** :—

ಮಗನ, ಸೂರ್ಯನ ಮಗಳಾದ ಕಾಲಿಂದಿಯನ್ನು ಮದುವೆಯಾದೆ.
(ಚಕ್ಷೋಃಸೂರ್ಯೋ ಅಜಾಯತ ಪುರುಷಸೂಕ್ತ)

೨ **ಮಾವಗೆ ನೀ....ಮಾವನಾದೆ** :—

ಮಾವಗೆ ಅಂದರೆ ಕ್ಷೀರಸಮುದ್ರಗೆ. ಭಾಗೀರಥೀನದಿ ಪರಮಾತ್ಮನ ಪಾದದಿಂದ ಹುಟ್ಟಿದವಳು, ಅವಳು ಸಮುದ್ರರಾಜನ ಸತಿಯಾಗುತ್ತಾಳೆ. ಇವರ ಮಗಳಾದ ಲಕ್ಷ್ಮಿಯನ್ನು ಶ್ರೀಹರಿ ಮದುವೆಯಾಗಿದ್ದಾನೆ.

**ಮಾವನ ಮಗಳ....ರಂಗ**=ಮಾವ ಅಂದರೆ ಕ್ಷೀರಸಾಗರ.
(ಮೇಲಿನ ಟಿಪ್ಪಣಿ ನೋಡಿರಿ).

**ಭಾವಗೆ ನೀ ಮತ್ತೆ ಭಾವನಾದೆಯೊ ರಂಗ** :—

ಭಾವಗೆ ಅರ್ಜುನನಿಗೆ (ಕುಂತಿ ಶ್ರೀಕೃಷ್ಣನ ಸೋದರತ್ತೆ. ಆಕೆಯ ಮಕ್ಕಳು ಅಂದರೆ ಪಾಂಡವರು ಕೃಷ್ಣನ ಭಾವದಿರು) ಅರ್ಜುನನಿಗೆ ತನ್ನ ತಂಗಿಯಾದ ಸುಭದ್ರೆಯನ್ನು ಕೊಟ್ಟು ಮದುವೆಮಾಡಿ ತಾನು ಆತನಿಗೆ ಭಾವನಾದ.

**ಭಾವಜವೈರಿ**=ಶಿವ (ಮೃಡಸಖ).

೩ **ಅತ್ತೆ**=ಭೂಮಿ.

ರಾಮಾವತಾರದಲ್ಲಿ ಭೂದೇವತೆ ಅತ್ತೆಯಾಗಿದ್ದಳು.

**ಅತ್ತೆಯ ಮಗಳ**=ಸೀತೆ (ಭೂಮಿಜೆ).

## ೧೨೪ನೆಯ ಹಾಡು

೧ **ವಿರಿಂಚಿ**=ಬ್ರಹ್ಮ.

**ರುಕ್ಮಿಣಿದೇವಿ**=ಭೀಷ್ಮಕರಾಜನ ಮಗಳು. (ಭಾಗ. ೧೦–೫೨).

**ಶಿಶುಪಾಲ**=(ಸಂ. ೧ ಪು. ೨೭೯).

**ರುಕುಮ**=ರುಕ್ಮಿಣಿಯ ಅಣ್ಣ.

೨ **ಹಯಾಸ್ಯ**=ಹಯಗ್ರೀವ.

ಇವನು ಒಬ್ಬ ರಾಕ್ಷಸ. ಇವನು ತಪಸ್ಸಿನಿಂದ ಆದಿಶಕ್ತಿಯನ್ನು ಮೆಚ್ಚಿಸಿದ. ಸಾವಿಲ್ಲದ ವರ ಬೇಡಿದ. ದೇವಿ ಇದು ಸಾಧ್ಯವಿಲ್ಲವೆಂದು ಹೇಳಿದಳು. ಆಗ ಆತನು

ನನ್ನ ಸಾವು ಬರುವುದಾದರೆ ನನ್ನ ಹೆಸರಿನವನಿಂದಲೇ ಬರಲಿ ಎಂದು ಕೇಳಲು, ದೇವಿ ಒಪ್ಪಿದಳು. ಬಳಿಕ ಹಯಗ್ರೀವನು ವರಬಲದಿಂದ ಕೊಬ್ಬಿ ವೇದಗಳನ್ನು ಕದ್ದೊಯ್ಯಲು ವಿಷ್ಣು ಹಯಗ್ರೀವರೂಪ ತಾಳಿ ಇವನನ್ನು ಕೊಂದ.

೩ **ಭಸ್ಮಾಸುರ**=(ಸಂ. ೧ ಪು. ೩೧೨).
**ಅಸಮ**=ಸರಿಯಿಲ್ಲದ.

೪ **ಬಲಿ**=(ಸಂ. ೧ ಪು. ೨೬೨).

೫ **ಭೂಸುರ**=ಬ್ರಾಹ್ಮಣ.

ವಿ. ಸೂ:— ಇಲ್ಲಿ ರಾಮ, ಕೃಷ್ಣ ಈ ಎರಡೇ ಅವತಾರಗಳು ಸೂಚಿತವಾಗಿವೆ.

## ೧೨೫ನೆಯ ಹಾಡು

೧ **ಅವನ ಪಿತ**=ಹಿರಣ್ಯಕಶಿಪು.
**ಪರಿಪೂರ್ಣ ಕಾಮನು ಆದ**=ಕೌರವರನ್ನು ಕೊಂದು ತನ್ನ ಶಪಥವನ್ನು ಈಡೇರಿಸಿಕೊಂಡನು.

೨ **ಜರಾಸಂಧ**=(ಸಂ. ೧ ಪು. ೨೨೬).

೩ **ತ್ರಿಪುರಾರಿ**=ಶಿವ.

## ೧೨೬ನೆಯ ಹಾಡು

೧ **ಹರನ ಹೃದಯದೊಳಿರುವ :—**

(೧) ಸ್ತುಹಿ ಶ್ರುತಂ ಗರ್ತಸದಂ ಯುವಾನ ಮೃಗಂ ನಭೀಮಮುಪ ಹನುಮುಗ್ರಂ । (ಋಗ್ವೇದ ರುದ್ರಸೂಕ್ತ).

(೨) ಸದಾಧ್ಯಾತೃಬುಧಾಭೀಷ್ಟ ಪ್ರದಾನೈಕ ಧುರಂಧರಂ ।
ಹರೇಃ ಪ್ರಿಯಂ ಧ್ಯಾನರತಂ ಸ್ಮರಾಮ್ಯಘ ಹರಂಹರಂ ॥
(ಪುರಾಣ)

೨ **ಸಿಂಧುಸುತೆ**=ಲಕ್ಷ್ಮಿ.
**ಒರೆದು**=ಪರೀಕ್ಷಿಸಿ.

ವಿ. ಸೂ:— ಈ ಕಥೆ ಭಾಗ ೮–೭ರಲ್ಲಿ ಬರುತ್ತದೆ.

೩ **ಏಣಾಂಕಧರ**=ಶಿವ.

## ೧೨೭ನೆಯ ಹಾಡು

ಈ ಹಾಡಿನಲ್ಲಿ ದಾಸರು ಪರಮಾತ್ಮನ ದಯೆಯೇ ಎಲ್ಲ ಗ್ರಹಬಲವಾಗಿ ನಿಂತು ಜೀವನಕ್ಕೆ ಕ್ಷೇಮವನ್ನುಂಟುಮಾಡುವುದೆಂದು ಹೇಳಿದ್ದಾರೆ.

**ಚಂದ್ರಬಲ**=ಜನ್ಮರಾಶಿಯಿಂದ ೩-೧೦-೬-೭-೧-೧೧ರಲ್ಲಿ ಶುಭ.

**ತಾರಾಬಲ**=ಜನ್ಮನಕ್ಷತ್ರದಿಂದ ೯-೯ ಬಿಟ್ಟು ಎಣಿಸಬೇಕು.

೧ನೆಯ ಸ್ಥಾನ ಜನ್ಮನಕ್ಷತ್ರ.
೨ನೆಯ ಸ್ಥಾನ ಸಂಪತ್ತು.
೩ನೆಯ ಸ್ಥಾನ ವಿಪತ್ತು.
೪ನೆಯ ಸ್ಥಾನ ಕ್ಷೇಮ.
೫ನೆಯ ಸ್ಥಾನ ವಿರೋಧ.
೬ನೆಯ ಸ್ಥಾನ ಸಾಧಕ.
೭ನೆಯ ಸ್ಥಾನ ನೈಧನ.
೮ನೆಯ ಸ್ಥಾನ ಮಿತ್ರ.
೯ನೆಯ ಸ್ಥಾನ ಅತಿಮಿತ್ರ.

ಇದರಂತೆಯೆ ಮುಂದೆ (ಅಥರ್ವಣ ಜ್ಯೋತಿಷ).

## ೧೨೮ನೆಯ ಹಾಡು

ಯಮಧರ್ಮನಿಗೆ ಅಂತರ್ಯಾಮಿಯಾಗಿ ನಿಂತು ಯಮವಾಚ್ಯನಾಗಿ ಪಾಪಿಗಳಿಗೆ ಶಿಕ್ಷೆಕೊಡುವ ಪರಮಾತ್ಮನನ್ನು ಕುರಿತು ಈ ಹಾಡಿನಲ್ಲಿ ದಾಸರು ವಿವರಣೆ ಮಾಡಿದ್ದಾರೆ.

೧ **ಯಮ**=(ಸಂ. ೨ ಪು. ೧೭೭).
೨ **ಬಂಟ**=ಆಳು.
೩ **ಉಗ್ರಸೇನ**=(ಸಂ. ೧ ಪು. ೨೯೪).

## ೧೨೯ನೆಯ ಹಾಡು

ಈ ಹಾಡಿನಲ್ಲಿ ದಾಸರು ಶ್ರೀಕೃಷ್ಣನ ಬಾಲಲೀಲೆಗಳನ್ನು ಬಣ್ಣಿಸುತ್ತಲಿ ಆತನ ಸರ್ವೋತ್ತಮತ್ವವನ್ನು ಹೊಗಳಲು ತೊಡಗಿದ್ದಾರೆ.

೧ **ಮಣಿಮೌಳಿ**=ರತ್ನಕಿರೀಟ.

**ಮೊಲ್ಲೆ**=ಮಲ್ಲಿಗೆಜಾತಿಯ ಹೂ.

**ಪಿಂಛ**=ನವಿಲುಗರಿ.

**ತೊಂಗಲು**=ಗೊಂಚಲು.

**ಉತ್ತಮಾಂಗ**=ತಲೆ.

**ಕೌಸ್ತುಭ** :—

ಸಮುದ್ರಮಥನ ಮಾಡಿದಾಗ ದೊರಕಿದ ೧೪ ರತ್ನಗಳಲ್ಲಿ ಒಂದು. ಇದನ್ನು ವಿಷ್ಣು ತನ್ನ ಎದೆಯಮೇಲೆ ಧರಿಸಿದ್ದಾನೆ.

**ಕಂಬು**=ಶಂಖ.

ಸಿರಿವತ್ಸ=ಶ್ರೀವತ್ಸ. (ಸಂ. ೨ ಪು. ೧೭೬).

ಸಿರಿವಕ್ಷಸ್ಥಳ=ಲಕ್ಷ್ಮಿಯಿಂದ ಕೂಡಿದ ಎದೆ.

**ಮರಕತ**=ಪಚ್ಚೆ.

**ಕಡೆಯ ತೊಡೆ**=ತೊಡೆಯ ಕೊನೆ.

**ಶ್ಯಾಮಲ**=ನೀಲಚ್ಛಾಯೆಯ.

೨ **ಪೊಂಬಟ್ಟೆ**=ಸುವರ್ಣಾಂಬರ (ಪೀತಾಂಬರ).

**ಕಾಂಚೀದಾಮ**=ನಡುಪಟ್ಟಿ.

**ಒಲ್ಲಿ**=ಧೋತರ.

**ಉಡೆ**=ಉಡಿಗೆ.

**ಜಂಬು**=ನೀರಲ.

**ಚೂತ**=ಮಾವು.

**ಜಂಭಭೇದಿ**=ದೇವೇಂದ್ರ.

ಬಲಿಯ ಗೆಳೆಯನಾದ ಒಬ್ಬ ರಾಕ್ಷಸ. ಇವನಿಗೆ ಜಂಭಾಸುರನೆಂಬ ಹೆಸರು ಇದೆ. ಯುದ್ಧದಲ್ಲಿ ಇಂದ್ರನ ವಜ್ರಾಘಾತಕ್ಕೆ ಬಲಿ ಎಚ್ಚರದಪ್ಪಿ ಬೀಳಲು ಈತನು ಸಿಂಹವನ್ನೇರಿ ಇಂದ್ರನ ಸಂಗಡ ಕಾದಾಡಿ ಅವನಿಂದ ಹತನಾದನು.

**ತಿರುವೆಂಗಳಪ್ಪ**=ಶ್ರೀವೆಂಕಟೇಶ. (ತಿರುಪತಿ).

೪ **ವಿಹಂಗಮಗಮನ**=ಗರುಡವಾಹನ ಶ್ರೀಹರಿ.

## ೧೩೦ನೆಯ ಹಾಡು

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೆ ॥

(ಈಶಾವಾಸ್ಯ ೧)

ಪರಮಾತ್ಮನು ಪರಿಪೂರ್ಣ, ಅನನಿಗೆ ಯಾವ ಆಶೆ-ಮೋಹಗಳೂ ಇಲ್ಲ. ಅವನು ನಿರ್ಮೋಹಿ. ಆದರೂ ಲೀಲೆಗಾಗಿ ಜಗತ್ತು ಮುಂ. ಸೃಷ್ಟಿಸಿದನು.

(ಲೋಕವತ್ತು ಲೀಲಾ ಕೈವಲ್ಯಂ. ಬ್ರ. ಸೂ. ಭಾ.)

೧ **ಎಡೆಗೊಡು**=ಅವಕಾಶ ಕಲ್ಪಿಸು, ಉಂಟುಮಾಡು.
**ಅವ್ಯಾಕೃತಾಕಾಶ**=ಮೂಲ ಆಕಾಶ. ಇದು ಅನಾದ್ಯನಂತ-ವಾದುದು.

೨ **ಅಣುವಿಂಗೆ....ಅಣುವು**=ಅಣುವಿನಲ್ಲಿ ಅಣು.
**ಮಹತ್ತು....ಮಹತ್ತುಗಡ**=ಮಹತ್ತಿನಲ್ಲಿ ಮಹತ್ತು.
(ಅಣೋರಣೀಯಾನ್ ಮಹತೋಮಹೀಯಾನ್ ಭ. ಗೀ. ೮-೯).
**ಅಪರಿಮಿತ**=ಅನಂತ.

೩ **ಕಾಣಾಚಿ**=ಉಂಬಳಿ, ಇನಾಮು.

೪ **ಅಗ್ನಿಯೊಳಗಿದ್ದು....ನೀನೆ ಘನ**=
(ಭ.ಗೀ. ೧೨-೧೩-೧೪).

೫ **ಇನಿತು**=ಈ ಬಗೆಯಾಗಿ.
**ಕಾರಣಮನಿತು ನೀನೆ**=ಎಲ್ಲಕ್ಕೂ ಕಾರಣನು ನೀನೆ.
**ನಿನಗೂ ಎನಗೂ ಕಾರಣ ನೀನೆ**=ಪರಮಾತ್ಮನು ಪರಿಪೂರ್ಣ-ನಾದುದರಿಂದ ಬೇರೆ ಕಾರಣವಿರಲಾರದು.

## ೧೩೧ನೆಯ ಹಾಡು

ಪರಮಾತ್ಮನು ಮುನಿದರೆ ಎಂತಹ ಪೌರುಷಶಾಲಿಯೂ ಗತಿಗಾಣದೆ ಹೋಗು-ವನು, ಅವನು ಒಲಿದರೆ ಎಂತಹ ಹತಭಾಗಿಯೂ ಅಭ್ಯುದಯಹೊಂದುವನು ಎಂಬ ಮಾತನ್ನು ದಾಸರು ಈ ಹಾಡಿನಲ್ಲಿ ಸೋದಾಹರಣವಾಗಿ ವಿವರಿಸಿದ್ದಾರೆ.

೧ **ಆಹುದು**=ಆಗುವುದು.
**ಎಂತು**=ಹೇಗೆ.

**ಬಲ್ಲಿದ**=ಶ್ರೇಷ್ಠ.

**ಎಚ್ಚು**=ಬಾಣಬಿಟ್ಟು.

**ಕಿಷ್ಕಿಂಧೆ :—**

ವಾಲಿ, ಸುಗ್ರೀವರ ರಾಜಧಾನಿ. ಬಳ್ಳಾರಿ ಜಿಲ್ಲೆಯ ತುಂಗಭದ್ರಾನದಿಯ ಉತ್ತರ ತೀರದಲ್ಲಿದೆ. ಇದರ ಬಳಿಯಲ್ಲಿಯೇ ಹಂಪೆಯೆಂದು ಕರೆಯಲ್ಪಡುವ ಪಂಪಾಕ್ಷೇತ್ರವೂ ಇದೆ. (ರಾಮಾ. ಕಿಷ್ಕಿಂಧಾಕಾಂಡ).

**ವಾಲಿ-ಸುಗ್ರೀವ**=(ಸಂ. ೨ ಪು. ೨೨೩).

೩ **ಪನ್ನಗ**=ಕಾಲೀಯ ಸರ್ಪ.

**ಅಕ್ಷೋಹಿಣಿ**=ಸೈನ್ಯಸಮೂಹ.

| | | |
|---|---|---|
| ರಥಗಳು | ೨೧೮೭೦ | (೧). |
| ಆನೆಗಳು | ೨೧೮೭೦ | (೧). |
| ಕುದುರೆಗಳು | ೬೫೬೧೦ | (೩). |
| ಕಾಲಾಳು | ೧೦೯೩೫೦ | (೫). |

೪ **ಕೊಲಲು**=ಅತಿಯಾಗಿ ಪೀಡಿಸಲು.

೫ **ಶೇಷಗಿರಿ**=ತಿರುಪತಿ.

## ೧೩೨ನೆಯ ಹಾಡು

ಶ್ರೀಹರಿ ಬೇರೆಬೇರೆ ದೇವತೆಗಳಲ್ಲಿ ಅಂತರ್ಯಾಮಿಯಾಗಿದ್ದು ಆ ಆ ದೇವತೆಗಳ ನಾಮವಾಚ್ಯನಾಗಿ ಅವರವರ ಕಾರ್ಯವನ್ನು ಮಾಡಿ ಮಾಡಿಸುತ್ತಾನೆ. ಆದುದರಿಂದ ರುದ್ರ, ಬ್ರಹ್ಮ, ವಿಷ್ಣು ಇವೆಲ್ಲವೂ ಆ ಒಂದೇ ಮೂರ್ತಿಯ (ಶ್ರೀಹರಿಯ) ಆವಿರ್ಭಾವಗಳು.

೧ **ವೇದಾನಂತಕೋಟಿ :—**

ವೇದಗಳು ನಾಲ್ಕಿವೆ ಎಂಬ ಪರಂಪರೆ ಇದೆಯಾದರೂ ಅವು ಅನಂತವಾಗಿವೆಯೆಂಬುದು ಪ್ರಾಚೀನ ಪರಂಪರೆ

೨ **ಸುಮ್ಮನಾದರು ಒಮ್ಮೆ ಸುಳಿವ ತೋರುತ :—**

ಆಸೀನೋದೂರಂ ವ್ರಜತಿ।
ಶಯಾನೋಯಾತಿ ಸರ್ವತಃ॥

ಕಸ್ತಂ ಮದಾಯದಂ ದೇವಂ ।
ಮದನ್ಯೋಜ್ಞಾತುಮರ್ಹತಿ ॥
(ಕಠೋಪನಿಷತ್ ೨೧.)

**ಬ್ರಹ್ಮಾಂಡದೊಳಾಡುತಿಹುದೊಂದೆ ಮೂರುತಿ :—**

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂಜಗತ್ (ಈ. ಉ. ೧).

**ನಮ್ಮ ದೇವ ನಿಮ್ಮ ದೇವ ತಮ್ಮ ದೇವ ಎಂತೆಂಬ**=ನಾಮ-ಕ್ರಿಯೆರೂಪಗಳು ಹಲವಾದರೂ ದೇವನೊಬ್ಬನೆ.

**ಹಮ್ಮು**=ಅಹಂಭಾವ.

**ಆಡುತಿಹುದು**=ಹೇಳುತ್ತಿರುವುದು.

**ಅಮ್ಮದೆ**=ಸಾಧ್ಯವಾಗದೆ.

೩ **ವಸ್ತು**=ಮೋಕ್ಷವಿಷಯಕವಾದ.

**ವರದ**=ವರನನ್ನು ಕೊಡುವವ.

೪ **ವಾಸುಕಿ**=ಆದಿಶೇಷ.

**ಸಾಸಿರದಳ**=ಹೃದಯ

ಇದಕ್ಕೆ ಯೋಗದಲ್ಲಿ ಸಹಸ್ರದಳ ಕಮಲವೆಂಬ ಹೆಸರಿದೆ.

೫ **ಬೊಮ್ಮಂಗೆ ಸಿರಿರಂಗ ಮೂರುತಿ :—**

ಬ್ರಹ್ಮನಲ್ಲಿ ಶ್ರೀಹರಿಯು ಶ್ರೀರಂಗರೂಪದಿಂದ ಅಂತರ್ಯಾಮಿಯಾಗಿದ್ದು ಸೃಷ್ಟಿಕಾರ್ಯವನ್ನು ಮಾಡುತ್ತಾನೆ.

ಸಕರ್ಮಬೀಜಂ ರಜಸೋಪರಕ್ತಃ ।
ಪ್ರಜಾಃ ಸಿಸೃಕ್ಷನ್ನಿಯದೇವ ದೃಷ್ಟ್ವಾ ॥
ಅಸ್ತೌದ್ವಿಸರ್ಗಾಭಿಮುಖಸ್ತಮೀಡ್ಯ ।
ಮವ್ಯಕ್ತ ವರ್ತ್ಮನ್ಯಭಿವೇಶಿತಾತ್ಮಾ ॥ (ಭಾಗ. ೩-೮-೩೩).

**ರುದ್ರಂಗೆ ನರಸಿಂಹ ಮೂರುತಿ :—**

ಉಗ್ರಭೂತಗಳ ಒಡೆಯನಾದ ರುದ್ರನಲ್ಲಿ ಶ್ರೀನರಸಿಂಹರೂಪಿಯಾದ ಪರಮಾತ್ಮನು ಅಂತರ್ಯಾಮಿಯಾಗಿರುತ್ತಾನೆ.

ರುದ್ರಸ್ತ್ವೋಗ್ರೋಗ್ರಭೂತಾನಾಂ ನೃಸಿಂಹಾತ್ಮಾ ಶಿವೇನಚ
(ಭಾ. ತಾ. ನಿ. ೨೧-೬೯).

### ಇಂದ್ರಂಗೆ ಉಪೇಂದ್ರ ಮೂರುತಿ :—

ಶ್ರೀಹರಿಯು ಇಂದ್ರನಲ್ಲಿ ಉಪೇಂದ್ರ ( ವಾಮನ ) ರೂಪದಿಂದ ಅಂತರ್ಯಾಮಿಯಾಗಿರುತ್ತಾನೆ.

ಉಕ್ತ ಇಂದ್ರೇಣ ಚೋಪಾಸ್ಯೋ ವಾಮನಾತ್ಮಾ ಜನಾರ್ದನಃ ‖
(ಭಾ. ತಾ. ನಿ. ೨೧–೬೮)

### ಚಂದ್ರಗೆ ದಧಿವಾಮನಮೂರುತಿ :—

ಶ್ರೀಹರಿಯು ಚಂದ್ರನಲ್ಲಿ ದಧಿವಾಮನರೂಪದಿಂದ ಅಂತರ್ಯಾಮಿಯಾಗಿದ್ದಾನೆ.

ಪದ್ಮಾಸನಸ್ಥಂ ದೇವೇಶಂ ಚಂದ್ರಮಂಡಲಮಧ್ಯಗಂ ।
ಪೂರ್ಣಚಂದ್ರನಿಭಂದೇವಂ ದ್ವಿಭುಜಂ ವಾಮನಂ ಸ್ಮರೇತ್ ‖
(ವಾಮನ ಪುರಾಣೇ ದಧಿವಾಮನ ಸ್ತೋತ್ರೇ)

### ಸೂರ್ಯಗೆ ನಾರಾಯಣ ಮೂರುತಿ :—

ಶ್ರೀಹರಿಯು ಸೂರ್ಯನಲ್ಲಿ ನಾರಾಯಣರೂಪದಿಂದ ಅಂತರ್ಯಾಮಿಯಾಗಿರುತ್ತಾನೆ.

ಪರೋರಜಃ ಸವಿತುರ್ಜಾತವೇದೋ ।
ದೇವಸ್ಯ ಭರ್ಗೋ ಮನಸೇದಂ ಜಜಾನ ‖
ಸುರೇತಸಾದಃ ಪುನರಾವಿಶ್ಯಚಷ್ಟೇ ।
ಹಂಸಂ ಗೃಥ್ರಾಣಂ ನೃಷದ್ರಿಂಗಿರಾಮಿಮಃ ‖ (ಭಾಗ. ೫–೭–೧೪).

### ಅಗ್ನಿಗೆ ಪರಶುರಾಮ ಮೂರುತಿ :—

ಶ್ರೀಹರಿಯು ಅಗ್ನಿಯಲ್ಲಿ ಪರಶುರಾಮರೂಪದಿಂದ ಅಂತರ್ಯಾಮಿಯಾಗಿರುವನು.

ಸಂಹರ್ತಾ ಸರ್ವ ದೋಷಾಣಾಮಗ್ನಿಸ್ಥಃ ಸರ್ವದಾಹಕಃ ।
ನಿತಾನಂದೋಗ್ನಿವರ್ಣಶ್ಚ ರಾಮಃ ಪರಶುಭೃತ್‌ಸದಾ ‖
(ಬೃಹದಾರಣ್ಯ ಭಾಷ್ಯ ಗಾಯತ್ರೀಸಂಹಿತಾಯಾಂ)

### ಈರೇಳು ಲೋಕಕ್ಕೆಲ್ಲ ಕಾಲಪುರುಷ ವಿಷ್ಣುಮೂರುತಿ:—

ಶ್ರೀಹರಿಯು ವಿಷ್ಣುರೂಪದಿಂದ ಕಾಲನಲ್ಲಿ ಅಂತರ್ಯಾಮಿಯಾಗಿ ಇರುತ್ತಾನೆ.

ಹಂಸೋದುಃಖಾದಿಹಾನೇನ ಜೀವೇಶತ್ವಾತ್ ಗೃಧ್ರರಾಟ್ ।
ಕಾಲಃ ಸರ್ವನಿಯಂತೃತ್ವಾತ್ ಪರಮಾತ್ಮಾ ಪ್ರಕೀರ್ತಿತಃ ‖

೬ **ಅನಂತಕಿರೀಟ ಅನಂತಶಿರಸ....ನಮ್ಮ....ಅನಂತ:—**
ಇದರಲ್ಲಿ ಪರಮಾತ್ಮನ ವಿಶ್ವರೂಪದ ವರ್ಣನೆ ಇದೆ. (ಭ. ಗೀ. ೧೧).

**ಕುಕ್ಷಿ**=ಹೊಟ್ಟೆ.
**ಕಟಿ**=ಸೊಂಟ.
**ಜಾನು**=ಮೊಳಕಾಲು.
**ಜಂಘೆ**=ಕಣಕಾಲು.

೭ **ಅಣುಮಹತ್ತಾಗಿ ತೋರುವ ಮೂರುತಿ** = ಅಣುವಿಗಿಂತ ಅಣುವಾಗಿಯೂ ಮಹತ್ತಿಗಿಂತ ಮಹತ್ತಾಗಿಯೂ ತೋರುವ ಮೂರುತಿ.

## ೧೩೩ನೆಯ ಹಾಡು

ಪರಮಾತ್ಮನ ಸಾಮೀಪ್ಯವನ್ನು ಹೊಂದಲು ಲಿಂಗಶರೀರಗಳಿಗೆ ಸಾಧ್ಯವಿಲ್ಲವೆಂಬುದನ್ನು ಕಾವ್ಯವಾಣಿಯಲ್ಲಿ ಹೇಳುತ್ತ ದಾಸರು ಈ ಸುಳಾದಿಯನ್ನು ಪ್ರಾರಂಭಿಸಿದ್ದಾರೆ.

೧ **ನಳಿನಪತ್ರೇಕ್ಷಣನ**=ಕಮಲದಳ ನಯನನ=ಶ್ರೀಹರಿಯ.
**ಓಲಗಶಾಲೆ**=ವೈಕುಂಠ.

೨ **ಉಕುತಿ**=(ಉಕ್ತಿ) ಮಾತು.
**ವಿರಿಂಚಿ**=ಬ್ರಹ್ಮ.
**ವಹಂಗಪತಿ**=ಗರುಡ.

೩ **ಬದಿ**=ಅಕ್ಕಪಕ್ಕ.
**ಬಲಿ**=ಕಟ್ಟು.
**ಎಂದವಗೆ**=ಹಾಡಿದವಗೆ.

೪ **ಪಂಕಜಭವ**=ಬ್ರಹ್ಮ.
**ಪಂಕಜಮಿತ್ರ**=ಸೂರ್ಯ.
**ಪಂಕಜಾಪತಿ**=ಲಕ್ಷ್ಮೀಯ ಗಂಡ (ಶ್ರೀಹರಿ).

೫ **ಚತುರಮೂರುತಿ** = ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ.

**ಚತುರ**=ಪ್ರಸಿದ್ಧ.

**ಚತುರವಿಧ ಮುಕುತಿ**=(ಸಂ. ೧ ಪು. ೨೯೫).

**ಹಾರಲು**=ಹಾರಿಹೋಗುವಂತೆ.

**ಸಂಚಿತಾಗಾಮಿಗಳನು**=(ಸಂ. ೨ ಪು. ೧೭೬).

## ೧೩೪ನೆಯ ಹಾಡು

ತಾಯಿ ಯಶೋದೆ ಅನಂತ ಗುಣಪರಿಪೂರ್ಣನಾದ ಶ್ರೀಹರಿಗೆ ವಿವಿಧ ಉಪಚಾರಗಳನ್ನು ಸಲ್ಲಿಸುತ್ತಿರುವ ವಿಷಯವನ್ನು ಬೆರಗಿನ ಮಾತಿನಿಂದ ಹೇಳುತ್ತ ದಾಸರು ಈ ಸುಳಾದಿಯನ್ನು ಆರಂಭಿಸಿದ್ದಾರೆ.

೧ **ಅಕ್ಷಯಾಂಬರ**=ಹರಿಹಿಂಗದ ಉಡಿಗೆ.

**ಪೊಂಬಟ್ಟೆ**=ಪೀತಾಂಬರ.

**ಅಂಗಜ**=ಕಾಮ.

**ಇಂಗಡಲು**=ಕ್ಷೀರಸಮುದ್ರ.

**ಭೀಮ**=ಭಯಂಕರ.

**ರಕ್ಷೆಯಬೊಟ್ಟು**=ಕೂಸಿಗೆ ದೃಷ್ಟಿತಾಕಬಾರದೆಂದು ಹಚ್ಚುವ ಕಪ್ಪುಬೊಟ್ಟು.

**ಗೋರಂಟ್ಲೆ**=(ಗುಂತಕಲ್ಲು--ಧರ್ಮಾವರಂ ರೇಲ್ವೆ).

ಧರ್ಮಾವರದಿಂದ ಮುಂದೆ ಎರಡನೆಯ ನಿಲ್ದಾಣವಾದ ಪುನುಕೊಂಡೆಯಿಂದ ೧೮ ಮೈಲಿನ ಮೇಲಿದೆ. ಇಲ್ಲಿ ಚೆನ್ನಕೇಶವರಾಯನ ಗುಡಿಯಿದೆ.

**ಶಾರಂಗಧರ**=(ಶಾರ್ಙ್ಗ=ಕೋಡು).

ಶಾರ್ಙ್ಗವೆಂಬ ಬಿಲ್ಲನ್ನು ಹಿಡಿದವ (ವಿಷ್ಣು).

೨ ಲೀಲಾಮೂರ್ತಿಯಾದ ಶ್ರೀಹರಿ ಜಗತ್ತು ಮತ್ತು ಜಗತ್ತಿನ ಜೀವರಾಶಿಗಳನ್ನು ಗೊಂಬೆಯಾಟದ ಸಾಧನಗಳನ್ನಾಗಿ ಮಾಡಿಕೊಂಡಿದ್ದಾನೆಂಬ ವಿವರ ಈ ನುಡಿಯಲ್ಲಿದೆ. ಶ್ರೀಹರಿ ಸ್ವಯಂಪೂರ್ಣ ಹಾಗು ಉಳಿದವರು ಅಸ್ವಾತಂತ್ರ್ಯರು ಎಂಬುದು ಇದರ ಗುಟ್ಟು.

೩ ಬ್ರಹ್ಮಾದಿ ದೇವತೆಗಳೆಲ್ಲರಿಗೂ ಅವರವರ ಸಾಮರ್ಥ್ಯ ಬಂದಿರುವುದು ಶ್ರೀಹರಿಯ ಅನುಗ್ರಹದಿಂದ ಎಂಬ ವಿಚಾರವನ್ನು ದಾಸರು ಹೇಳಿದ್ದಾರೆ.

೪ ಇದರಲ್ಲಿ ದಾಸರು ಸ್ಥೂಲವಾಗಿ ಒಂದುಬಗೆಯ ತಾರತಮ್ಯವನ್ನು ಹೇಳಿದ್ದಾರೆ. ಮಾನವರಿಗೆ ದೇವತೆಗಳು ಒಡೆಯರು. ದೇವತೆಗಳಿಗೆಲ್ಲ ದೇವೇಂದ್ರ ಒಡೆಯ. ದೇವೇಂದ್ರನಿಗೆ ಒಡೆಯ ಮಹಾದೇವ. ಮಹಾದೇವನಿಗೆ ಒಡೆಯ ಬ್ರಹ್ಮ. ಬ್ರಹ್ಮನಿಗೆ ಒಡತಿ ಲಕ್ಷ್ಮಿ. ಲಕ್ಷ್ಮೀದೇವಿಗೊಡೆಯನು ಶ್ರೀಹರಿ.

೫ **ಉರು**=ಶ್ರೇಷ್ಠ.

ವಿ. ಸೂ:— ಶ್ರೀಹರಿ ಸಕಲ ಗುಣಪರಿಪೂರ್ಣನೆಂಬುದನ್ನು (ಸ್ವರೂಪ, ಪ್ರಭಾವ, ಕರ್ಮ, ಅನುಗ್ರಹ, ಮಹಿಮೆ) ತಿಳಿಸಿದ್ದಾರೆ.

## ೧೩೫ನೆಯ ಹಾಡು

ರಾಜರಾಜೇಶ್ವರನಾದ ಶ್ರೀಹರಿಯ ಮಹಾವೈಭವವನ್ನು ಈ ಸುಳಾದಿಯಲ್ಲಿ ದಾಸರು ವರ್ಣಿಸಿದ್ದಾರೆ.

೧ **ಓಜೆ**=ಕ್ರಮ, ರೀತಿ.
**ಮಾರ**=ಕಾಮ.
**ಢಾಳಿಸು**=ಬೀಸು.
**ಕಂಬಿ**=ಬೆತ್ತ.
**ನೀರಜಾಲಯೆ**=ಕಮಲಾಲಯೆ=ಲಕ್ಷ್ಮಿ.

೨ **ಇಂದ್ರಚಾಪ**=ಕಾಮನಬಿಲ್ಲು.
**ಇಂದ್ರನೀಲ+ಅಚಲ**=ಇಂದ್ರನೀಲರತ್ನದ ಪರ್ವತ.
**ಕುಂದ**=ಮಲ್ಲಿಗೆಜಾತಿಯ ಹೂ.
**ಗರುವರಾಯ**=ಶ್ರೇಷ್ಠರಲ್ಲಿ ಶ್ರೇಷ್ಠ.

೩ **ಉಡುಪಾಲಯ**=ಆಕಾಶ (ನೀಲವರ್ಣ).

೪ ಶ್ರೀಹರಿ ಸಕಲ ಕಲ್ಯಾಣಗುಣೋಪೇತನೆಂದೂ ಸಚ್ಚಿದಾನಂದ ಸ್ವರೂಪನೆಂದೂ ಅಚ್ಯುತಾದಿ ಅನಂತನಾಮನೆಂದೂ ಈ ನುಡಿಯಲ್ಲಿ ದಾಸರು ಹೇಳಿದ್ದಾರೆ.

೫ **ನಿರಾಕಾರ**=ಶೂನ್ಯ.
**ಕಾಕ**=ಕ್ಷುಲ್ಲಕ.
**ಕಣ**=ವಾದಭೂಮಿ.
**ಸಾಕಾರ**=ಸಗುಣಸ್ವರೂಪ.

**ಏಕೋವಿಷ್ಣು**=ವಿಷ್ಣು ಒಬ್ಬನೇ ಸರ್ವೋತ್ತಮನು.

೬ **ಸಿದ್ಧಾಯ**=ಪಡಿಪದಾರ್ಥ (ಸೀದಾ).

**ಕಟ್ಟಳೆ**=ಸಂಬಳ.

**ಕಂದಾಯ**=ತೆರಿಗೆ.

**ಎನ್ನ ಮನಬಂದಂತೆ....ಓಲೈಸಿಕೊಂಬ** = ದೇವನು ಭಕ್ತವತ್ಸಲ.

೭ **ಜೀವಬಿಂಬ**=ಪರಮಾತ್ಮನು ಪ್ರತಿಜೀವದಲ್ಲಿ ಬಿಂಬಸ್ವರೂಪಿಯಾಗಿರುವನು.

**ಓವು**=ಕಾಯು.

## ೧೩೬ನೆಯ ಹಾಡು

ಪರಮಾತ್ಮನು ಭಕ್ತರಾಧೀನನೆಂಬುದನ್ನು ವಿವರಿಸಲು ದಾಸರು **ಈ ಸುಳಾದಿ**ಯನ್ನು ರಚಿಸಿದ್ದಾರೆ.

೧ **ಅಪ್ರಾಕೃತ**=ಪ್ರಕೃತಿಯನ್ನು ಮಿಕ್ಕಿದವ.

**ಅಪ್ರಮೇಯ**=ಅಸಾಮಾನ್ಯ.

**ನಿರ್ವೀರ್ಯ**=ಅಸಾಧಾರಣ ವೀರ್ಯವುಳ್ಳವನು.

೩ **ವಾಸುದೇವ**=ಜಗತ್ರಯಕ್ಕೆ ಆಧಾರನಾದವ.

**ಈಶ**=ಶಿವ.

**ವಾಸವ**=ಇಂದ್ರ.

೪ **ಚಾರಿವರಿ**=ಹಂಬಲಿಸು.

೫ **ಆನಂದ**=ಲಕ್ಷ್ಮಿ.

## ೧೩೭ನೆಯ ಹಾಡು

ಪರಮಾತ್ಮನ ಸರ್ವರೂಪಗುಣಕ್ರಿಯಾದಿಗಳು ಆನಂದಮಯ.

೧ **ಊರು**=ತೊಡೆ.

**ಉರ**=ಎದೆ.

**ಶಿರೋರುಹ**=ಕೂದಲು.

ಚಿದಾನಂದಾತ್ಮಕಾಸ್ತಸ್ಯ ಗುಣಾಃ ಸರ್ವಗುಣಾತ್ಮಕಾಃ ।
ಕ್ರೋಧಃಕ್ಷಮಾತ್ಮಕೋ ಯಸ್ಯ ಚಿದಾನಂದಾತ್ಮಕಸ್ತಥಾ ॥
ಏವಂ ಸರ್ವಗುಣಾಸ್ತಸ್ಯ ಸರ್ವೇಭ್ಯೋಽಪಿ ವಿಲಕ್ಷಣಾಃ ॥
(ಬೃಹದಾರಣ್ಯಕ ಭಾಷ್ಯ)

೨ **ದೇವರಾಟ್**=ದೇವೇಶ.

ಸರ್ವದೇವಾಧಿದೇವಸ್ಯ ವಿದಾರಿತಮಹತ್ತಮಃ
(ದ್ವಾದಶಸ್ತೋತ್ರ ಅ. ೧೧)

೩ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಇವುಗಳ ಮೂಲಧರ್ಮಗಳು ದಶಮಾತುರಗಳು (ಮಾತೃ).

**ಏಕಾದಶ ಹೃಷೀಕ**= ಹನ್ನೊಂದನೆಯ ಇಂದ್ರಿಯ (ಹೃಷೀಕ) ಎಂದರೆ ಮನಸ್ಸು.

**ಹಾವ**=ಅಂಗಚೇಷ್ಟೆ.

**ಭಾವ**=ಮಾನಸಿಕ ಭಾವನೆಗಳು (ಸಂವೇದನೆ).

**ಭ್ರೂ**=ಹುಬ್ಬು.

೪ **ಬೊಮ್ಮ—ಬೊಮ್ಮ—ಬೊಮ್ಮ**=ಇವನೇ ಬ್ರಹ್ಮನೆಂದು ಸಾರಿ ಹೇಳುವಿಕೆ.

ವಿಷ್ಣುರೇವ ಜ್ಯೋತಿಃ ವಿಷ್ಣುರೇವ ಆತ್ಮಾ ।
ವಿಷ್ಣುರೇವ ಬ್ರಹ್ಮಾ ವಿಷ್ಣುರೇವ ಬಲಂ ॥
ವಿಷ್ಣುರೇವ ಯಶಃ ವಿಷ್ಣುರೇವ ಆನಂದಃ ॥
(ಚತುರ್ವೇದ ಶಿಖಾಯಾಂ ಭಾಷ್ಯೇ ಉದಾಹೃತಂ)

೫ **ಅರ್ಧಾಂಗಿ**=ಹೆಂಡತಿ.

(ಲಕ್ಷ್ಮೀದೇವಿಗೆ ಆನಂದವೆಂಬ ಹೆಸರಿದೆ).

**ವಿಜ್ಞಾನ**=ಪದಾರ್ಥವಿಷಯಕವಾದ ಜ್ಞಾನ.

(ಭ. ಗೀ. ೭ನೆಯ ಅಧ್ಯಾಯದಲ್ಲಿ ಜ್ಞಾನ-ವಿಜ್ಞಾನಗಳ ವಿವರಣೆ ಇದೆ.)

## ೧೩೮ನೆಯ ಹಾಡು

ಪ್ರಸನ್ನದಾಸರಿಂದ ರಚಿತವಾದ ಈ ಗದ್ಯದಲ್ಲಿ ಪರಮಾತ್ಮನ ಮಹಿಮೆಯನ್ನು ಪ್ರಕಟಿಸುವ ನಾಮಾವಳಿಯು ಇದೆ.

**ಅನಂತಕೋಟಿ**=ಅಸಂಖ್ಯ.

**ಅನಿಮಿತ್ತ ಬಂಧು**=ಯಾವ ಹೇತುವೂ ಇಲ್ಲದ ಬಾಂಧವ್ಯವುಳ್ಳವ.

**ಷಡ್ಗುಣ**= ಸಮಗ್ರ ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ, ಜ್ಞಾನ, ವಿಜ್ಞಾನ.

**ಅವ್ಯಾಹತ**=ಅಖಂಡ.

**ಅಶೇಷ**=ಸಂಪೂರ್ಣ.

**ಅಘಟಿತ**=ರಚನೆಗೆ ಅಶಕ್ಯವಾದ.

**ಅಕ್ಷರ**=ನಾಶರಹಿತ.

**ಆಭೂಷ**=ಅಲಂಕೃತ.

**ದೇಶ-ಕಾಲ-ಗುಣಾತೀತ**=ದೇಶ-ಕಾಲ-ಗುಣಗಳನ್ನು ಮಿಕ್ಕಿದವ.

**ಸಿಂಧು**=ಸಮುದ್ರ.

**ಗಜ**=ಕುವಲಯಾಪೀಡವೆಂಬ ಕಂಸನ ಆನೆ.

**ಪಂಪಾಪತಿ**=ಪಂಪಾಧೀಶ.

**ಗುಲಗಂಜಿಮಾಧವ :—**

ಹಂಪೆಯ ವಿರೂಪಾಕ್ಷೇಶ್ವರನ ದೇವಾಲಯದೊಳಗೆ ಎಡಗಡೆಯ ಭೂಮಂದಿರದಲ್ಲಿ ಇರುವ ಗುಲಗಂಜಿಮಾಧವ.

**ಶ್ರೀಶೈಲ :—**

ಇದೊಂದು ಜ್ಯೋತಿರ್ಲಿಂಗವುಳ್ಳ ದಕ್ಷಿಣಹಿಂದುಸ್ತಾನದ ಪ್ರಸಿದ್ಧ ಶೈವಕ್ಷೇತ್ರ-ಇದನ್ನು ಮುಟ್ಟಲಿಕ್ಕೆ ಕೆಳಗೆ ಕಾಣಿಸಿದ ಮಾರ್ಗವಿದೆ.

ಕರ್ನೂಲು ರೇಲ್ವೆ ನಿಲ್ದಾಣದಿಂದ ಆತ್ಮಕೂರು ಅಥವಾ ನಂದ್ಯಾಲದಿಂದ ಆತ್ಮಕೂರು ೨೨ ಮೈಲು, ಅಲ್ಲಿಂದ ನಾಗಾಹುಟಿ ೧೨ ಮೈಲು, ಮುಂದೆ ಶ್ರೀಶೈಲವು ೩೧ ಮೈಲು.

ಈಗ ಕರ್ನೂಲ ರೇಲ್ವೆ ನಿಲ್ದಾಣದಿಂದ ಶ್ರೀಶೈಲದವರೆಗೆ ಬಸ್ಸುಗಳು ಓಡಾಡುತ್ತವೆ.

**ಅರುಣಾಚಲ :—**

ವಿಲ್ಲುಪುರಂ ಗುಡೂರು ರೇಲ್ವೆ ದಾರಿಯಮೇಲೆ,ವಿಲ್ಲುಪುರಮ್ಮಿನಿಂದ ೪೨ ಮೈಲುಗಳ ಮೇಲೆ ತಿರುವಣ್ಣಾಮಲೈ ಇದೆ. ಇದರಿಂದ ಮುಕ್ಕಾಲು ಮೈಲು ದೂರದಲ್ಲಿ ಅರುಣಾಚಲವಿದೆ. ಇಲ್ಲಿಯ ಅರುಣಾಚಲೇಶ್ವರನ ಭವ್ಯ ಮಂದಿರವು ವಿಸ್ತಾರಕ್ಕೆ ಹೆಸರಾಗಿದೆ.

(ಸ್ಕಂದ ಪುರಾಣ ಮಾಹೇ. ಖಂಡ. ಅರುಣಾಚಲ ಮಾ. ಉತ್ತರಾ. ೩–೧೦–೧೪).

ವಿ. ಸೂ:— ಇವು ಶೈವಕ್ಷೇತ್ರಗಳಾದರೂ ಇಲ್ಲಿ ಶಿವನು ಶ್ರೀಹರಿಯ ಧ್ಯಾನಮಾಡುತ್ತ ಅದನ್ನು ಜನರಿಗೆ ಉಪದೇಶಿಸುವನೆಂಬ ನಂಬಿಗೆ ವೈಷ್ಣವರಲ್ಲಿದೆ.

**ವೃಷಾಚಲ**=ತಿರುಪತಿ.

**ಅನಂತಶಯನ**=ತಿರವನಂತಪುರವ್.

**ದರ್ಭಶಯನ :—**

ಮಾನಾಮದುರೆಯಿಂದ ರಾಮೇಶ್ವರಕ್ಕೆ ಹೋಗುವ ದಾರಿಯಲ್ಲಿ ರಾಮನಾಡು ಎಂಬ ರೇಲ್ವೆ ಸಿಲ್ದಾಣವಿದೆ. ಇಲ್ಲಿಂದ ದರ್ಭಶಯನಮಂದಿರವು ೬ ಮೈಲಾಗುತ್ತದೆ. ಇಲ್ಲಿಯ ಮಂದಿರದಲ್ಲಿ ದರ್ಭಶಯ್ಯೆಯ ಮೇಲೆ ಮಲಗಿದ ಶ್ರೀವಿಷ್ಣುವಿನ ದ್ವಿಭುಜ ಮೂರ್ತಿ ಇದೆ.

ವಿಭೀಷಣನ ಸಮ್ಮತಿಯಿಂದ ಶ್ರೀರಾಮನು ಇಲ್ಲಿ ದರ್ಭದ ಆಸನವನ್ನು ಹಾಕಿಕೊಂಡು, ಮೂರು ದಿನಗಳ ವರೆಗೆ ವ್ರತಮಾಡಿ ಮಾರ್ಗವನ್ನು ಕೊಡು ಎಂದು ಸಮುದ್ರರಾಜನನ್ನು ಪ್ರಾರ್ಥಿಸಿದನು— ಎಂಬ ಕತೆ ಈ ಕ್ಷೇತ್ರದ ವಿಷಯಕವಾಗಿದೆ. ಇಲ್ಲಿಂದ ಮೂರು ಮೈಲುಗಳ ಮೇಲೆ ಸಮುದ್ರ ದಂಡೆಯ ಮೇಲೆ ಹನುಮಂತನ ಗುಡಿ ಇದೆ.

**ಹಯಗ್ರೀವ**=(ಸಂ. ೨ ಪು. ೨೧೧).

**ದತ್ತಾತ್ರೇಯ :—**

ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಅತ್ರಿಮಹರ್ಷಿ ಸಂತಾನಕ್ಕಾಗಿ ತಪಸ್ಸು ಮಾಡಿದನು. ಆಗ ಪ್ರಸನ್ನರಾದ ತ್ರಿಮೂರ್ತಿಗಳು ತಮ್ಮ ಒಬ್ಬೊಬ್ಬರ ಅಂಶದಿಂದ ಒಬ್ಬೊಬ್ಬ ಮಗನು ಹುಟ್ಟುವನೆಂದು ಅನುಗ್ರಹಿಸಿದರು. ಅದರಂತೆ ಬ್ರಹ್ಮನ ಅಂಶದಿಂದ ಚಂದ್ರನು, ವಿಷ್ಣುವಿನ ಅಂಶದಿಂದ ದತ್ತಾತ್ರೇಯನು, ಶಿವನ ಅಂಶದಿಂದ ದುರ್ವಾಸಮುನಿಯೂ ಜನಿಸಿದರು. ಈತನು ಬ್ರಹ್ಮಚರ್ಯನಿರತನಾಗಿದ್ದು ಅಲರ್ಕ ಪ್ರಹ್ಲಾದ ಯದು ಕಾರ್ತವೀರ್ಯ ಮುಂ. ಜ್ಞಾನೋಪದೇಶ ಮಾಡಿದನು. (ಭಾಗ. ೪–೧).

**ಹಂಸನಾಮಕ :—**

ವಿಷ್ಣುವಿನ ಅವತಾರ. ಇವನು ಸನಕಾದಿಗಳ ಸಂಶಯಗಳನ್ನು ದೂರಮಾಡಿದನು. (ಭಾಗ. ೧೧–೧೩).

**ಧನ್ವಂತರಿ :—**

ದೇವತೆಗಳ ವೈದ್ಯ. ಆಯುರ್ವೇದವನ್ನು ಲೋಕದಲ್ಲಿ ಪ್ರಚಾರಕ್ಕೆ ತಂದವನು. ದೇವ-ದಾನವರು ಸಮುದ್ರಮಥನ ಮಾಡಿದಾಗ ಹೊರಟ ಹದಿನಾಲ್ಕು ರತ್ನಗಳಲ್ಲಿ ಇವನೂ ಒಬ್ಬ.

**ಋಷಭದೇವ :—**

ನಾಭಿರಾಜ ಮತ್ತು ಮೇರುದೇವಿಯರಿಗೆ ಋಷಭದೇವನೆಂಬ ಮಗನಾದನು. ಈ ಋಷಭದೇವನು ವಿಷ್ಣುವಿನ ಅವತಾರವೆಂದು ಭಾಗವತ ಹೇಳುತ್ತದೆ.

(ಭಾಗ. ೫–೨–೧೯ ಮತ್ತು ೪–೨).

**ಮಹಿದಾಸ :—**

ಇವನು ಐತರೇಯ ಉಪನಿಷತ್ತಿನ ದ್ರಷ್ಟಾರನು. ಇವನ ಹೆಸರು ಐತರೇಯ ಬ್ರಾಹ್ಮಣದಲ್ಲಿ ಉಲ್ಲೇಖಿತವಾಗಿದೆ. ಇವನು ವಿಷ್ಣುವಿನವತಾರವೆಂದು ಜನರು ನಂಬಿದ್ದಾರೆ.

**ಯಜ್ಞನಾಮಕ**=ವಿಷ್ಣು. (ವಿಷ್ಣು ಸಹಸ್ರನಾಮ).
**ಅಲುಮೇಲುಮಂಗಮ್ಮ**=ಪದ್ಮಾವತಿ. (ಸಂ. ೧ ಪು. ೨೪೦).

## ೧೪೯ನೆಯ ಹಾಡು

ಈ ಸುಳಾದಿಯಲ್ಲಿ ನರಸಿಂಹಾವತಾರದ ಕಥಾನಕವು ಒಳಗೊಂಡಿದ್ದು ಬೇರೆ-ಬೇರೆ ಸಂದರ್ಭಗಳ ವರ್ಣನೆಯೂ ಹೃದಯಗ್ರಾಹಿಯಾಗಿ ಮೂಡಿನಿಂತಿದೆ.

೧ **ಮೊರೆ**=ಗುಡುಗುಹಾಕು.
**ಆಟೋಪ**=ಆವೇಶ.
**ಕುಡುದಾಡೆ**=(ಕೊಂಕು ದಾಡೆ) ಡೊಂಕಾದ ಕೋರೆಹಲ್ಲು.
**ಗಹಗಹಿಸು**=ನಗು.

೨ **ಸರಕುಮಾಡು**=ಲಕ್ಷ್ಯಿಸು.

೩ **ಕಟ್ವಾಹ**=ಕೊಪ್ಪರಿಗೆ.
**ಐಸೂ**=ಎಲ್ಲ.

೪ **ಬ್ರಹ್ಮಪ್ರಳಯ** :—

ಬ್ರಹ್ಮನ ಒಂದು ನೂರುವರ್ಷದ ಕೊನೆಗೆ ಆಗುವ ಪ್ರಳಯ. (ಬ್ರಹ್ಮನ ಒಂದು ದಿವಸ ಅಥವಾ ಕಲ್ಪವೆಂದರೆ ೪೩ ಕೋಟಿ ೨೦ ಲಕ್ಷ ವರ್ಷಗಳು).

## ೧೪ಂನೆಯ ಹಾಡು

೧ ಪರಮಾತ್ಮನ ಗುಣ-ರೂಪ-ಕ್ರಿಯೆಗಳ ವೈಲಕ್ಷಣ್ಯಗಳನ್ನು ಈ ಸುಳಾದಿಯಲ್ಲಿ ದಾಸರು ವಿವರಿಸಿ ಹೇಳಿದ್ದಾರೆ.

**ಅರೂಪ**=ರೂಪವಿಲ್ಲದಿರುವುದು.
**ವ್ಯಕ್ತ**=ಪ್ರಕಟ.
**ನಿರ್ಗುಣ**=ಗುಣರಹಿತ.

ಏಕರೂಪೋಽಪಿ ಭಗವಾನ್ ಬಹುರೂಪ ಇವೇಯತೇ ।
ಅಚಿಂತ್ಯೈಶ್ವರ್ಯರೂಪತ್ವಾತ್ ಪೂರ್ಣಾನಂದೈಕರೂಪಕಃ ॥
(ಬ್ರಹ್ಮತರ್ಕ)

**ಸ್ವಗತಭೇದವಿವರ್ಜಿತ**= ಮೂಲರೂಪ ಮತ್ತು ಅವತಾರಗಳಲ್ಲಿ ಭೇದವಿಲ್ಲದವನು.

ನಿರ್ದೋಷ ಪೂರ್ಣಗುಣ ವಿಗ್ರಹ ಆತ್ಮತಂತ್ರೋ ।
ನಿಶ್ಚೇತನಾತ್ಮಕ ಶರೀರಗುಣೈಶ್ಚಹೀನಃ ॥
ಆನಂದಮಾತ್ರಕರ ಪಾದಮುಖೋದರಾದಿಃ ।
ಸರ್ವತ್ರಚ ಸ್ವಗತ ಭೇದವಿವರ್ಜಿತಾತ್ಮಾ ॥
(ಭಾ. ತಾ. ನಿ. ೧–೧೧).

೨ **ರಸನ**=ನಾಲಗೆ.

**ಕಣ್ಣಲಿ ಕೇಳ್ವ ಕಾಂಬ ಅರಿವ....ಆಸ್ವಾದಿಸುವ** :—

ಶೃಣೋತಿ ಚಕ್ಷುಷಾದೇವಃ । ಶ್ರೋತ್ರೇಣಚ ವಿಚಕ್ಷತೇ ॥
ಅಪಾಣಿರಪಿಚಾಪತ್ತೇ । ಹ್ಯಪಾದೋಽಪ್ರಜತಿದ್ರುತಂ ॥
ಏವಂ ಸರ್ವೇಂದ್ರಿಯೈಃ ಸರ್ವಂ ಕರೋತಿ ನ ಕರೋತಿಚ ॥
(ಗೀತಾತಾತ್ಪರ್ಯ).

**ಲೋಕವಿಲಕ್ಷಣ ದಿವ್ಯಕರಣ ಲೋಕಕೆ ಆಶ್ಚರ್ಯ :—**

ಸರ್ವತೋಽನ್ಯಾದೃಶೋಽತ್ಯಂತಂ ಸರ್ವಾಶ್ಚರ್ಯ ತಮಃ ಪ್ರಭುಃ ।
ನಬಭೂವೇದೃಶಃ ಕಶ್ಚಿತ್ ನ ಭವಿಷ್ಯತಿ ಕುತ್ರಚಿತ್ ॥
ಅನಾದ್ಯನಂತಕಾಲೇಷು ಮಹಾಶ್ಚರ್ಯಃ ಸಏಕಲಃ ॥

(ಛಾಂದೋಗ್ಯ ಭಾಷ್ಯ)

೩ **ಸಾರಿಷ್ಟಾ :—**

(ಸಾರ್ಷ್ಟಿ) ಮೋಕ್ಷದ ಐದನೆಯ ಸ್ವರೂಪ. ಪರಬ್ರಹ್ಮನ ಸಮಾನಾಧಿಕಾರಸ್ಥಿತಿ. ಸಾಲೋಕ್ಯ ಮುಂ. ಮೋಕ್ಷಸ್ಥಿತಿಗಳ ಬಗೆಗೆ (ಸಂ. ೧ ಪು. ೨೯೫) ನೋಡಿರಿ.

ಈ ಸಾರಿಷ್ಟಾ ಮುಕ್ತಿಸ್ಥಿತಿ ಶ್ರೀ ವಿಷ್ಣುವಿನಲ್ಲಿಯುಷ್ಟೇ ಇದೆ. (ಸಾರಿಷ್ಟಾ ಎಂಬುದು ಅಪಬ್ರಂಶರೂಪ).

೪ **ವಿಗ್ರಹ**=ರೂಪ.

**ಮೋದ ದಕ್ಷಿಣಪಕ್ಷ....ಅಪ್ರಾಕೃತ ವಿಗ್ರಹ :—**

**ಮೋದ**=ಆನಂದ.

ತಸ್ಯಪ್ರಿಯಮೇವ ಶಿರಃ ।
ಮೋದೋ ದಕ್ಷಿಣಃ ಪಕ್ಷಃ ।
ಪ್ರಮೋದ ಉತ್ತರಃ ಪಕ್ಷಃ ।
ಆನಂದ ಆತ್ಮಾ । (ತೈತ್ತಿರೀಯ ಉಪ. ಬ್ರಹ್ಮವಲ್ಲಿ).
ಪ್ರಾದುರ್ಭಾವಾ ಹರೇಃ ಸರ್ವೇನ್ಯೈವ ಪ್ರಾಕೃತದೇಹಿನಃ ।

(ಭಾ. ತಾ. ನಿ. ೨–೮೫).

೫ **ಶ್ವೇತತನುರುಹ**=( ಶುಕ್ಲಕೇಶ ). ಬಲರಾಮನಲ್ಲಿರುವ ಪರಮಾತ್ಮನ ಆವೇಶ.

**ಕೃಷ್ಣತನುರುಹ**=(ಕೃಷ್ಣಕೇಶ). ಶ್ರೀಹರಿಯ ಹೆಸರು.

ಯಥೈವ ಕೃಷ್ಣಕೇಶಸ್ಯ ಕೃಷ್ಣಸ್ಯ ಬ್ರಹ್ಮತಾಽಖಿಲಾ ॥
ದರ್ಶಿತಾಚ್ಯೈವ ಪಾರ್ಥಾಯ ನಿಸ್ಸೀಮಾಃ ಶಕ್ತಯೋಽಸ್ಯಹಿ ॥

(ಆನಂದಮಯಾಧಿಕರಣ ಅನುವ್ಯಾಖ್ಯಾನ)

**ಈಶಃ:— ತ್ವಮೇವ ಈಶೋಽಸಿ ನಚಾದಿರಂತಃ**

(ಭಾ. ತಾ. ನಿ. ೮–೨೧೪)

ಸರ್ವೇಶಃ—ಅಜಃ ಸರ್ವೇಶ್ವರಃ (ವಿಷ್ಣು ಸಹಸ್ರನಾಮಸ್ತೋತ್ರ).

## ೧೪೧ನೆಯ ಹಾಡು

ಈ ಸುಳಾದಿಯಲ್ಲಿ ದಾಸರು ತಿರುಪತಿಯ ವೆಂಕಟೇಶನನ್ನು ಪ್ರತ್ಯಕ್ಷ ಕಂಡು ಬಣ್ಣಿಸಿದ್ದಾರೆ.

೧ **ಅನಂತಾವತಾರ ನಾರಾಯಣ**=ಶ್ರೀಹರಿಗೆ ಅನಂತಾವತಾರಗಳಿವೆ. (ಭಾಗ. ೧·೩–೨೬).
**ಪರಂಧಾಮ**=ಶ್ರೀಹರಿ, ವೈಕುಂಠ.

೨ **ಅಂಗವಟ್ಟೆ**=ದೇಹ.
**ಅವ್ವೆ**=ರಮಾದೇವಿ.
**ಕೆಂಬರಳು**=ಮಾಣಿಕ್ಯ.

೩ **ದಟ್ಟೆ**=ವಲ್ಲಿ.
**ಅಸಿ**=ಖಡ್ಗ.
**ತಡಿಕೆರವು**=ದಪ್ಪನ್ನ ಕೆರವು, ಎಕ್ಕಡ.

ವಿ. ಸೂ:— ಇಲ್ಲಿ ಬೇಟೆಯಾಡಲು ಹೋದ ಶ್ರೀವೆಂಕಟೇಶನ ವರ್ಣನೆ ಇದೆ.
**ಇಂಬಿಟ್ಟು**=ಒಳಗೊಂಡು.

೪ **ಚಕ್ರಹಸ್ತ**=ಚಕ್ರವುಳ್ಳ ಹಸ್ತ.
**ಇದೇ ವೈಕುಂಠ....ಹಸ್ತ** :—

ವೆಂಕಟೇಶನ ಒಂದು ಹಸ್ತವು ಭೂಮಿಯನ್ನು ತೋರಿಸುವ ಮುದ್ರೆಯಲ್ಲಿದೆ.

೫ **ವರಾಂಬರ**=ಶ್ರೇಷ್ಠವಾದ ಬಟ್ಟೆ. (ಪೀತಾಂಬರ).
**ವರದೇಶ**=(ವರದ+ಈಶ) ವರ ಕೊಡುವವರಲ್ಲಿ ಶ್ರೇಷ್ಠ.
**ಇರವು**=ಸ್ಥಿತಿ.

## ೧೪೨ನೆಯ ಹಾಡು

ಪರಮಾತ್ಮನನ್ನು ವೈದ್ಯನೆಂದು ರೂಪಿಸಿ ದಾಸರು ಈ ಪದ್ಯವನ್ನು ಬರೆದಿದ್ದಾರೆ.

೧ **ವೇದವೇದ್ಯ**-ವೇದಗಳಿಂದ ತಿಳಿಯಲು ಸಾಧ್ಯವಾದವನು.
**ಧಾತು** :—

ಈ ದೇಹದಲ್ಲಿ ಸಪ್ತಧಾತುಗಳಿವೆಯೆಂದು ವೈದ್ಯಶಾಸ್ತ್ರ ಹೇಳುತ್ತದೆ. ಇವು ದೇಹದ ಘಟಕಗಳು.

(ರಸಾಸೃಙ್ಮಾಂಸಮೇದೋಽಸ್ಥಿ ಮಜ್ಜಾನಃ ಶುಕ್ರ ಸಂಯುತಾಃ)

**ರಸ**=ದೇಹದಲ್ಲಿಯ ಪ್ರವಾಹಿಗಳು.

**ಶಿಷ್ಟ**=ಬಲಿಷ್ಠ ಮತ್ತು ಪವಿತ್ರ.

೨ **ಸ್ವಾದು**=ರುಚಿಕಟ್ಟು.

೪ **ಧರ್ಮವೈದ್ಯ**=ಧರ್ಮನಿಷ್ಠರಿಗೆ ಔಷಧಕೊಡುವವ.

## ೧೪೩ನೆಯ ಹಾಡು

ಹರಿಯ ಸರ್ವೋತ್ತಮತ್ವವನ್ನು ಸಿದ್ಧಮಾಡುತ್ತ ದಾಸರು ಈ ಹಾಡಿನಲ್ಲಿ ಶ್ರೀಹರಿಯ ವಿವಿಧಮಹಿಮೆಗಳನ್ನು ಹೇಳಿ ಡಂಗುರ ಸಾರಿದ್ದಾರೆ.

೧ **ಅಷ್ಟೈಶ್ವರ್ಯ**=ಅನ್ನ, ಅರ್ಥ, ವೈಭವ, ಯೌವನ, ರೂಪ, ಅಹಂಕಾರ, ಸಾಹಸ, ಪ್ರಭುತ್ವ.

೨ ಇದರಲ್ಲಿ ಪ್ರಹ್ಲಾದನ ಕಥಾಸಂದರ್ಭವಿದೆ.

೩ ಇದರಲ್ಲಿ ಗಜೇಂದ್ರಮೋಕ್ಷದ ಕಥೆ ಇದೆ.

೪ ವಾಮನಾವತಾರದ ಕಥೆ ಮತ್ತು ಭಾಗೀರಥಿಯ ಉತ್ಪತ್ತಿಯ ಕಥೆಗಳಿವೆ.

೫ ಬಾಣಾಸುರನ ಕಥೆ.

೬ ಭಸ್ಮಾಸುರನ ಕಥೆ.

೭ ಸಮುದ್ರಮಥನಕಾಲದಲ್ಲಿ ಹುಟ್ಟಿದ ಹಾಲಾಹಲ ವಿಷದ ಕಥೆ ಬಂದಿದೆ.

೮ ರಾಮಾವತಾರದ ಕಥೆ.

## ೧೪೪ನೆಯ ಹಾಡು

ಈ ಉಗಾಭೋಗದಲ್ಲಿ ವೈಕುಂಠಸದೃಶವಾದ ಶ್ರೀವೆಂಕಟೇಶನ ಮಂದಿರದ ಮಹಿಮೆಯನ್ನು ದಾಸರು ಹೇಳಿದ್ದಾರೆ.

**ಕೊನೆಯ ಠಾವು**=ಜೀವನದ ಆದರ್ಶ.

**ದ್ವಾರಕೆ**=(ಸಂ. ೧ ಪು. ೨೪೪).

## ೧೪೫ನೆಯ ಹಾಡು

ಶ್ರೀಹರಿ ಭಕ್ತರ ಭಕ್ತನೆಂದು ಈ ಉಗಾಭೋಗದಲ್ಲಿ ಸೋದಾಹರಣವಾಗಿ ಹೇಳಲಾಗಿದೆ.

**ಕಮಲಜ**=ಬ್ರಹ್ಮ.

**ಉಮಾಪತಿ....ಪೊತ್ತಿಹನು** :—

ವಿಷ್ಣುವಿನ ಪಾದದಿಂದ ಹುಟ್ಟಿದ ಗಂಗೆಯನ್ನು ಶಿವನು ತಲೆಯಮೇಲೆ ಧರಿಸಿಕೊಂಡಿದ್ದಾನೆ.

**ಯಮಜ**=ಧರ್ಮರಾಜ.

**ಮಮಕರಿಸು**=ಒಪ್ಪಿಕೊಳ್ಳು.

**ರಾಜಸೂಯ** :—

ಪಾಂಡುರಾಜನ ಸೂಚನೆಯಂತೆ ನಾರದನ ಉಪದೇಶದಿಂದ ಧರ್ಮರಾಜನು ಇಂದ್ರಪ್ರಸ್ಥದಲ್ಲಿ ಮಾಡಿದ ಒಂದು ಮಹಾ ಯಜ್ಞ. (ಭಾರ. ಸಭಾ. ೩೮).

ಮಮಪ್ರಾಣಾಹಿ ಪಾಂಡವಾಃ

## ೧೪೬ನೆಯ ಹಾಡು

ಶ್ರೀಹರಿಯ ಮೋಹಕರೂಪವನ್ನು ಹೇಳುತ್ತ ದಾಸರು, ಪುರುಷರು ಪುರುಷರಿಗೆ ಮೋಹಿಸುವ ಅವನ ವೈಲಕ್ಷಣ್ಯವನ್ನು ಈ ಉಗಾಭೋಗದಲ್ಲಿ ಹೇಳಿದ್ದಾರೆ.

## ೧೪೭ನೆಯ ಹಾಡು

ಮಹಾಭಾರತದ ಕಥೆಯ ಮುಖ್ಯನಾಯಕ ಯಾರೆಂಬುದು ವಿವಾದಾಸ್ಪದವಾಗಿದ್ದರೂ ದಾಸರು ಶ್ರೀಹರಿಯೆ ಅದರ ಮುಖ್ಯ ನಾಯಕನೆಂಬುದನ್ನು ಈ ಉಗಾಭೋಗದಲ್ಲಿ ಹೇಳಿದ್ದಾರೆ.

**ಭಾರತವಲ್ಲ ಕರ್ಣನೆಂತೆಂಬರು** :—

ಆದಿಪಂಪನಲ್ಲಿ ಈ ಭಾವನೆಯನ್ನು 'ನೆನೆಯದಿರಣ್ಣ ಭಾರತದೊಳನ್ಯರ ನೀಂ ನೆನೆ ಕರ್ಣನಂ'— ಈ ನುಡಿಯಲ್ಲಿ ಕಾಣಬಹುದು.

## ೧೪೮ನೆಯ ಹಾಡು

ನಿಜವಾದ ಭಕ್ತ ಸಾವಿಗೆ ದುಃಖಿಸಬಾರದೆಂಬುದನ್ನು ಈ ಉಗಾಭೋಗದಲ್ಲಿ ಒಂದು ರೂಪಕ ಸಂಕೇತದಿಂದ ವಿವರಿಸಲಾಗಿದೆ.

**ಸಡ್ಡಿ**=ಬಿತ್ತುವ ಸಾಧನ.

**ಬಿತ್ತಿದಾತ** :—

ಇಂದ್ರನು ಬಿತ್ತಿದಾತನೆಂದು ಇಲ್ಲಿ ಹೇಳಿದರೂ ನಿಜವಾಗಿ ಶ್ರೀಹರಿಯೆ ಬಿತ್ತುವುದಕ್ಕೆ ಮೂಲಪ್ರೇರಕನು.

# ೧೩ ಪ್ರಾರ್ಥನೆ

## ೧೪೯ನೆಯ ಹಾಡು

ಈ ವಿಭಾಗದಲ್ಲಿ ದಾಸರು ಮಾಡಿದ ಪ್ರಾರ್ಥನಾಪದ್ಯಗಳು ಇವೆ.

೧ **ವೃಂದಾವನಪತಿ**=ಕೃಷ್ಣ (ಸಂ. ೧ ಪು. ೨೫೧).
**ತರುಣಿಯು....ಕಾಯ್ದೆ**=ದ್ರೌಪದಿ.
**ದುರುಳ**=ಹಿರಣ್ಯಕಶಿಪು.
**ಶಿಲೆಯನುದ್ಧರಿಸಿದೆ**=ಅಹಲ್ಯೋದ್ಧಾರ.
**ನಾರಗ**=ಅಜಮಿಳನ ಮಗ.

೨ **ಪವನಸುತ**=ಹನುಮಂತ. (ಸಂ. ೧ ಪು. ೨೦೯–೨೧೦).

## ೧೫೦ನೆಯ ಹಾಡು

೧ **ಕಡೆಹಾಯಿಸು**=ಪಾರುಮಾಡು.
**ವ್ಯಾಪಾರ**=ಕೆಲಸ, ಹೋರೆ.

೨ **ನಿನ್ನ ಮರೆತು....ಕರ್ಮ**=ಪೂರ್ವಜನ್ಮ ಕರ್ಮದ ಫಲವಾಗಿ ನಾನು ನಿನ್ನ ಮರೆಯಬಹುದು.

೪ **ಪಡಿ**=ದಿನನಿತ್ಯದ ಆಹಾರಪದಾರ್ಥ.
**ಮಾನ**=ಮರ್ಯಾದೆ.

## ೧೫೧ನೆಯ ಹಾಡು

೨ **ಎಂಟು ಗೇಣು....ಮಾಡಿಕೊಂಡು**=ದೀನನಾಗಿ.
**ಪಂಟಿಸುತ್ತ**=ಕೆಲಸವಿಲ್ಲದ ಹರಟೆಹೊಡೆಯುತ್ತ.
**ವೈಕುಂಠಪತಿ ನೀನೆ ಬಲ್ಲೆ**=ವಾಮನಾವತಾರದಲ್ಲಿ ಬಲಿಯನ್ನು ಬೇಡಿದ ದೈನ್ಯವನ್ನು ನೀನು ಚೆನ್ನಾಗಿ ಬಲ್ಲವನು.

೩ **ಲೆಕ್ಕದಲ್ಲಿ....ಅಲ್ಲದೆ**=ಹಣೆಬರೆಹದಲ್ಲಿದ್ದಷ್ಟು.
**ಕಕ್ಕುಲತೆ**=ಲೋಭ.

## ೧೫೨ನೆಯ ಹಾಡು

೧ **ದಾರಿ**=ಉಪಾಯ, ಹಂಚಿಕೆ.
**ಕಷ್ಟಕರ್ಮ**=ದುಷ್ಕರ್ಮ.
**ನುಡಿ**=ಆಡಿಕೊಳ್ಳು.

೩ **ನೂತನವೇಕಿನ್ನು**=ನೀನು ಇದನ್ನು ಅರಿಯದವನೆ ?
**ಸೂರ್ಯನ ಮಂಡಲ ರೀತಿಯಾದೆನು** = ಜನನ ಮರಣ ಚಕ್ರದಲ್ಲಿ ಸಿಕ್ಕು ಬಳಲಿದೆನು.

## ೧೫೩ನೆಯ ಹಾಡು

ಈ ಹಾಡಿನಲ್ಲಿ ದಾಸರು ಭಕ್ತನು ಮಾಡಬೇಕಾದ ನಿತ್ಯಾಚಾರಗಳನ್ನು ಪರ್ಯಾಯವಾಗಿ ವಿವರಿಸಿದ್ದಾರೆ.

೧ **ತಿಮ್ಮಪ್ಪ**=ವೆಂಕಟೇಶ.

೨ **ಹುಟ್ಟುಮೊದಲು**=ಹುಟ್ಟಿದಂದಿನಿಂದ.

೪ **ಆಗ್ರೋದಕ**=ಮಾಸಲುನೀರು.

೭ **ಏಕಾರತಿ**=ಮೂರು ಬತ್ತಿಗಳನ್ನು ತುಪ್ಪದಲ್ಲಿ ಅದ್ದಿ ನೈವೇದ್ಯಕ್ಕಿಂತ ಮೊದಲು ಮಾಡುವ ಆರತಿ (ಸಂ. ೧ ಪು. ೨೮೫).

೮ **ಪಂಚಭಕ್ಷ್ಯ**=ಹೂರಿಗೆ, ಗಾರಿಗೆ, ಮಂಡಿಗೆ, ಕಜ್ಜಾಯ, ಅತಿರಸ.

೧೦ **ಹರಿದಿನ**=ಏಕಾದಶಿ.

ವಿ. ಸೂ:— ಮೇಲಿನ ನುಡಿಗಳಲ್ಲಿ ಹೇಳಿದ ದೇವರಿಗೆ ಸಲ್ಲಿಸಬೇಕಾದ ೧೬ ಬಗೆಯ ಪೂಜಾವಿಧಾನಗಳನ್ನು ಕೆಳಗಿನ ಶ್ಲೋಕದಲ್ಲಿ ವರ್ಣಿಸಲಾಗಿದೆ.

ಆಸನಂ ಸ್ವಾಗತಂ ಪಾದ್ಯಂ ಅರ್ಘ್ಯಂ ಆಚಮನೀಯಕಮ್ ।
ಮಧುಪರ್ಕಂ ಆಚಮಸ್ಸ್ನಾನಂ ವಸನಾಭರಣಾನಿಚ ॥
ಗಂಧಪುಷ್ಪೇ ಧೂಪದೀಪೌ ನೈವೇದ್ಯಂ ವಂದನಂ ತಥಾ ॥

೧೧ **ಔಪಾಸನೆ**=ಅಗ್ನಿಕಾರ್ಯ.

## ೧೫೪ನೆಯ ಹಾಡು

೧ **ಎಂಭತ್ತುನಾಲ್ಕುಲಕ್ಷ ಯೋನಿ**=(ಸಂ. ೧ ಪು. ೨೮೧).
**ಸುಕೃತ ದುಷ್ಕೃತ**=ಪುಣ್ಯ ಪಾಪ.
**ತಾಪತ್ರಯ**=ಮೂರುಬಗೆಯ ದುಃಖಗಳು.
(ಆಧಿಭೌತಿಕ, ಆಧಿದೈವಿಕ, ಆಧ್ಯಾತ್ಮಿಕ).
**ಇಪ್ಪತ್ತೊಂದುಕೋಟಿ ನಾಯಕ ನರಕ** = ೨೧ ಬೇರೆಬೇರೆ ಬಗೆಯ ಪ್ರಮುಖ ನರಕಗಳು.

೧. ತಾಮಿಸ್ರ, ೨. ಅಂಧತಾಮಿಸ್ರ, ೩. ರೌರವ, ೪. ಮಹಾರೌರವ, ೫. ಕುಂಭೀಪಾಕ, ೬. ಕಾಲಸೂತ್ರ, ೭. ಅಸಿಪತ್ರವನ, ೮. ಸೂಕರಮುಖ, ೯. ಅಂಧಕೂಪ, ೧೦. ಕ್ರಿಮಿಭೋಜನ, ೧೧. ಸಂದಂಶ, ೧೨. ತಪ್ತಸೂರ್ಮಿ, ೧೩. ವಜ್ರಕಂಟಕ, ೧೪. ಶಾಲ್ಮಲೀ, ೧೫. ಪೂಯೋದ, ೧೬. ಪ್ರಾಣರೋಧ, ೧೭. ವಿಶಸನ, ೧೮. ಲಾಲಾಭಕ್ಷ, ೧೯. ಸಾರಮೇಯಾದ, ೨೦. ಅವೀಚಿಃ, ೨೧. ಅಯಃಪಾನಂ. ಇವಲ್ಲದೆ ಕೆಳಗಿನ ಏಳು ಬೇರೆಬಗೆಯ ನರಕಗಳು ಬಣ್ಣಿಸಲ್ಪಟ್ಟಿವೆ.

೧. ಕ್ಷಾರಕರ್ದಮ, ೨. ರಕ್ಷೋಗಣಭೋಜನ, ೩. ಶೂಲಪ್ರೋತಾ, ೪. ದಂದಶೂಕ, ೫. ಅವಟನಿರೋಧನ, ೬. ಪರ್ಯಾವರ್ತನ, ೭. ಸೂಚಿಮುಖ. (ಭಾಗ. ೫–೨೬–೭).

**ಕಾಲನವರು**=ಯಮದೂತರು.
**ಮಾನಿಸ**=ಮನುಷ್ಯ.
**ದೊರೆಕೊಂಬೆ**=ಪಡೆಯುತ್ತೇನೆ.

೨ **ಐದಾವೆ**=ಇರುತ್ತಿವೆ.

೩ **ಮಾಧವಿ**=ಗೋಪಿಕಾಸ್ತ್ರೀಯರು.
**ಸಂತೈಸು**=ಸರಿಯಾಗಿ ನಡಸು.
**ಸಂತವಿಡು**=ಸರಿಯಾಗಿರಿಸು.
**ಹಂಸ**=ಪರಮಾತ್ಮ.
**ಹಂಸಿ**=ಮುಕ್ತಿಯೋಗ್ಯ ಜೀವ.

೪ **ಅರಿವರೆ**=ವಿಚಾರಮಾಡಿ ನೋಡಿದರೆ.

ಎಳೆ=ಚಿಕ್ಕ.

೫ **ದುಷ್ಟದೈವ**=ಕ್ಷುದ್ರ ದೇವತೆಗಳು.

**ಮಂದಿ**=ಗುಂಪು, ಸಮೂಹ.

**ಚಿರವಾದಿ**=ತಾರ್ಕಿಕರು.

**ಕಾಣ**=ಕಾಣಲಾರನು.

## ೧೫೫ನೆಯ ಹಾಡು

ಲೌಕಿಕವನ್ನೆ ನಂಬಿ ನಡೆದರೆ ಅದರಿಂದ ಎಂತಹ ಆಘಾತಗಳನ್ನು ಸಹಿಸ-ಬೇಕಾಗುತ್ತದೆ ಎಂಬ ಮಾತನ್ನು ಈ ಹಾಡಿನಲ್ಲಿ ದಾಸರು ಸ್ವಾನುಭವದಿಂದ ಹೇಳಿ-ದಂತಿದೆ.

೪ **ಥಗೆ**=ನೀರಡಿಕೆ.

## ೧೫೬ನೆಯ ಹಾಡು

೧ **ಅನುವು**=ಎಡೆ, ಅವಕಾಶ.

**ಕಡೆ**=ಕೊನೆ.

**ಡಿಂಗರಿಗ**=ಸೇವಕ.

೨ **ದನುಜ**=ರಾಕ್ಷಸ.

೩ **ಕೌರವ**=ಕಾಗೆ.

**ಅನಂತ**=ಆಕಾಶ.

**ದಾಮ**=ಹಗ್ಗ.

**ಸೃಷ್ಟಿ....ದಾಮದಲ**-(ಭಾಗ. ೧೦-೯).

**ಯಮಳಾರ್ಜುನ**-ಜೋಡುಮತ್ತಿಯ ಗಿಡ.

ಕುಬೇರನ ಮಕ್ಕಳಾದ ನಳಕೂಬರ ಮತ್ತು ಮಣಿಗ್ರೀವರು ಸೆರೆಕುಡಿದು ಮತ್ತರಾಗಿ ಗಂಗೆಯಲ್ಲಿ ಸ್ನಾನಮಾಡುವಾಗ ನಾರದನು ಬಂದನು. ಅವರನ್ನು ನೋಡಿ ಸಿಟ್ಟಿಗೆದ್ದ ನಾರದನು ಶೀಘ್ರ ಮತ್ತಿಗಿಡಗಳಾಗಿ ಹುಟ್ಟಿರೆಂದು ಶಾಪಕೊಟ್ಟನು. ಶ್ರೀಕೃಷ್ಣನು ಇವರನ್ನು ಉದ್ಧಾರಮಾಡಿದನು. (ಭಾಗ. ೧೦-೯-೧೦).

೫ **ಪುಂಡರೀಕ ಮನಃಪ್ರಿಯ**-(ಸಂ. ೧ ಪು. ೨೬೬).

## ೧೫೭ನೆಯ ಹಾಡು

೧ **ಬಣಗು**=ಕೀಳು.

೩ **ಕುಂದದೆ**=ಪೂರ್ಣವಾಗಿ.

೪ **ವಾಸವ**=ಇಂದ್ರ.

೫ **ಬೇಲೂರ**=(ಸಂ. ೧ ಪು. ೨೩೬).

## ೧೫೮ನೆಯ ಹಾಡು

**ಕರ**=ಹೆಚ್ಚು.

**ಗೂಡು**=ದೇಹ.

**ಸ್ಥೂಲಸೂಕ್ಷ್ಮರೂಪವಾದೆ**= ಸ್ಥೂಲವಿದ್ದವನು ಸೂಕ್ಷ್ಮನಾಗಿ ಬಂದೆ.

## ೧೫೯ನೆಯ ಹಾಡು

**ಎರಗು**=ಮೆಚ್ಚು.

**ಚಿಗಿಚಿಗಿದಾಡು**=ಆತುರದಿಂದ ಹಾರಾಡು.

**ದುರ್ನ್ಯಾಯಯುಕ್ತಿ**=ಕುತರ್ಕ, ಹುಸಿವೇದಾಂತ.

## ೧೬೦ನೆಯ ಹಾಡು

**ಅನ್ಯತ್ರ**=ಬೇರೆಯವರನ್ನು.

**ಕಷ್ಟಬೇಡ**=ತೊಂದರೆಕೊಡಬೇಡ.

## ೧೬೧ನೆಯ ಹಾಡು

ಕೆರೆಯ ನೀರನು ಕೆರೆಗೆ ಚೆಲ್ಲುತ ಎಂಬ ದೃಷ್ಟಾಂತದಿಂದ ದಾಸರು ಪರಮಾತ್ಮನು ಕೊಟ್ಟದ್ದನ್ನು ಪರಮಾತ್ಮನಿಗೆ ಅರ್ಪಿಸಿ ಸುಖವನ್ನು ಪಡೆಯಬೇಕೆಂಬ ಸುಲಭ ದಾರಿಯನ್ನು ತಿಳಿಸಿದ್ದಾರೆ.

## ೧೬೨ನೆಯ ಹಾಡು

**ಎಲ್ಲಾ ಒಂದೇ ಎಂಬ**=ಜೀವ ಮತ್ತು ಪರಮಾತ್ಮನು ಒಂದೇ ಎಂಬ.

**ದಾಡೆ**=ದವಡೆ.

**ಕಲ್ಲನಾರಿಯ ಮಾಡಿದ**=ಅಹಲ್ಯೋದ್ಧಾರಮಾಡಿದ.

**ಪಲ್ಲವ**=ಚಿಗುರು.

### ೧೬೩ನೆಯ ಹಾಡು

**ಒಳಗೆಮಾಡಿ**=ಮರೆಮಾಡಿ.

ವಿ. ಸೂ:—ಕೆಡುಕಾದುದೆಲ್ಲ ಹೊಲೆ ಎಂಬ ಮಾತನ್ನು ಈ ಉಗಾಭೋಗದಲ್ಲಿ ವಿವರಿಸಿದ್ದಾರೆ.

### ೧೬೪ನೆಯ ಹಾಡು

ದಾಸರು ಸಲುಗೆಯ ಮಾತಿನಲ್ಲಿ—ಹಿಂದಿನ ಭಕ್ತರಿಗೆ ನೀನು ಒಲಿದದ್ದೇಕೆ, ಇಂದು ನೀನು ನನಗೇಕೆ ಒಲಿಯೆ?—ಎಂಬುದನ್ನು ವಿನೋದವಾಗಿ ಹೇಳಿದ್ದಾರೆ.

### ೧೬೫ನೆಯ ಹಾಡು

ಸರ್ವಶಕ್ತಿಯೂ ನಿನ್ನಲ್ಲಿದೆಯೆಂದು, ಸರ್ವವೈಭವವೂ ನಿನ್ನಲ್ಲಿಯೆ ಇದೆ-ಯೆಂದು ದಾಸರು ಈ ಉಗಾಭೋಗದಲ್ಲಿ ಹೇಳಿದ್ದಾರೆ.

## ೧೮ ಮಂಗಳ

### ೧೬೬ನೆಯ ಹಾಡು

೧ ಈ ನುಡಿಯಲ್ಲಿ ಮಹಾಭಾರತದ ಸಭಾಪರ್ವದಲ್ಲಿಯ ದ್ರೌಪದಿಯ ವಸ್ತ್ರಾ-ಪಹರಣದ ಪ್ರಸಂಗದ ವಿವರಣೆ ಇದೆ.

೨ ಈ ನುಡಿಯಲ್ಲಿ ಮಹಾಭಾರತದ ಉದ್ಯೋಗಪರ್ವದಲ್ಲಿಯ ಶ್ರೀಕೃಷ್ಣ-ಸಂಧಾನ ಪ್ರಸಂಗದ ವಿವರಣೆ ಇದೆ.

**ವಿಶ್ವರೂಪ**=(ಭ. ಗೀ. ಅ. ೧೧).

೩ ಇವರಲ್ಲಿ ಸಭಾಪರ್ವದ ರಾಜಸೂಯಯಾಗದ ಸಂದರ್ಭದಲ್ಲಿ ನಡೆದ ಶಿಶುಪಾಲವಧೆಯ ಕಥೆಯ ವಿವರಣೆ ಇದೆ.

**ಓಲಗ**=ಅಗ್ರಪೂಜೆಗಾಗಿ ಕೂಡಿದ ವಿಚಾರಸಭೆ.

೪ ಇದರಲ್ಲಿ ಭಾಗವತ ದಶಮಸ್ಕಂಧದಲ್ಲಿ ಬರುವ ಅನಿರುದ್ಧಬಂಧವಿಮೋಚನೆಯನ್ನೂ, ಬಾಣಾಸುರನ ಅಪಜಯ ವಿಚಾರವನ್ನೂ ಹೇಳಲಾಗಿದೆ.

**ಶೋಣಿತಪುರ**=ಬಾಣಾಸುರನ ರಾಜಧಾನಿ. (ಭಾಗ. ೧೦–೬೨).

**ಬಾಣಾಸುರ :—**

ಇವನು ಬಲಿಚಕ್ರವರ್ತಿಯ ಹಿರಿಯ ಮಗ. ಮಹಾ ಶಿವಭಕ್ತ. ಶಿವನನ್ನು ತಾಂಡವದಿಂದ ಮೆಚ್ಚಿಸಿ ೧೦೦೦ ತೋಳುಗಳನ್ನು ಪಡೆದನು. ಇವನ ಮಗಳ ಹೆಸರು ಉಷೆ. ಇವಳು ಅನಿರುದ್ಧನನ್ನು ಪ್ರೀತಿಸುತ್ತಿದ್ದುದರಿಂದ, ಉಷೆಯ ಗೆಳತಿ ಚಿತ್ರರೇಖೆ ಅವನನ್ನು ಮಾಯೆಯಿಂದ ಶೋಣಿತಪುರಕ್ಕೆ ಎತ್ತಿಕೊಂಡು ಬರುವಳು. ಉಷೆಗೂ ಅನಿರುದ್ಧನಿಗೂ ಗಾಂಧರ್ವವಿವಾಹ ಗುಪ್ತವಾಗಿ ನಡೆಯುವುದು. ಈ ವಿಷಯ ತಿಳಿದಾಗ ಬಾಣಾಸುರನು ಸಿಟ್ಟಿನಿಂದ ಅನಿರುದ್ಧನನ್ನು ಸೆರೆಯಲ್ಲಿಟ್ಟನು. ಶ್ರೀಕೃಷ್ಣನಿಗೆ ಇದು ಗೊತ್ತಾಗಲು ಶೋಣಿತಪುರಕ್ಕೆ ದಂಡೆತ್ತಿಬಂದು, ಬಾಣಾಸುರನನ್ನು ಸೋಲಿಸಿ ಅವನಿಗೆ ಎರಡೇ ತೋಳುಗಳುಳಿಯುವಂತೆ ಮಾಡಿದನು. (ಕನಕದಾಸರ ಮೋಹನತರಂಗಿಣಿಯಲ್ಲಿ ಇದೇ ಕಥೆ ಬಂದಿದೆ).

**ಮೊಮ್ಮ**=ಅನಿರುದ್ಧ. (ಪ್ರದ್ಯುಮ್ನನ ಮಗ).

**ಉರಗ**=ಶೇಷ.

**ಆತ್ಮಭೂ**=ಬ್ರಹ್ಮ.

ಈ ನುಡಿಯಲ್ಲಿ ಕರ್ಣನ ಸರ್ಪಾಸ್ತ್ರಕ್ಕೆ ಅರ್ಜುನನು ಗುರಿಯಾಗದಂತೆ ಶ್ರೀಕೃಷ್ಣನು ಕಾಯ್ದ ಕಥೆ ಬಂದಿದೆ.

**ಸುರಗಿರಿ**=ಮೇರು.

**ತರಣಿನಂದನ**=ಕರ್ಣ.

**ಉರಗಬಾಣ**=ಸರ್ಪಾಸ್ತ್ರ.

**ಪಾಂಡುನಂದನ**=ಅರ್ಜುನ.

## ೧೬೭ನೆಯ ಹಾಡು

೧ **ಅಂಜನಿಗರ್ಭಸಂಜಾತ**=(ಸಂ. ೧ ಪು. ೨೦೧).

**ರಂಜಿತ**=ಮೋಹಕ.

**ಸಂಜೀವರಾಯ**=ಹನುಮಂತದೇವರು.

ವಿ. ಸೂ:—ಈ ಹೆಸರು ದ್ವೈತಪರಂಪರೆಯಲ್ಲಿಯೆ ಇದೆ.

೨ **ವನಧಿನಿರೋಧಿ**=ಸಮುದ್ರವನ್ನು ಸೇತುವಿನಿಂದ ಬಂಧಿಸಿದವ.

**ಹನುಮವಿಲಾಸಗೆ :—**

ಅರ್ಥವು ಸ್ಪಷ್ಟವಾಗಿಲ್ಲ. ಲಂಕಾಪಟ್ಟಣದಲ್ಲಿ ಹನುಮಂತನು ತೋರಿಸಿದ ವಿಶಿಷ್ಟಲೀಲೆಗಳನ್ನು ಕುರಿತು ಈ ಮಾತನ್ನು ಹೇಳಿರಬಹುದಾಗಿದೆ.

---

# ಪರಿಶಿಷ್ಟ ೨

## ಹಾಡುಗಳ ಅಕಾರಾದಿ ಸೂಚಿ

# ಪರಿಶಿಷ್ಟ ೩

೧ ಪ್ರಮುಖಪದ ಸೂಚಿ

೨ ಸಂಗೀತವಿಚಾರ

೩ ಯಾತ್ರಾಸ್ಥಳಗಳು ಮತ್ತು ನದಿಗಳು

# ಪ್ರಮುಖಪದ ಸೂಚಿ

# ೨ ಸಂಗೀತವಿಚಾರ

## ಈ ಸಂಪುಟದಲ್ಲಿ ಕಾಣುವ ಹೆಚ್ಚಿನ ರಾಗ ಮತ್ತು ತಾಳಗಳು

| ಅ. ನಂ. | ರಾಗ | ಪುಟ |
| --- | --- | --- |
| ೧. | ಗೌಳ | ೯೦ |
| ೨. | ನವಿುಚಿ | ೧೭೮ |
| ೩. | ಪಾಡಿ | ೧೯೮ |
| ೪. | ಪುನ್ನಾಗವರಾಳಿ | ೧೩೫ |
| ೫. | ಬೇಗಡೆ | ೪೦ |
| ೬. | ಮಾರವಿ | ೩೬ |
| ೭. | ಮಾಳಿ | ೧೪೬ |
| ೮. | ಮೇಘಮಾಲಾ | ೫೫ |
| ೯. | ಮೋಹನಕಲ್ಯಾಣಿ | ೧೩೬ |

### ಸಂಗೀತಕೋಶ

ಆಲಾಪಿಸು ೩೧.
ನಾಟ್ಯವಾಡು ೫೭.
ಶಾರೀರ ೮೨.
ಮಂದರ, ಮಧ್ಯಮ, ತಾರಕ, ಮೋಹನ ೧೦೧.
ತಾಳ-ಮೇಳ ೧೦೧.

## ಈ ಸಂಪುಟದಲ್ಲಿ ಹೊಸತಾಗಿ ಬಂದ ಊರುಗಳು

## ನದಿಗಳು



## ವಿಶೇಷ ಸೂಚನೆ

**ವಿಮಲಕಾಪುರವು** (ಸಂ.ಪು. ೧೬೮) ಟಿಪ್ಪಣಿ (ಪು. ೩೧೧) ದ್ರೋಣಾಚಲಮ್ಮನ್ನು (ದ್ರೋಣಾಚಲಮ್ ಗುಂಟೂರು ಮಾರ್ಗ) ಬಿಟ್ಟಕೂಡಲೆ ಬರುವ ಮೊದಲನೆಯ ನಿಲ್ದಾಣ. ಇಲ್ಲಿಯ ನರಸಿಂಹದೇವರ ಮೂರ್ತಿ ಚೆಲುವಿಕೆಗೆ ಒಳ್ಳೆ ಹೆಸರಾಗಿದೆ. ಆ ಊರಲ್ಲಿ ಯಾರಾದರೂ ಮೈದುಂಬಿಕೊಂಡು ಒಳ್ಳೆ ದುಂಡುದುಂಡಗಾಗಿ ಕಾಣತೊಡಗಿದರೆ, ಮಲಕಾಪುರದ ನರಸಿಂಹನಾಗಿದ್ದಿಯೆಂದು ಚೇಷ್ಟೆಮಾಡುತ್ತಾರೆಂದು ಕೇಳಿದ್ದೇವೆ. ದಾಸರು ಮಲಕಾಪುರವೆಂಬುದನ್ನು ವಿಮಲಕಾಪುರವೆಂದು ಬದಲಿಸಿದ್ದಾರೆ.

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೧೬ | ತರಲಪ್ಪುವ | ತರದಲಪ್ಪುವ |
| ೨ | ೧೩ | ವರಟಕಿಟ್ಟ | ವರಪುಟಕಿಟ್ಟ |
| ೮ | ೧೫ | ತ್ರಿವಿಡಿ | ತ್ರಿವಿಡೆ |
| ೨೦ | ೧೭ | ಕರಣ | ಕರುಣ |
| ೪೦ | ೧೮ | ೧ | ೨ |
| ೪೭ | ೧೮ | ನಿರಜೆ | ನೀರಜೆ |
| ೬೦ | ೧೦ | ಪಾಂಡಪಕ್ಷ | ಪಾಂಡವಪಕ್ಷ |
| ೭೦ | ೩ | ವ್ಯಾಸಮನಿ | ವ್ಯಾಸಮುನಿ |
| ೭೮ | ೧ | ತಾಳ– | ತಾಳ-ರೂಪಕ |
| ೭೮ | ೧೯ | ಒಳಗಾಗಿದೆ | ಒಳಗಾಗಿವೆ |
| ೮೩ | ೧೦ | ತಾಳ– | ತಾಳ ಅಟ |
| ೯೧ | ೧೮ | ಶರಿರ | ಶರೀರ |
| ೯೬ | ೧ | ಶಾಪಿ | ಕಾಪಿ |
| ೧೧೨ | ೧೮ | ದೂರ್ವಾಸ | ದುರ್ವಾಸ |
| ೧೧೯ | ೧೩ | ಅನೆಯಂತೆ | ಆನೆಯಂತೆ |
| ೧೪೧ | ೫ | ಪ್ರಕಟಗ್ರಂಥಗಳಿಲ್ಲೆ | ಪ್ರಕಟಗ್ರಂಥಗಳಿಲ್ಲ |
| ೧೭೪ | ೨೪ | ಶ್ವೈತ | ಶ್ವೇತ |
| ೧೭೬ | ೧೩-೧೪ | ಇದೇ | ಇದೆ. |
| ೧೮೬ | ೨ | ಗುರುತಗಳಿಯೆ | ಗುರುತುಗಳಿಯೆ |
| ೧೯೦ | ೨೧ | (ಅ P) | (ಆ P) |
| ೧೯೩ | ೨೦ | (–೧೦) | (೧–೧೦) |

---

## ವಿದ್ವಾಂಸರ ಸಲಹಾ ಮಂಡಳ

ಶ್ರೀ. ಪಂಡಿತ ಶ್ರೀನಿವಾಸಾಚಾರ್ಯ ಜಾಲಿಹಾಳ
,, ,, ವೆಂಕಣ್ಣಾಚಾರ್ಯ ಮಳಗಿ
,, ,, ಮೂರ್ತಾಚಾರ್ಯ ರಾಯಚೂರ
,, ವಿದ್ಯಾರತ್ನ ರಾಘವೇಂದ್ರಾಚಾರ್ಯ ಪಂಚಮುಖಿ
,, ಪಂಡಿತ ಗುರುರಾಜಾಚಾರ್ಯ ಪಾಂಡುರಂಗಿ
,, ,, ಶ್ರೀ ಸೇತುರಾಮಾಚಾರ್ಯ ಆದ್ಯ
,, ,, ಕೆ. ಟಿ. ಪಾಂಡುರಂಗಿ, M.A.

## ಉತ್ಸವ ಮಂಡಲದ ಅಧಿಕಾರಿವರ್ಗ

### ಅಧ್ಯಕ್ಷರು

ಶ್ರೀ. ಅನಂತರಾವ ಅಸುಂಡಿ,
ನಿವೃತ್ತ ಜಿಲ್ಲಾ ನ್ಯಾಯಾಧೀಶರು, ವಿಜಾಪೂರ

### ಉಪಾಧ್ಯಕ್ಷರು

ಶ್ರೀ. ಗೋರೆಬಾಳ ಹಣಮಂತರಾಯರು,
ವರದೇಂದ್ರ ಸಾಹಿತ್ಯಮಂಡಲ, ಲಿಂಗಸುಗೂರು
,, ಸುಬೋಧ ರಾಮರಾಯರು,
ಸಂಪಾದಕರು, "ಸುಬೋಧ", ಬೆಂಗಳೂರು
,, ಕೋಲಾರ ರಾಮರಾಯರು, M.A., LL.B. ಬಳ್ಳಾರಿ
,, ಬಿ. ಅಶ್ವತ್ಥರಾವ, ಜಿಲ್ಲಾ ನ್ಯಾಯಾಧೀಶರು, ಬಳ್ಳಾರಿ
,, ಬಿ. ಎ. ದೇಸಾಯಿ, (ದೇಸಾಯಿ ಕಂಪನಿ) ಹುಬ್ಬಳ್ಳಿ

### ಕೋಶಾಧ್ಯಕ್ಷರು

ಡಾ. ಶಾಂತರಾವ ಕಮಲಾಪೂರ, M.B.B.S. ಧಾರವಾಡ

### ಕಾರ್ಯಾಧ್ಯಕ್ಷರು

ಶ್ರೀ. ಹ. ರಾ. ಪುರೋಹಿತ, M.A., ಹುಬ್ಬಳ್ಳಿ

### ಕಾರ್ಯದರ್ಶಿಗಳು

ಶ್ರೀ. ಟುರ್ಲಿ ಬಿಂದುಮಾಧವ
,, ಕೆ. ಜಿ. ಹಲಸಗಿ, B.A., B.T.
,, ಹುಚ್ಚರಾವ ಬೆಂಗೇರಿ, M.A., B.T.



PRATIBHA P. DHARWAR